# ಪ್ರಗತಿಶೀಲ ಕಥನ ಸಾಹಿತ್ಯದಲ್ಲಿ ಸ್ವಾತಂತ್ರ್ಯ ಹೋರಾಟದ ನೆಲೆಗಳು

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು
ಬಸವರಾಜ ಯಲ್ಲಪ್ಪ ಹಲಕುರ್ಕಿ

ಮಾರ್ಗದರ್ಶಕರು
ಡಾ. ವೈ.ಎಂ.ಭಜಂತ್ರಿ
ಮುಖ್ಯಸ್ಥರು, ಕನ್ನಡ ವಿಭಾಗ
ಸರ್ಕಾರಿ ಪ್ರಥಮ ದರ್ಜೆ ಮಹಾವಿದ್ಯಾಲಯ ಹುಬ್ಬಳ್ಳಿ

ಮಾನ್ಯತಾ ಸಂಸ್ಥೆ
ಜೆ. ಎಸ್. ಎಸ್. ಡಾ. ಡಿ. ವೀರೇಂದ್ರ ಹೆಗ್ಗಡೆ ಸಂಶೋಧನಾ ಕೇಂದ್ರ.
ವಿದ್ಯಾಗಿರಿ. ಧಾರವಾಡ-೫೮೦೦೦೪



ಭಾಷಾನಿಕಾಯ
ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ೫೮೩ ೨೭೬
೨೦೧೮

# ಪ್ರಗತಿಶೀಲ ಕಥನ ಸಾಹಿತ್ಯದಲ್ಲಿ ಸ್ವಾತಂತ್ರ್ಯ ಹೋರಾಟದ ನೆಲೆಗಳು

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ



**ಸಂಶೋಧಕರು**
ಬಸವರಾಜ ಯಲ್ಲಪ್ಪ ಹಲಕುರ್ಕಿ

**ಮಾರ್ಗದರ್ಶಕರು**
ಡಾ. ವೈ.ಎಂ.ಭಜಂತ್ರಿ
ಮುಖ್ಯಸ್ಥರು, ಕನ್ನಡ ವಿಭಾಗ
ಸರ್ಕಾರಿ ಪ್ರಥಮ ದರ್ಜೆ ಮಹಾವಿದ್ಯಾಲಯ ಹುಬ್ಬಳ್ಳಿ

**ಮಾನ್ಯತಾ ಸಂಸ್ಥೆ**
ಜೆ. ಎಸ್. ಎಸ್. ಡಾ. ಡಿ. ವೀರೇಂದ್ರ ಹೆಗ್ಗಡೆ ಸಂಶೋಧನಾ ಕೇಂದ್ರ,
ವಿದ್ಯಾಗಿರಿ, ಧಾರವಾಡ-೫೮೦೦೦೪




**ಭಾಷಾ ನಿಕಾಯ**

ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ
ಹಂಪಿ - ೫೮೩ ೨೭೬
೨೦೧೮

# ಮಾರ್ಗದರ್ಶಕರ ಪ್ರಮಾಣ ಪತ್ರ

**'ಪ್ರಗತಿಶೀಲ ಕಥನ ಸಾಹಿತ್ಯದಲ್ಲಿ ಸ್ವಾತಂತ್ರ್ಯ ಹೋರಾಟದ ನೆಲೆಗಳು'** ಎಂಬ ವಿಷಯದ ಕುರಿತಾದ ಪಿಎಚ್.ಡಿ. ಸಂಶೋಧನಾ ಮಹಾಪ್ರಬಂಧವನ್ನು **ಬಸವರಾಜ ಯಲ್ಲಪ್ಪ ಹಲಕುರ್ಕಿ** ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಸಂಶೋಧನಾ ಮಹಾಪ್ರಬಂಧವು ಇದಕ್ಕೂ ಮೊದಲು ಯಾವುದೇ ಪದವಿಗಾಗಿ ಎಲ್ಲಿಯೂ ಸಾದರಪಡಿಸಿಲ್ಲ ಮತ್ತು ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲ್ಪಟ್ಟಿಲ್ಲ. ಈ ಪೂರ್ವದಲ್ಲಿ ಪಸ್ತುತ ಮಹಾಪ್ರಬಂಧವು ಇಡಿಯಾಗಿ ಇಲ್ಲವೆ ಬಿಡಿಯಾಗಿ ಪ್ರಕಟವಾಗಿಲ್ಲವೆಂದು ಪ್ರಮಾಣೀಕರಿಸಿದ್ದೇನೆ.

ಸ್ಥಳ : ಧಾರವಾಡ

ದಿನಾಂಕ: 26-2-2018

**ಡಾ. ವೈ.ಎಂ.ಭಜಂತ್ರಿ**

ಮಾರ್ಗದರ್ಶಕರು

ಜೆ. ಎಸ್. ಎಸ್. ಡಾ. ಡಿ. ವೀರೇಂದ್ರ ಹೆಗ್ಗಡೆ

ಸಂಶೋಧನಾ ಕೇಂದ್ರ,

ವಿದ್ಯಾಗಿರಿ, ಧಾರವಾಡ-೫೮೦೦೦೪

# ಸಂಶೋಧಕರ ಘೋಷಣಾ ಪ್ರಮಾಣ ಪತ್ರ

**'ಪ್ರಗತಿಶೀಲ ಕಥನ ಸಾಹಿತ್ಯದಲ್ಲಿ ಸ್ವಾತಂತ್ರ್ಯ ಹೋರಾಟದ ನೆಲೆಗಳು'** ಎಂಬ ವಿಷಯದ ಕುರಿತಾದ ಪಿಎಚ್.ಡಿ. ಸಂಶೋಧನಾ ಮಹಾಪ್ರಬಂಧವನ್ನು ನಾನು **ಡಾ. ವೈ.ಎಂ.ಭಜಂತ್ರಿ** ಮುಖ್ಯಸ್ಥರು, ಕನ್ನಡ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಮಹಾವಿದ್ಯಾಲಯ, ಹುಬ್ಬಳ್ಳಿ. ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಈ ಸಂಶೋಧನಾ ಮಹಾಪ್ರಬಂಧವು ಇದಕ್ಕೂ ಮೊದಲು ಯಾವುದೇ ಪದವಿಗಾಗಿ ಎಲ್ಲಿಯೂ ಸಾದರಪಡಿಸಿಲ್ಲ ಮತ್ತು ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲ್ಪಟ್ಟಿಲ್ಲ. ಈ ಪೂರ್ವದಲ್ಲಿ ಪಸ್ತುತ ಮಹಾಪ್ರಬಂಧವು ಇಡಿಯಾಗಿ ಇಲ್ಲವೆ ಬಿಡಿಯಾಗಿ ಪ್ರಕಟವಾಗಿಲ್ಲವೆಂದು ಪ್ರಮಾಣೀಕರಿಸಿದ್ದೇನೆ.

ಸ್ಥಳ : ಧಾರವಾಡ

ದಿನಾಂಕ: ೧೨-೦೭-೨೦೧೮

**ಬಸವರಾಜ ಯಲ್ಲಪ್ಪ ಹಲಕುರ್ಕಿ**

ಸಂಶೋಧಕರು

ಜೆ. ಎಸ್. ಎಸ್. ಡಾ. ಡಿ. ವೀರೇಂದ್ರ ಹೆಗ್ಗಡೆ

ಸಂಶೋಧನಾ ಕೇಂದ್ರ,

ವಿದ್ಯಾಗಿರಿ, ಧಾರವಾಡ-೫೮೦೦೦೪

# ಪರಿವಿಡಿ

ಅಧ್ಯಾಯ-೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

## ೧.೧. ಪ್ರಸ್ತಾವನೆ

ಮುದ್ದಣ್ಣನ ರಾಮಾಶ್ವಮೇಧ ಹೊಸಗನ್ನಡ ಅರುಣೋದಯದ ಮುನ್ಸೂಚನೆ ನೀಡಿತು. ಈ ಮುನ್ಸೂಚನೆಗಳಿಗೆ ಮುಂಬಾಗಿಲು ತೆರೆದದ್ದು ಬಿಎಂಶ್ರೀಯವರ 'ಇಂಗ್ಲೀಷ ಗೀತೆಗಳು' ಹೀಗೆ ಹೊಸಗನ್ನಡ ತನ್ನ ಮೈ ಬಿಚ್ಚಿಕೊಂಡುದುದೇ ಅನುವಾದದ ಮೂಲಕ. ಅನುವಾದದ ಒಡಲಲ್ಲಿ ಮೈದೆಳೆದ ಸೃಜನಶೀಲತೆ ನಾಡು ನುಡಿ, ಪ್ರಕೃತಿ ಮೊದಲಾದ ಸಂಗತಿಗಳ ಮೇಲೆ ಒತ್ತು ನೀಡಿದ ನವೋದಯ ಹೊಸಗನ್ನಡದ ಆರಂಭದ ಹೆಜ್ಜೆ. ಈ ಯುಗದ ಸಂದರ್ಭದಲ್ಲಿ ಹೊಸಗನ್ನಡದ ಅನೇಕ ರೂಪಗಳು ರಚನೆಯಾಗಿ ನಾಡು ನುಡಿಯ ಅಂತರಾಳದ ಅಭಿವ್ಯಕ್ತಿಯನ್ನು ಪಡೆಯತೊಡಗಿತು.

ಭಾರತಕ್ಕೆ ವ್ಯಾಪಾರದ ತಕ್ಕಡಿ ಹಿಡಿದುಕೊಂಡು ಬಂದ ಆಂಗ್ಲರು ಸಾವಕಾಶವಾಗಿ ಆಡಳಿತ ಚುಕ್ಕಾಣಿ ಹಿಡಿದಾಗ ಆರಂಭದಲ್ಲಿ ಭಾರತೀಯರಿಗೆ ಇದೊಂದು ಗಂಭೀರ ಸ್ವರೂಪದ ವಿಷಯವಾಗಿರಲಿಲ್ಲ. ಆದರೆ ಯಾವಾಗ ಭಾರತೀಯರು ಆರ್ಥಿಕ ಕ್ಷೇತ್ರ ಸೊರಗತೊಡಗಿತೋ ಆಗ ಭಾರತೀಯರು ಚಿಂತೆಗೆ ಒಳಗಾದರು. ಈ ಸ್ಥಿತಿಯೇ ಚಿಂತನೆಯಾಗಿ ಮಾರ್ಪಟ್ಟು ಭಾರತೀಯ ಸಾಹಿತ್ಯದಲ್ಲಿ ಅಭಿವ್ಯಕ್ತಿಯಾಗಲಾರಂಭಿಸಿತು. ಕನ್ನಡ ಭಾಷೆಯೂ ಕೂಡ ಇದಕ್ಕೆ ಹೊರತಲ್ಲ. ನವೋದಯದಲ್ಲಿ ಸ್ವಾತಂತ್ರ್ಯ ಹೋರಾಟದ ಅನೇಕ ಕವಿತೆಗಳು ಮೂಡಿ ಬಂದವು. ಆದರೆ ಕನ್ನಡ ಪ್ರಗತಿಶೀಲ ಕಥನ ಸಾಹಿತ್ಯದ ಕಥೆ ಮತ್ತು ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಹೋರಾಟದ ಚಿತ್ರಣ ದಟ್ಟವಾಗಿ ಮೂಡಿ ಬಂದಿದೆ. ೧೯೪೦-೫೦ರ ಅವಧಿಯ ೧೦ ವರ್ಷಗಳ ಕಾಲವನ್ನು ಪ್ರಗತಿಶೀಲಯುಗವೆಂದು ಸಾಮಾನ್ಯವಾಗಿ ಕರೆಯುತ್ತಾರೆ. ಈ ಸಂದರ್ಭದಲ್ಲಿ, ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಮತ್ತು ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿಯೂ ಇಂಥ ಕಥೆ-ಕಾದಂಬರಿಗಳು ಮೂಡಿ ಬಂದವು.

ಹೊಸಗನ್ನಡ ಸಾಹಿತ್ಯ ಅನೇಕ ಬದಲಾವಣೆಗಳನ್ನು ಕಾಣುವ ಮೂಲಕ ಸಾಹಿತ್ಯ ಲೋಕಕ್ಕೆ ವಿಶೇಷ ಕೊಡುಗೆ ನೀಡಿದೆ. ಹೊಸಗನ್ನಡ ಕಾಲ ಘಟ್ಟದಲ್ಲಿ ನವೋದಯ, ಪ್ರಗತಿಶೀಲ, ನವ್ಯ ಹಾಗೂ ದಲಿತ ಬಂಡಾಯ ಕಾಲ ಘಟ್ಟಗಳನ್ನು ಕಾಣುತ್ತೇವೆ. ಇದರಲ್ಲಿ ಪ್ರಗತಿಶೀಲ ಕಾಲ ಘಟ್ಟ ವಿಶೇಷತೆಯನ್ನು ಪಡೆದಿದೆ. ಇದರ ಮೇಲೆ ಕಾರ್ಲಮಾರ್ಕ್ಸ್.

ದಸ್ತೋವೆಸ್ಕಿ, ಗಾರ್ಕಿ, ಟಾಲ್‌ಸ್ಟಾಯ್ ಪ್ರಭಾವ ಆಗಿರುವುದನ್ನು ಕಾಣುತ್ತೇವೆ. ಇಲ್ಲಿ ಮುಖ್ಯವಾಗಿ ಬಂಡವಾಳಶಾಹಿಗಳ ವಿರುದ್ಧ, ಕಾರ್ಮಿಕ ಪರವಾದ ಆಲೋಚನೆಗಳು ಮೂಡಿ ಬಂದವು. ಪ್ರತಿಭಟನಾತ್ಮಕವಾಗಿ ಸಾಮಾಜಿಕ ಸಮಸ್ಯೆಗಳ ವಿರುದ್ಧ ಸಾಹಿತ್ಯ ರಚನೆಯಾಯಿತು. ಇದರಲ್ಲಿ ಅನೇಕ ಕಾದಂಬರಿಗಳು, ಕಥೆಗಳು ಬರೆಯಲ್ಪಟ್ಟವು.

೧೮೫೭ಕ್ಕಿಂತಲೂ ಮೊದಲೇ ಭಾರತದಲ್ಲಿ ಬ್ರಿಟೀಷರು ವ್ಯಾಪಾರಕ್ಕೆಂದು ಬಂದಿದ್ದರು. ಆಗ ಅವರ ಆಡಳಿತ ಅಷ್ಟಾಗಿ ನಡೆದಿದ್ದಿಲ್ಲ. ನಂತರ ದೇಶೀಯ ಅರಸರು ವಿದೇಶದ ಲಾಭ ಪಡೆಯುವುದಕ್ಕಾಗಿ ಇಲ್ಲಿಯ ಜನರನ್ನೇ ನಿರ್ಲಕ್ಷಿಸಿ ಅವರ ಜೊತೆಗೆ ದ್ವಿಮುಖ ನೀತಿ ಅನುಸರಿಸಿದರು. ಆದ್ದರಿಂದ ಭಾರತದ ಸಾಮಾನ್ಯ ಪ್ರಜೆಯೂ ಬ್ರಿಟೀಷರ ದಬ್ಬಾಳಿಕೆಗೆ ಒಳಗಾಗಬೇಕಾಯಿತು. ಆಗ ಪ್ರತಿಯೊಬ್ಬ ನಾಗರಿಕರು ಇದರ ಬಗ್ಗೆ ಆಲೋಚನೆ ಮಾಡತೊಡಗಿದರು. ಸ್ವಾತಂತ್ರ್ಯ ಹೊಂದುವ ಬಯಕೆ ವ್ಯಕ್ತಪಡಿಸಿದರು. ಸಾಮಾನ್ಯ ಪ್ರಜೆಯೂ ಸ್ವಾತಂತ್ರ್ಯದ ಬಗ್ಗೆ ಅರಿತು ಅದಕ್ಕಾಗಿ ಹೋರಾಟ ನಡೆಸಿದ್ದನ್ನು ಕಥೆ-ಕಾದಂಬರಿಗಳಲ್ಲಿ ಅಭಿವ್ಯಕ್ತಿಸಿದ್ದು ಕಾಣುತ್ತದೆ. ವಿವಿಧ ಚಳುವಳಿಗಳ ಮೂಲಕ ೧೯೪೭ರಲ್ಲಿ ಸ್ವಾತಂತ್ರ್ಯ ಪಡೆದುಕೊಂಡಿದ್ದು ಐತಿಹಾಸಿಕ ಸಾಧನೆಯಾಯಿತು. ಕನ್ನಡ ಸಾಹಿತ್ಯದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆ ಹೇಗೆ ಮೂಡಿ ಬಂತು. ಈ ಸಂದರ್ಭದಲ್ಲಿ ಶ್ರಮಿಕ ವರ್ಗವು ಹೇಗೆ ದಬ್ಬಾಳಿಕೆಗೆ ಒಳಗಾಗುತ್ತದೆ ಅದರಿಂದ ಶ್ರಮಿಕ ವರ್ಗ ಹೇಗೆ ಹೊರಬಂದಿತು ಎಂಬುದು ಪ್ರಗತಿಶೀಲ ಕಾದಂಬರಿಗಳಲ್ಲಿ ಮೂಡಿಬಂತು. ಪ್ರಗತಿಶೀಲ ಲೇಖಕರು ಕಥೆ ಕಾದಂಬರಿಗಳಿಗೆ ಸ್ವಾತಂತ್ರ್ಯವನ್ನು ವಸ್ತುವನ್ನಾಗಿಸಿಕೊಂಡು ವಸಾಹತುಶಾಹಿ, ಸಾಮ್ರಾಜ್ಯಶಾಹಿ, ಜಮೀನ್ದಾರಿಗಳಂಥ ಅನಿಷ್ಟ ಪದ್ಧತಿಗಳಿಂದ ವಿಮೋಚನೆ ಗೊಳಿಸುವುದು ಹಾಗೂ ಇದು ಮಾರ್ಕ್ಸವಾದದ ಭಾಗವಾಗಿದ್ದನ್ನು ಕಾಣುತ್ತೇವೆ. ರಾಜಕೀಯ ಕ್ಷೇತ್ರ ಪ್ರಗತಿಶೀಲರ ಪ್ರಭಾವದಿಂದ ಆಚೆ ಉಳಿಯಿತು. ಸ್ವಾತಂತ್ರ್ಯ ಚಳುವಳಿಯ ಆರಂಭದಿಂದಲೂ ಪ್ರಗತಿಶೀಲ ನೆಲೆಯಲ್ಲಿ ಅತಿ ಬೇರೂರಿದ್ದು ಕಂಡು ಬಂತು. ಹೀಗೆ ಪ್ರಗತಿಶೀಲ ಚಳುವಳಿಗೆ ತನ್ನದೆ ಆದ ಅಸ್ತಿತ್ವವನ್ನು ಹೊರ ಚಾಚಲು ಮೂಲ ಅಸ್ತ್ರ ಸ್ವಾತಂತ್ರ್ಯ ಹೋರಾಟವೇ ಆಯಿತು. ಇದರ ಜೊತೆಗೆ ಪ್ರಗತಿಶೀಲ ಲೇಖಕರು ವಸಾಹತುಶಾಹಿ, ಜಮೀನ್ದಾರಿಕೆ, ಪುರೋಹಿತಶಾಹಿ, ಯಜಮಾನ ಸಂಸ್ಕೃತಿಯನ್ನು ವಿರೋಧಿಸಿ ತಮ್ಮ ಸಾಹಿತ್ಯಕ್ಕೆ ಮೂಲ ವಸ್ತುವನ್ನಾಗಿಸಿಕೊಂಡಿದ್ದಾರೆ. ಪ್ರಸ್ತುತ "ಪ್ರಗತಿಶೀಲ ಕಥನ ಸಾಹಿತ್ಯದಲ್ಲಿ ಸ್ವಾತಂತ್ರ್ಯ ಹೋರಾಟದ ನೆಲೆಗಳು" ನಾನು ಕೈಗೊಳ್ಳುತ್ತಿರುವ ಸಂಶೋಧನೆಯಾಗಿದ್ದು, ಅದರ ರೂಪ-ರೇಷೆಗಳನ್ನು ತಿಳಿಸುತ್ತಿದ್ದೇನೆ.

## ೧.೨. ಅಧ್ಯಯನದ ಉದ್ದೇಶ

ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕ ಪ್ರಮುಖ ಪಾತ್ರ ವಹಿಸಿದೆ. ಕರ ನಿರಾಕರಣೆ, ಉಪ್ಪಿನ ಸತ್ಯಾಗ್ರಹ, ಕ್ವಿಟ್ ಇಂಡಿಯಾ ಮೊದಲಾದ ಹೋರಾಟದ ದಾರಿಗಳನ್ನು ಕಾಣುತ್ತೇವೆ. ಇದರ ಕುರಿತು ಕನ್ನಡದ ಕಥೆ, ಕಾದಂಬರಿಗಳು ರಚನೆಗೊಂಡಿವೆ. ಅದರಲ್ಲೂ ಪ್ರಗತಿಶೀಲ ಸಾಹಿತ್ಯದ ಕಥೆ ಹಾಗೂ ಕಾದಂಬರಿಗಳು ಹೆಚ್ಚಾಗಿ ಸಾಮಾಜಿಕ ಸಮಸ್ಯೆಗಳೊಂದಿಗೆ ಸ್ವಾತಂತ್ರ್ಯದ ಕಿಚ್ಚನ್ನು ಒಡಲೊಳಗಿಟ್ಟುಕೊಂಡು ಅಭಿವ್ಯಕ್ತಿ ಪಡೆದಿವೆ.

ಪಾಶ್ಚಾತ್ಯರ ಹಾಗೂ ಮಾರ್ಕ್ಸವಾದದ ಪ್ರೇರಣೆ ಪರಿಕರಗಳನ್ನು ಸ್ವೀಕರಿಸಿಕೊಂಡು ಪ್ರಗತಿಶೀಲ ಸಾಹಿತ್ಯ ಪ್ರಫುಲ್ಲವಾಗಿ ಬೆಳೆದು ನಿಂತಿದೆ. ೧೯೪೫ರ ಸುಮಾರಿಗೆ ಹೊಸದೊಂದು ಗಾಳಿ ಬೀಸಲಾರಂಭಿಸಿತು. ಇದು ಅಖಿಲ ಭಾರತ ಮಟ್ಟದಲ್ಲಿ ಬೀಸಿದ ಗಾಳಿ. ಈ ಗಾಳಿಯಲ್ಲಿ ಉಸಿರಾಡಿ ಇದರಿಂದ ಚೇತನ ಪಡೆದವರು ತಮ್ಮನ್ನು ಪ್ರಗತಿಶೀಲರು ಎಂದು ಕರೆದುಕೊಂಡು ಇದು ಪ್ರಗತಿಶೀಲ ಚಳುವಳಿಯಾಯಿತು. ಅಂದಿನ ಸಂದರ್ಭದಲ್ಲಿ ಭಾರತವು ಅನೇಕ ಸಮಸ್ಯೆಗಳಿಂದ ತೊಳಲಾಡುತ್ತಿತ್ತು. ಸ್ವಾತಂತ್ರ್ಯ ಪಡೆಯಲು ಹರಸಾಹಸ ಪಡಬೇಕಾಗಿತ್ತು. ಆದುದರಿಂದ ಎಲ್ಲ ಲೇಖಕರು ದೇಶವನ್ನು ಬ್ರಿಟೀಷರಿಂದ ಬಿಡುಗಡೆಗೊಳಿಸಬೇಕಿತ್ತು. ಸಮಾಜದಲ್ಲಿ ಜನರನ್ನು ಜಾಗೃತಗೊಳಿಸುವುದಾಗಿತ್ತು. ಹೀಗಾಗಿ ಹೆಚ್ಚಿನ ಕಥೆ, ಕಾದಂಬರಿಗಳು ಸ್ವಾತಂತ್ರ್ಯ ವಸ್ತುವನ್ನು ಒಳಗೊಂಡು ರಚಿತವಾದವು. ಇದಕ್ಕೆ ಪೂರಕವಾಗಿ ಪ್ರಗತಿಶೀಲ ಕಥೆ ಹಾಗೂ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಹೋರಾಟದ ಪರಿಕಲ್ಪನೆ ಎದ್ದು ಕಾಣುತ್ತದೆ. ಆದ್ದರಿಂದ ಈ ಕಾಲಘಟ್ಟದ ಕಥನ ಸಾಹಿತ್ಯದಲ್ಲಿ ಸ್ವಾತಂತ್ರ್ಯ ಹೋರಾಟದ ವಿವಿಧ ನೆಲೆಗಳನ್ನು ಗುರುತಿಸುವ ಉದ್ದೇಶ ಇಲ್ಲಿ ಮುಖ್ಯವಾಗಿದೆ. ಬಡವ ಶ್ರೀಮಂತರಲ್ಲಿದ್ದ ಭೇದ ಭಾವ ಸ್ವಾತಂತ್ರ್ಯ ಪದಕ್ಕೆ ಕುಂದುಂಟು ಮಾಡಿದ್ದು ಬಂಡವಾಳಶಾಹಿ ಹಾಗೂ ಕಾರ್ಮಿಕರ ನಡುವಿನ ಅಂತರ, ಜಮೀನ್ದಾರಿ ಮತ್ತು ಜೀತ ಪದ್ಧತಿ ಕುರಿತು ಅಧ್ಯಯನಗೈದು ಒಟ್ಟಾರೆ ಸ್ವಾತಂತ್ರ್ಯ ಹೋರಾಟದ ವಿವಿಧ ಆಶಯಗಳನ್ನು ಇಲ್ಲಿ ಅಧ್ಯಯನ ಮಾಡಲಾಗುತ್ತದೆ. ಯುವಕರು, ಕೃಷಿಕರು, ಪುರುಷರ, ಮಹಿಳೆಯರ ಹಾಗೂ ಸಮುದಾಯದ ಪಾತ್ರಗಳ ಕುರಿತು ಇಲ್ಲಿ ಅಧ್ಯಯನ ಮಾಡಲಾಗುತ್ತದೆ.

೧. ಅಧ್ಯಯನದ ವ್ಯಾಪ್ತಿಗೆ ಒಳಪಡುವ ಕಥೆ–ಕಾದಂಬರಿಗಳಲ್ಲಿ ಚಿತ್ರಣಗೊಂಡ ಯುವಕರು ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಪ್ರಾಣ ತ್ಯಾಗವಾದರೂ ಚಿಂತಿಸದೇ ತಮ್ಮ ಗುರಿಯನ್ನು ಮುಟ್ಟುವ ರೀತಿಯನ್ನು ಪ್ರಸ್ತುತ ಸಂದರ್ಭದಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗುವುದು.

೨. ಹೋರಾಟವೆಂದಾಕ್ಷಣ ಹಿಂಸೆಯೇ ಅದರ ಹಾದಿಯೆಂದು ಭಾವಿಸಲಾಗುತ್ತದೆ. ಆದರೆ ನಾನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕೃತಿಗಳಲ್ಲಿ ಕೇವಲ ಹಿಂಸೆ ಮಾತ್ರವಿದೆಯೇ? ಅಥವಾ ಗಾಂಧಿ ಪ್ರಭಾವಕ್ಕೆ ಒಳಗಾದ ಪಾತ್ರಗಳು ಅಹಿಂಸಾತ್ಮಕವಾಗಿಯೂ ಕೂಡ ಚಳುವಳಿಯನ್ನು ಮಾಡಬಹುದಲ್ಲ ಎಂದು ಕೂಲಂಕುಷವಾಗಿ ಪರಿಶೀಲಿಸಲಾಗುವುದು. ಹಿಂಸೆ ಹಾಗೂ ಅಹಿಂಸೆಗಳೆರಡೂ ಕೃತಿಗಳಲ್ಲಿ ಮೂಡಿಬಂದಿರುವುದನ್ನು ಪತ್ತೆ ಹಚ್ಚಲಾಗುವುದು. ಹೋರಾಟಗಳು ತೀವ್ರ ಸ್ವರೂಪ ಪಡೆದಾಗ ಅಹಿಂಸೆ ಸಾವಕಾಶವಾಗಿ ತೆರೆಗೆ ಸರಿದು ಹಿಂಸೆ ಕಾಲಿಟ್ಟ ಬಗ್ಗೆ ವಿವೇಚಿಸಲಾಗುವುದು. ಏಕೆಂದರೆ ಹೋರಾಟದಲ್ಲಿ ಧುಮುಕಿದವರು ಬಹುತೇಕ ಮಧ್ಯಮ ಹಾಗೂ ಕೆಳವರ್ಗದವರಾಗಿರುವುದರಿಂದ ಇವರಿಗೆ ಸೂತ್ರದಾರರಾಗಿ ಮೇಲ್ವರ್ಗದವರು ಇದ್ದುದರಿಂದ ಅನೇಕ ಸಲ ಹೋರಾಟಗಾರರ ಹೊಟ್ಟೆಯ ಸಿಟ್ಟು ರಟ್ಟೆಗೆ ಬಂದು ಹಿಂಸಾರೂಪ ತಾಳಿದರೂ ತಾಳಿರಬಹುದೆಂಬುದನ್ನು ಅವಲೋಕಿಸಲಾಗುವುದು. ಮೂಲಭೂತವಾಗಿ ಅಹಿಂಸೆಯಿಂದ ಹೋರಾಟ ಆರಂಭವಾದರೂ ಅಂತ್ಯ ಮುಟ್ಟುವ ಸ್ವರೂಪವನ್ನು ಅಧ್ಯಯನದಲ್ಲಿ ಗುರುತಿಸಲಾಗುವುದು.

೩. ಸ್ವಾತಂತ್ರ್ಯ ಹೋರಾಟದ ಸ್ವರೂಪವನ್ನು ಗುರುತಿಸುವುದು ಈ ಅಧ್ಯಯನದ ಉದ್ದೇಶಗಳಲ್ಲಿ ಒಂದು ನಗರ ಮತ್ತು ಹಳ್ಳಿಗಾಡುಗಳಲ್ಲಿ ಹೋರಾಟದ ತೀವ್ರತೆ ಹೇಗಿತ್ತೆಂಬುದನ್ನು ಕಾಣಬೇಕಾಗಿರುವುದರಿಂದ ಆ ರೀತಿಯ ಅವಲೋಕನವಿಲ್ಲಿ ಅನಿವಾರ್ಯ. ಬ್ರಿಟೀಷರ ಬಂಧನದ ಭೀತಿ ಹಾಗೂ ತಮ್ಮ ಗುರಿಗಳನ್ನೇ ಮುಖ್ಯವೆಂದು ಭಾವಿಸಿದ ಅನೇಕ ಹೋರಾಟಗಾರರು ತೆರೆಯಲ್ಲಿದ್ದುಕೊಂಡೇ ಹೋರಾಟದ ರೂಪ ರೇಷೆಗಳನ್ನು ತಯಾರಿಸುತ್ತಿದ್ದರು. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಗ್ರಾಮೀಣ ಹಾಗೂ ನಗರ ಪ್ರದೇಶಗಳು ಒಂದಕ್ಕೊಂದು ಪೂರಕ-ಪೋಷಕವಾಗಿ ಕಾರ್ಯ ನಿರ್ವಹಿಸಿದ ಬಗ್ಗೆ ಅಧ್ಯಯನದಲ್ಲಿ ಅವಲೋಕಿಸಲಾಗುವುದು.

೪. ಸ್ವಾತಂತ್ರ್ಯ ಹೋರಾಟದಲ್ಲಿ ತ್ಯಾಗ-ಬಲಿದಾನಗಳು ಸಹಜ. ಹಾಗಾಗಿ ನನ್ನ ಅಧ್ಯಯನದುದ್ದಕ್ಕೂ ಬಂದಿರುವ ಇಂಥಹ ಸನ್ನಿವೇಶಗಳ ಔಚಿತ್ಯ ಹಾಗೂ ಸಂದರ್ಭಗಳನ್ನು ಗುರುತಿಸುವುದು. ಯುವಕರ ಸಾಹಸ, ಶೌರ್ಯ, ಪ್ರಾಣ ತ್ಯಾಗ ಮತ್ತು ದೇಶಪ್ರೇಮಗಳನ್ನು ಕಂಡು ಕೊಳ್ಳುವುದು.

೫. ಇಡಿಯಾಗಿ ಸ್ವಾತಂತ್ರ್ಯ ಹೋರಾಟದ ಅಧ್ಯಯನ ಇದುವರೆಗೆ ಅಲ್ಲಲ್ಲಿ ಬಿಡಿ-ಬಿಡಿಯಾಗಿ ಮೂಡಿ ಬಂದಿತ್ತು. ಈ ವ್ಯಾಪ್ತಿಯಾಚೆ ವಿಸ್ತೃತಗೊಂಡ ನನ್ನ ಅಧ್ಯಯನ ಪ್ರಗತಿಶೀಲ

ಕಥನ ಸಾಹಿತ್ಯದಲ್ಲಿ ಒಡಮೂಡಿದ ಇಡಿ ಹೋರಾಟದ ಅಧ್ಯಯನ ಮಾಡುವುದೇ ನನ್ನ ಪ್ರಮುಖ ಉದ್ದೇಶವಾಗಿದೆ.

೬. ಸ್ವಾತಂತ್ರ್ಯ ಹೋರಾಟದಲ್ಲಿ ಇಡಿ ಸಮುದಾಯ ಪಾಲ್ಗೊಂಡ ಬಗ್ಗೆ ಅವಲೋಕಿಸಲಾಗುವುದು. ಸ್ತ್ರೀಯರು, ಕೆಳವರ್ಗದವರು, ಕಾರ್ಮಿಕರು, ರೈತರು ಹಾಗೂ ಬಡವರು ಒಟ್ಟಾಗಿ ಹೋರಾಡಿದ ಬಗ್ಗೆ ಏನಾದರೂ ಚಿತ್ರಣಗಳಿವೆ? ಇದರೊಂದಿಗೆ ಹಸಿವಿನಿಂದ ಬಳಲುವ ಜನ ಹಸಿವನ್ನು ಬದಿಗಿಟ್ಟು ಹೋರಾಡಿದ ಚಿತ್ರಣಗಳೇನಾದರೂ ಬಂದಿವೆಯೇನೋ? ಎಂಬುದನ್ನು ಪರಿಶೀಲಿಸುತ್ತಾ ಜಾತಿ–ಮತ–ಧರ್ಮಗಳನ್ನು ಮೀರಿ ರಕ್ತಸಂಬಂಧಗಳನ್ನು ತೊರೆದು ದೇಶಕ್ಕಾಗಿ ಹೋರಾಡಿದ ಧೀರರ ಬಗ್ಗೆ ಇಲ್ಲಿ ಅವಲೋಕಿಸಲಾಗುವುದು.

೭. ದೇಶೀಯ ಸಂಸ್ಥಾನಗಳು ಬ್ರಿಟೀಷರ ವಿರುದ್ಧ ಸಿಡಿದೆದ್ದ ಅನೇಕ ಸಂದರ್ಭಗಳೇ ದೇಶದ ಸ್ವಾತಂತ್ರ್ಯಹೋರಾಟಕ್ಕೆ ಮುನ್ನುಡಿಯಾಗಿರಬಹುದೆಂಬುದನ್ನು ನೋಡಲಾಗುತ್ತಿದೆ. ಏಕೆಂದರೆ ಕಿತ್ತೂರು, ನರಗುಂದ, ಮುಂಡರಗಿ ಇಂಥಹ ಅನೇಕ ಆಳರಸರ ಪ್ರತಿರೋಧ ಬಹುತೇಕ ಸ್ವಾತಂತ್ರ್ಯ ಕಹಳೆಯಾಗಿ ಮೊಳಗಿದ್ದನ್ನು ಇತಿಹಾಸದಲ್ಲಿ ಕಾಣುತ್ತೇವೆ.

೮. ಬ್ರಿಟೀಷರ ಶೈಕ್ಷಣಿಕ ಕಾಳಜಿಯೇ ಭಾರತೀಯರಿಗೆ ಹೋರಾಟದ ದಾರಿ ತೋರಿಸಿತೆಂಬುದನ್ನು ಹಾಗೂ ಅನೇಕರು ಗಾಂಧಿ ಮೊದಲಾದ ಚಳುವಳಿಗಾರರ ಕರೆಗೆ ಸ್ಪಂದಿಸಿ ಶಾಲಾ ಕಾಲೇಜುಗಳನ್ನು ತೊರೆದು ಹೋರಾಟದಲ್ಲಿ ಧುಮುಕಿದ ಬಗ್ಗೆ ನನ್ನ ಅಧ್ಯಯನದ ಕೃತಿಗಳಲ್ಲಿ ಬಂದ ಬಗ್ಗೆ ಗುರುತಿಸುವುದು ಅಧ್ಯಯನದ ಉದ್ದೇಶಗಳಲ್ಲಿ ಒಂದು.

೯. ಹೋರಾಟದ ಮಧ್ಯದಲ್ಲಿಯೂ ಪ್ರೇಮ–ದಾಂಪತ್ಯ ಹಾಗೂ ಕೌಟುಂಬಿಕ ಚಿತ್ರಣಗಳು ಬಂದುದನ್ನು ಹಾಗೂ ಆ ಚಿತ್ರಣಗಳು ಆ ಕೃತಿಗಳ ಮೂಲ ಉದ್ಧೇಶಕ್ಕೆ ಪ್ರೇರಕ ಪೋಷಕವಾಗಿವೆಯೇ? ಅಥವಾ ಕಥೆಗಳಲ್ಲಿ ಆ ಹಿನ್ನೆಲೆಯಾಗಿ ಮೂಡಿಬಂದಿವೆಯೇ? ಎಂಬುದನ್ನು ಗಮನಿಸಲಾಗುವುದು.

೧೦. ಪ್ರಗತಿಶೀಲ ಕಥನ ಸಾಹಿತ್ಯದಲ್ಲಿ ಕೇವಲ ಸ್ವಾತಂತ್ರ್ಯ ಹೊರಾಟ ಮಾತ್ರ ಪ್ರಮುಖವಾಗಿದೆಯೇ? ಇಲ್ಲವೆ ಅದರೊಂದಿಗೆ ಸಾಮಾಜಿಕ ನ್ಯಾಯ, ಸ್ತ್ರೀ ಸಮಾನತೆ, ಕಾರ್ಮಿಕರ ಸಮಸ್ಯೆಗಳು, ಜಮೀನ್ದಾರರ ದಬ್ಬಾಳಿಕೆ, ಬಂಡವಾಳಶಾಹಿಗಳ ಅಟ್ಟಹಾಸ ಇವುಗಳೇನಾದರೂ ಹೋರಾಟದ ಜೊತೆಜೊತೆಗೆ ಮೂಡಿಬಂದಿವೆಯೇ? ಎಂಬುದನ್ನು ಪರಿಶೀಲಿಸಿ ನನ್ನ ಸಂಶೋಧನೆಯ ಫಲಿತಗಳನ್ನು ಅಲ್ಲಲ್ಲಿ ತೋರಿಸುವ ಹಂಬಲ ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

೧೧. ಗಾಂಧಿ ಮಾದರಿಯ ಹೋರಾಟಗಳು, ಕಮ್ಯುನಿಷ್ಟ ಹೋರಾಟಗಳಲ್ಲಿ ಪರ್ಯಾವಸನ ಹೊಂದಿ, ಕೇವಲ ದೇಶ ಸ್ವತಂತ್ರವಾಗುವ ಗುರಿಯನ್ನು ಮಾತ್ರ ಪ್ರಗತಿಶೀಲ ಕಥನ ಸಾಹಿತ್ಯ ಹೊಂದಿರದ, ಅದರೊಂದಿಗೆ ಸಾಮಾಜಿಕ ಹಾಗೂ ಆರ್ಥಿಕ ಸಮಾನತೆಯೊಂದಿಗೆ ಆಧುನಿಕ ಭಾರತದ ರಾಜಕೀಯ ಮುನ್ನೋಟಗಳನ್ನು ಈ ಯುಗದಲ್ಲಿ ಕಾಣಬಹುದೆಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗುವುದು.

೧೨. ಪ್ರಗತಿಶೀಲ ಕಥನ ಸಾಹಿತ್ಯ ಅದು ತಾನಿಟ್ಟುಕೊಂಡ ಗುರಿಯನ್ನು ಮುಟ್ಟಿ ತನ್ನ ಆಶಯಗಳನ್ನು ಸಂಪೂರ್ಣವಾಗಿ ಈಡೇರಿಸಿಕೊಂಡು ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಚಳುವಳಿಗೆ ಮಾತ್ರ ಒತ್ತು ಕೊಟ್ಟರೇ? ಅಥವಾ ಸಾಹಿತ್ಯಿಕವಾಗಿ ಕನ್ನಡ ಭಾಷೆಯನ್ನು ಹೇಗೆ ದುಡಿಸಿಕೊಂಡರೆಂಬುದನ್ನು ತಿಳಿಯುವ ಹಿನ್ನೆಲೆಯಲ್ಲಿ ಪ್ರಯತ್ನಿಸಲಾಗುವುದು.

ಈ ಎಲ್ಲ ಉದ್ದೇಶಗಳೊಂದಿಗೆ ಪ್ರಗತಿಶೀಲ ಕಥನ ಸಾಹಿತ್ಯದಲ್ಲಿ ಸ್ವಾತಂತ್ರ್ಯ ಹೋರಾಟದ ಪರಿಕಲ್ಪನೆಯನ್ನು ಸಾಹಿತ್ಯದ ಹಿನ್ನೆಲೆಯಲ್ಲಿ ನೋಡುವ ಮೂಲಕ ಇದರ ಪ್ರಾಮುಖ್ಯತೆಯನ್ನು ಅರಿಯಲಾಗುತ್ತದೆ.

## ೧.೨. ಅಧ್ಯಯನದ ಸ್ವರೂಪ ಹಾಗೂ ವ್ಯಾಪ್ತಿ

ಕಥನವೆಂಬುದನ್ನು ಐತಿಹಾಸಿಕವಾಗಿ ನಡೆದ ಹೋರಾಟದ ಸ್ವರೂಪ ನಿದರ್ಶನವೆಂದು ಇಲ್ಲಿ ಭಾವಿಸಲಾಗಿದೆ. ಸ್ವಾತಂತ್ರ್ಯ ಹೋರಾಟದ ಸ್ವರೂಪವು, ಕಥೆ, ಕಾದಂಬರಿ, ಲಾವಣಿ, ಗೀಗೀಪದ ಹಾಗೂ ಇನ್ನೂ ಅನೇಕ ಸಾಹಿತ್ಯ ಪ್ರಕಾರಗಳಲ್ಲಿ ಅಭಿವ್ಯಕ್ತಿಗೊಂಡಿದೆ. ಆದರೆ ಬಹುಮುಖ್ಯವಾಗಿ ನಾವಿಲ್ಲಿ ಆಯ್ದುಕೊಂಡದ್ದು ಕಥೆ-ಕಾದಂಬರಿ ಸ್ವರೂಪವನ್ನು ಅದರಲ್ಲಿಯೂ ಪ್ರಗತಿಶೀಲ ಕಥನ ರೂಪವನ್ನು ಮಾತ್ರ. ಪ್ರಗತಿಶೀಲ ಯುಗವನ್ನು ಸಾಮಾನ್ಯವಾಗಿ ಕಥೆ-ಕಾದಂಬರಿ ಯುಗವೆಂದೇ ಗುರುತಿಸಲಾಗುತ್ತದೆ.

ಪ್ರಗತಿಶೀಲ ಕಾಲಘಟ್ಟದಲ್ಲಿ ಕಾದಂಬರಿಕಾರರು ಹಾಗೂ ಕಥೆಗಾರರು ತಮ್ಮ ಕಥೆ ಮತ್ತು ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಹೋರಾಟವನ್ನು ವಾಸ್ತವಿಕ ನೆಲೆಯಲ್ಲಿ ಮೂಡಿಸಿದರು. ಕನ್ನಡ ಪ್ರಗತಿಶೀಲ ಕಥನ ಸಾಹಿತ್ಯದಲ್ಲಿ ಬಸವರಾಜ ಕಟ್ಟೀಮನಿ, ನಿರಂಜನ, ತ.ರಾ.ಸು, ಅ.ನ.ಕೃ., ವಿ.ಎಂ.ಇನಾಂದಾರ, ಶಿವರಾಮ ಕಾರಂತ, ವ್ಯಾಸರಾಯ ಬಲ್ಲಾಳ, ಚದುರಂಗ, ಶ್ರೀರಂಗ ಹಾಗೂ ಮಿರ್ಜಿ ಅಣ್ಣಾರಾಯರ ಪ್ರಾತಿನಿಧಿಕ ಕಥೆ-ಕಾದಂಬರಿಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಪ್ರಗತಿಶೀಲರ ಹೋರಾಟ ಕಥೆ-ಕಾದಂಬರಿಗಳಲ್ಲಿ ಮಾತ್ರ ಅಭಿವ್ಯಕ್ತಿಗೊಂಡಿದ್ದು, ಕಾವ್ಯ, ನಾಟಕ, ಪ್ರಬಂಧಗಳಲ್ಲಿ ಹೆಚ್ಚಾಗಿ ಕಾಣಸಿಗದು. ಹಾಗಾಗಿ ಪ್ರಸ್ತುತ

ಮಹಾಪ್ರಬಂಧದಲ್ಲಿ ಕಥೆ–ಕಾದಂಬರಿಗಳನ್ನು ಗಮನದಲ್ಲಿಟ್ಟುಕೊಂಡು ವಿಶ್ಲೇಷಿಸಲಾಗಿದೆ. ಈ ಅಧ್ಯಯನದಲ್ಲಿ ಪ್ರಗತಿಶೀಲ ಕಾದಂಬರಿ ಹಾಗೂ ಕಥೆಗಾರರಾದ ಬಸವರಾಜ ಕಟ್ಟೀಮನಿ, ನಿರಂಜನ, ತ.ರಾ.ಸು, ಅ.ನ.ಕೃ., ವಿ.ಎಂ.ಇನಾಂದಾರ, ಶಿವರಾಮ ಕಾರಂತ, ವ್ಯಾಸರಾಯ ಬಲ್ಲಾಳ, ಚದುರಂಗ, ಶ್ರೀರಂಗ ಹಾಗೂ ಮಿರ್ಜಿ ಅಣ್ಣಾರಾಯರ ಕೃತಿಗಳ ಅಧ್ಯಯನಕ್ಕೊಳಪಡಿಸಿ ಅವರ ಕಥೆ ಹಾಗೂ ಕಾದಂಬರಿಗಳನ್ನು ಅಭ್ಯಸಿಸಲಾಗುವುದು. ಇದರಲ್ಲಿ ಸ್ವಾತಂತ್ರ್ಯ ಹೋರಾಟದ ವಿವಿಧ ನೆಲೆಗಳನ್ನು ಗ್ರಹಿಸಲಾಗುತ್ತದೆ. ಪ್ರಗತಿಶೀಲ ಕಾಲಘಟ್ಟದ ಕಾದಂಬರಿ ಹಾಗೂ ಕಥೆಗಳನ್ನು ಒಳಗೊಂಡ ಕೃತಿಗಳನ್ನು ಪ್ರಾಥಮಿಕ ಆಕರಗಳಾಗಿ ಬಳಸಿಕೊಳ್ಳಲಾಗುತ್ತದೆ. ಹೋರಾಟದ ಚಿತ್ರಣ ಬರದಿರುವ ಪ್ರಗತಿಶೀಲರ ಕಥೆ–ಕಾದಂಬರಿಗಳನ್ನು ಅಧ್ಯಯನದಲ್ಲಿ ಬಳಸಿಕೊಂಡಿಲ್ಲ; ಆನುಷಂಗಿಕವಾಗಿ ಸ್ವಾತಂತ್ರ್ಯ ಹೋರಾಟವನ್ನು ಹೇಳಿದ ಕೃತಿಗಳನ್ನು ವಿಶ್ಲೇಷಣೆ ಮಾಡಲಾಗುವುದು.

## ೧.೪. ಅಧ್ಯಯನದ ವಿಧಾನ

ಪ್ರಗತಿಶೀಲ ಕಥನ ಸಾಹಿತ್ಯದಲ್ಲಿ ಸ್ವಾತಂತ್ರ್ಯ ಹೋರಾಟದ ನೆಲೆಗಳನ್ನು ವಿಶ್ಲೇಷಿಸುವುದೇ ಅಧ್ಯಯನದ ಪ್ರಮುಖ ಉದ್ದೇಶವೆಂದು ಈ ಹಿಂದೆ ಸ್ಪಷ್ಟಪಡಿಸಲಾಗಿದೆ. ಈಗಾಗಲೇ ಪ್ರಗತಿಶೀಲ ಘಟ್ಟದ ಕಥೆ, ಕಾದಂಬರಿಗಳನ್ನು ಅಧ್ಯಯನ ಮಾಡಿ ಅದರಲ್ಲಿನ ಸ್ವಾತಂತ್ರ್ಯ ಹೋರಾಟದ ನೆಲೆಗಳನ್ನು ವಿಶ್ಲೇಷಿಸುವುದು ಅಧ್ಯಯನದ ಪ್ರಮುಖ ಉದ್ದೇಶ. ಕನ್ನಡದಲ್ಲಿ ಸಾಹಿತ್ಯ ಸಂಶೋಧನೆಗಾಗಿ ಸಮೀಕ್ಷಾ ಮಾದರಿ, ಸಂಗ್ರಹ ಮಾದರಿ, ವಿಶ್ಲೇಷಣಾ ಮಾದರಿ, ತೌಲನಿಕ ಮಾದರಿಗಳೆಂಬ ಅಧ್ಯಯನದ ಮಾದರಿಗಳಿವೆ. ಪ್ರಸ್ತುತ ಅಧ್ಯಯನವು ವಿಶ್ಲೇಷಣಾ ಮಾದರಿಯಾಗಿದೆ. ಪ್ರಗತಿಶೀಲ ಕಥನ ಸಾಹಿತ್ಯದ ಸಂಶೋಧನೆಗಳ ಹಿನ್ನೆಲೆ ಗಮನಿಸಿದಾಗ ವಿಮರ್ಶೆ, ಸಂಗ್ರಹ, ಸಂಪಾದನೆ ಸಾಕಷ್ಟು ನಡೆದಿದೆ. ಆದರೆ ಪ್ರಸ್ತುತ ಕಾಲಘಟ್ಟದಲ್ಲಿ ಸಂಶೋಧನ ಅಧ್ಯಯನವು ವಿಭಿನ್ನ ಆಯಾಮಗಳತ್ತ ಮುಖ ಮಾಡಿದೆ. ಕಥೆ ಹಾಗೂ ಕಾದಂಬರಿಗಳಲ್ಲಿ ಶೈಲಿ, ವಸ್ತು, ಪಾತ್ರಗಳ ಕುರಿತು ನಡೆದ ಅಧ್ಯಯನಗಳು ಪ್ರಾಮುಖ್ಯತೆ ಪಡೆದವು. ಇತ್ತೀಚಿನ ದಿನಗಳಲ್ಲಿ ಕಥೆ ಹಾಗೂ ಕಾದಂಬರಿಗಳಲ್ಲಿ ಸಾಮಾಜಿಕ, ಚಾರಿತ್ರಿಕ ಹಾಗೂ ವಿವಿಧ ಮಾನವೀಯ ಮೌಲ್ಯಗಳ ಅಧ್ಯಯನಗಳು ನಡೆಯುತ್ತಿವೆ. ಇನ್ನೂ ಸಂಶೋಧನ ಕ್ಷೇತ್ರದಲ್ಲಿ ಸ್ವಾತಂತ್ರ್ಯ ಹೋರಾಟದ ನೆಲೆಗಳನ್ನು ಗುರುತಿಸುವುದಾಗಿದೆ. ಈಗಾಗಲೇ ಪ್ರಗತಿಶೀಲ ಕಾಲ ಘಟ್ಟದ ಬಸವರಾಜ ಕಟ್ಟೀಮನಿ, ನಿರಂಜನ, ತ.ರಾ.ಸು, ಅ.ನ.ಕೃ., ವಿ.ಎಂ.ಇನಾಂದಾರ, ಶಿವರಾಮ ಕಾರಂತ, ವ್ಯಾಸರಾಯ ಬಲ್ಲಾಳ, ಚದುರಂಗ, ಶ್ರೀರಂಗ ಹಾಗೂ ಮಿರ್ಜಿ ಅಣ್ಣಾರಾಯರ ಕಥೆ ಹಾಗೂ ಕಾದಂಬರಿಗಳನ್ನು ಪ್ರಾಥಮಿಕ ಆಕರಗಳನ್ನಾಗಿ

ಬಳಸಿಕೊಳ್ಳಲಾಗಿದೆ, ಇದರ ಜೊತೆಗೆ ಇದಕ್ಕೆ ಸಂಬಂಧಿಸಿದ ವಿವಿಧ ಗ್ರಂಥಗಳನ್ನು ಸಂದರ್ಭಕ್ಕೆ ತಕ್ಕಂತೆ ಬಳಸಿಕೊಳ್ಳಲಾಗಿದೆ.

### ೧.೫ ಅಧ್ಯಯನದ ಮಹತ್ವ

ನಾವು ಪಡೆದ ಸ್ವಾತಂತ್ರ್ಯ ಸಹಜವಾಗಿ ಸಿಕ್ಕಿದ್ದಲ್ಲ. ಅನೇಕ ತ್ಯಾಗ ಬಲಿದಾನಗಳಿಂದಾಗಿ ನಾವು ಬ್ರಿಟೀಷರ ದಾಸ್ಯದಿಂದ ಮುಕ್ತರಾಗಿದ್ದೇವೆ. ಆದರೆ ನಾವು ಪಡೆದ ಸ್ವಾತಂತ್ರ್ಯ ಇತ್ತೀಚೆಗೆ ಅಲ್ಲಲ್ಲಿ ಸ್ವೇಚ್ಛೆಯಾಗಿ ಬಳಕೆಯಾಗುತ್ತಿದೆ. ಅಂದು ನಡೆದ ಸ್ವಾತಂತ್ರ್ಯ ಹೋರಾಟದ ಸ್ವರೂಪ ಭಾರತೀಯರಿಗೆ ತಿಳಿಯುವುದು, ಅದರಲ್ಲಿಯೂ ಕನ್ನಡಿಗರಿಗೆ ತೀರಾ ಅವಶ್ಯವಾಗಿದೆ. ಎಲ್ಲಿಗೆ ಬಂತು ಯಾರಿಗೆ ಬಂತು ನಾಲ್ವತ್ತೇಳರ ಸ್ವಾತಂತ್ರ್ಯ? ಎಂದು ಪ್ರಶ್ನೆ ಮಾಡುವ ಸ್ಥಿತಿಗೆ ತಲುಪಿದ ನಮಗೆ ನಾವು ಪಡೆದುಕೊಂಡ ಸ್ವಾತಂತ್ರ್ಯದ ಹಾದಿಯ ಅರಿವಿಲ್ಲ. ಹಾಗಾಗಿ ಚಳುವಳಿಯಲ್ಲಿ ಮಡಿದ ಅನೇಕರ ರಕ್ತಚರಿತ್ರೆ ನಮಗೆ ಗೊತ್ತಾಗಿಲ್ಲ; ಅದರೊಂದಿಗೆ ಬ್ರಿಟೀಷರ ದಬ್ಬಾಳಿಕೆಯ ಮಧ್ಯದಲ್ಲಿ ಶೀಲಕ್ಕಿಂತ ಸ್ವಾತಂತ್ರ್ಯವೇ ಮುಖ್ಯವೆಂದು ಭಾವಿಸಿದ ಅನೇಕ ಮಹಿಳೆಯರ ಬದುಕಿನ ಅರಿವು ನಮಗೆ ತಿಳಿಯಬೇಕಾಗಿದೆ. ಸತ್ಯ-ಶಾಂತಿ- ತ್ಯಾಗಗಳ ಮೂಲಕ ಪಡೆಯಬೇಕೆಂದಿದ್ದ ಸ್ವಾತಂತ್ರ್ಯವನ್ನು ಅಲ್ಲಲ್ಲಿ ಕೆಲವು ರಕ್ತದಕಲೆಗಳ ಮಧ್ಯದಲ್ಲಿ ಪಡೆದುಕೊಂಡ ಬಗೆಗಳು ಇಂದಿನ ಯುವಪೀಳಿಗೆ ಅರಿಯಬೇಕಿದೆ. ಎದೆಗೆ ಗುಂಡು ಬಿದ್ದರೂ ಧ್ವಜ ಹಾರಿಸಿದ ಬಾಲಕರ ಚರಿತ್ರೆ ಇಂದಿನ ಪಠ್ಯಗಳಲ್ಲಿ ಸೇರಬೇಕು; ವಿದ್ಯಾರ್ಥಿಗಳು ಅಂತಹ ಚರಿತ್ರೆಯನ್ನು ಓದಬೇಕಾದ ಅನಿವಾರ್ಯತೆ ಇದೆ. ಇಂಥ ಹಲವು ಕಾರಣಗಳಿಂದಾಗಿ ಪ್ರಸ್ತುತ ಅಧ್ಯಯನ ಹೆಚ್ಚಿನ ಮಹತ್ವ ಪಡೆದುಕೊಂಡಿದೆ.

## ಅಧ್ಯಾಯ-೨

## ಇದುವರೆಗೆ ನಡೆದ ಅಧ್ಯಯನಗಳ ತಾತ್ವಿಕ ಸಮೀಕ್ಷೆ

ಕನ್ನಡ ಸಾಹಿತ್ಯದಲ್ಲಿ ಕಾಲಕ್ಕೆ ತಕ್ಕಂತೆ ಅನೇಕ ಬದಲಾವಣೆಗಳನ್ನು ಕಾಣುತ್ತೇವೆ. ಭಾಷೆ, ಕಾಲ ಘಟ್ಟ ಹಾಗೂ ಸಾಹಿತ್ಯದ ಪ್ರಕಾರದ ಮೇಲೆ ಹೊಸಗನ್ನಡ ಸಾಹಿತ್ಯವನ್ನು ವಿವಿಧ ಘಟ್ಟಗಳಾಗಿ ವಿಂಗಡಿಸುತ್ತೇವೆ. ೨೦ನೆಯ ಶತಮಾನದ ಆದಿಯಲ್ಲಿ ಹೊಸಗನ್ನಡ ಕಾಲದ ಆರಂಭವನ್ನು ಕಾಣುತ್ತೇವೆ. ನವೋದಯ, ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಹಾಗೂ ಸಂಕೀರ್ಣ ಎಂದು ಸಾಹಿತ್ಯದ ಕಾಲ ಘಟ್ಟಗಳನ್ನು ನೋಡಬಹುದು. ಇದರಲ್ಲಿ ಪ್ರಗತಿಶೀಲ ಕಾಲ ಘಟ್ಟ ಪ್ರಮುಖವಾಗಿ ಪ್ರತಿಭಟನಾತ್ಮಕ ಚಳುವಳಿಯಾಗಿ ಮೂಡಿ ಬಂತು. ಇಲ್ಲಿಯವರೆಗೆ ಕಾವ್ಯದ ಹೊಳೆ ಹರಿದು ಬಂದಿತ್ತು. ಪ್ರಗತಿಶೀಲ ಕಾಲ ಘಟ್ಟದಲ್ಲಿ ಕಥೆ ಹಾಗೂ ಕಾದಂಬರಿಗಳು ಹೇರಳವಾಗಿ ಬರೆಯಲ್ಪಟ್ಟು ವಿವಿಧ ಚಳುವಳಿಗಳು ಇದಕ್ಕೆ ಪ್ರೇರಣೆಯಾದವು. ಪ್ರಗತಿಶೀಲ ಸಂದರ್ಭದಲ್ಲಿ ಸಾಮಾಜಿಕ ಶೋಷಣೆ, ವಿವಿಧ ಸಾಮಾಜಿಕ ಸಮಸ್ಯೆ ಹಾಗೂ ಸ್ವಾತಂತ್ರ್ಯ ಹೋರಾಟ ಕೇಂದ್ರಿತ ಸಾಹಿತ್ಯ ರಚನೆಯಾಯಿತು. ಅದರಲ್ಲೂ ಸ್ವಾತಂತ್ರ್ಯ ಹೋರಾಟದ ಕಥೆ ಹಾಗೂ ಕಾದಂಬರಿಗಳು ವಿಶೇಷವಾಗಿ ಮೂಡಿ ಬಂದು ಓದುಗರನ್ನು ಸೆಳೆದವು. ಕನ್ನಡದಲ್ಲಿ ಕಥೆ ಮತ್ತು ಕಾದಂಬರಿಗಳನ್ನು ಕುರಿತು ವಿವಿಧ ಹಿನ್ನೆಲೆಗಳಲ್ಲಿ ಅಧ್ಯಯನಗಳು ನಡೆದಿವೆ. ಅಲ್ಲದೆ ಕಾದಂಬರಿಕಾರರ ಬದುಕು ಬರಹಗಳನ್ನು ಕುರಿತಾದ ಸಂಶೋಧನ ಅಧ್ಯಯನಗಳು ಸಾಕಷ್ಟು ನಡೆದಿರುವುದುಂಟು. ಪ್ರಗತಿಶೀಲ ಕಥನ ಸಾಹಿತ್ಯದ ಬಗ್ಗೆ ಅನೇಕ ಲೇಖನಗಳು, ಕಥೆಗಳು ಪ್ರಕಟಗೊಂಡಿವೆ. ಪ್ರಗತಿಶೀಲ ಕಥೆಗಾರರ- ಕಾದಂಬರಿಕಾರರ ಪ್ರತ್ಯೇಕ ಅಧ್ಯಯನಗಳು ಸಹ ನಡೆದಿರುವುದುಂಟು ಆದರೆ ಪ್ರಗತಿಶೀಲ ಕಥನ ಸಾಹಿತ್ಯದಲ್ಲಿ ಕಾಣುವ ಸ್ವಾತಂತ್ರ್ಯ ಹೋರಾಟದ ಬಗ್ಗೆ ಅಧ್ಯಯನ ನಡೆದಿಲ್ಲ ಈ ಕ್ಷೇತ್ರದಲ್ಲಿ ಇದುವರೆಗೆ ನಡೆದ ಅಧ್ಯಯನದ ಸ್ಥೂಲವಾದ ತಾತ್ವಿಕ ಸಮೀಕ್ಷೆಯನ್ನು ಮಾಡಲಾಗಿದೆ..

**ತಾತ್ವಿಕ ಸಮೀಕ್ಷೆ**

ಸ್ವಾತಂತ್ರ್ಯ ಚಳವಳಿ ರಾಷ್ಟ್ರಮಟ್ಟದ ಚಳುವಳಿಯಾಗಿದೆ. ನವೋದಯ ಕಾಲಘಟ್ಟದಲ್ಲಿ ರಚಿತವಾದ ಅನೇಕ ಕಾದಂಬರಿಗಳು ಈ ಚಳುವಳಿಯನ್ನು ವಸ್ತುವನ್ನಾಗಿಸಿವೆ. ನವೋದಯ ಕಾಲದ ಕವಿಗಳು ಸಹಿತ ಈ ಚಳುವಳಿಯಲ್ಲಿ ಭಾಗವಹಿಸಿದ್ದರು. ಅನೇಕ ಕವಿಗಳ ಮನವನ್ನು ಕಲಕಿದ ಮಹಾಕ್ರಾಂತಿಯಿದು. ಈ ಘಟನೆ ಕುರಿತು ರಚಿತವಾದ ಅನೇಕ ಕಾದಂಬರಿಗಳ ಬಗ್ಗೆ

ಕೆಲವು ಸಂಶೋಧಕರು ಅಧ್ಯಯನ ಮಾಡಿ ಪಿಎಚ್‌ಡಿ ಮಾಡಿ ಪ್ರಬಂಧ ರಚಿಸಿದ್ದಾರೆ. ಇವುಗಳು ಆಂಶಿಕ ಅಧ್ಯಯನಗಳಾಗಿವೆ. ಅವುಗಳು ಸ್ವಾತಂತ್ರ್ಯ ಚಳುವಳಿಯ ಯಾವುದಾದರೂ ನಿರ್ಧಿಷ್ಟ ಘಟನೆಯನ್ನು ಆಧರಿಸಿ ರಚಿತವಾದ ಕಾದಂಬರಿಗೆ ಸಂಬಂಧಿಸಿದ ಅಧ್ಯಯನಗಳಾಗಿವೆ. ಹಾಗಾದರೆ ಕೆಲವು ಮಹಾಪ್ರಬಂಧಗಳು ನಿರ್ಧಿಷ್ಟ ಲೇಖಕರ ಕೃತಿಗಳಿಗೆ ಮಾತ್ರ ಸೀಮಿತವಾದವು. ಕಾದಂಬರಿಕಾರರ ವಸ್ತುಗಳು ಸೀಮಿತ ವ್ಯಾಪ್ತಿಯನ್ನು ಒಳಗೊಂಡಿದ್ದರಿಂದ ಅವುಗಳನ್ನು ಆಧರಿಸಿ ನಡೆಸಿದ ಅಧ್ಯಯನಗಳಿಗೆ ಸಹಜವಾಗಿಯೇ ಮಿತಿಯನ್ನು ಒಳಗೊಂಡಿವೆ. ಸ್ವಾತಂತ್ರ್ಯ ಚಳುವಳಿ ಆಧರಿಸಿದ ಕಥೆ ಹಾಗೂ ಕಾದಂಬರಿ ಕುರಿತು ಪಿಎಚ್.ಡಿ. ಅಧ್ಯಯನಗಳು ಬಂದಿವೆ. ಅವು ಹೀಗಿವೆ:

**ವ್ಯಾಸರಾಯ ಬಲ್ಲಾಳ ಕಾದಂಬರಿಗಳು–ಒಂದು ಅಧ್ಯಯನ**

ಕೃಷ್ಣಪ್ಪ ಜಿ.ಚವ್ಹಾಣರವರ ಪಿಎಚ್‌ಡಿ ಮಹಾಪ್ರಬಂಧವಿದು. ಈ ಪ್ರಬಂಧ ವ್ಯಾಸರಾಯ ಬಲ್ಲಾಳರ ಎಲ್ಲಾ ಕಾದಂಬರಿಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದೆ. ಸ್ವಾತಂತ್ರ್ಯ ಚಳವಳಿಗೆ ಸಂಬಂಧಿಸಿದಂತೆ 'ಹೆಜ್ಜೆ' ಹಾಗೂ 'ಹೇಮಂತಗಾನ' ಕಾದಂಬರಿಗಳನ್ನು ಅಧ್ಯಯನ ಮಾಡಲಾಗಿದೆ.

**ಬಸವರಾಜ ಕಟ್ಟೀಮನಿಯವರ ಕಾದಂಬರಿಗಳು ಒಂದು ಅಧ್ಯಯನ**

ಈ ಮಹಾಪ್ರಬಂಧವನ್ನು ಬಸವರಾಜ ಸಾದರ ಅವರು ರಚಿಸಿದ್ದಾರೆ. ಇದು ಬಸವರಾಜ ಕಟ್ಟೀಮನಿಯವರ ಸಮಗ್ರ ಸಾಹಿತ್ಯವನ್ನು ಅಧ್ಯಯನ ವ್ಯಾಪ್ತಿಗೆ ಒಳಪಡಿಸಿದೆ.ಇಲ್ಲಿ ಅಧ್ಯಯನದ ದೃಷ್ಟಿಯಿಂದ ಕಾದಂಬರಿಗಳನ್ನು ರಾಷ್ಟ್ರೀಯತೆ ಹಾಗೂ ಸಾಮಾಜಿಕ ಕಾದಂಬರಿಗಳನ್ನಾಗಿ ಅಧ್ಯಯನ ಮಾಡಲಾಗಿದೆ. ರಾಷ್ಟ್ರೀಯತೆ ಕಾದಂಬರಿಗಳನ್ನು ಅಧ್ಯಯನ ಮಾಡುವಾಗ 'ಮಾಡಿ ಮಡಿದವರು' ಹಾಗೂ 'ಸ್ವಾತಂತ್ರ್ಯದೆಡೆಗೆ' ಕಾದಂಬರಿಗಳನ್ನು ವಿಶ್ಲೇಷಣೆ ಮಾಡಲಾಗಿದೆ.

**ಕನ್ನಡ ಕಾದಂಬರಿಗಳಲ್ಲಿ ಗಾಂಧಿವಾದದ ಪ್ರೇರಣೆ**

ಇದು ಮೂಡಲಗಿರಿಯಯ್ಯನವರ ಮಹಾಪ್ರಬಂಧವಾಗಿದೆ. ಇದು ಸ್ವಾತಂತ್ರ್ಯ ಹೋರಾಟದ ಕಾದಂಬರಿಗಳನ್ನು ಅಧ್ಯಯನಕ್ಕೆ ಒಳಪಡಿಸಿದ ಕೃತಿಯಲ್ಲ. ಆದರೆ ಕನ್ನಡ ಕಾದಂಬರಿಗಳು ಗಾಂಧಿವಾದವನ್ನು ಗ್ರಹಿಸಿದ ಬಗೆಯನ್ನು ಹಾಗೂ ಸ್ವಾತಂತ್ರ್ಯ ಪೂರ್ವದಲ್ಲಿ ಮನ್ನಣೆಗೊಳಗಾಗಿದ್ದ ಗಾಂಧಿವಾದವು ಸ್ವಾತಂತ್ರ್ಯ ದೊರಕಿದ ಬಳಿಕ ಅವಗಣನೆಗೆ ಒಳಗಾಗುವ ಕಾರಣಗಳನ್ನು ಇಲ್ಲಿ ವಿಶ್ಲೇಷಿಸಿಲಾಗಿದೆ.

**ಕನ್ನಡ ಕಾದಂಬರಿಗಳಲ್ಲಿ ಕೋಮುವಾದದ ವಿಭಿನ್ನ ಸ್ವರೂಪಗಳು**

ವಿಠ್ಠಲ ಬಂಡಾರಿಯವರು ಈ ವಿಷಯದ ಕುರಿತು ಅಧ್ಯಯನ ನಡೆಸಿದ್ದಾರೆ. ಈ ಅಧ್ಯಾಯದಲ್ಲಿ ಕೋಮುವಾದ ಹಾಗೂ ಸ್ವತಂತ್ರ ಚಳುವಳಿ ಎಂಬ ಅಧ್ಯಯನ ಹೊರತು ಪಡಿಸಿ

ಉಳಿದಂತೆ 'ಚಂದ್ರಗಿರಿಯ ತೀರದಲ್ಲಿ,' 'ಚೋಮನದುಡಿ' ಹೀಗೆ ವಿವಿಧ ಕಾದಂಬರಿಗಳಲ್ಲಿ ಕಂಡು ಬರುವ ಕೋಮುವಾದದ ಸ್ವರೂಪವನ್ನು ವಿವರಿಸಲಾಗಿದೆ.

**ವಸಾಹತುಶಾಹಿ ಅನುಭವಕ್ಕೆ ಕನ್ನಡದ ಪ್ರಾತಿನಿಧಿಕ ಪ್ರಕ್ರಿಯೆ.**

ಇದು ಜೆ.ವಿ.ರಾಜೇಶ್ವರಿಯವರ ಪ್ರಬಂಧವಾಗಿದೆ. ವಸಾಹತುಶಾಹಿ ಅನುಭವ ವಿವಿಧ ನೆಲೆಗಳಲ್ಲಿ ಕಂಡು ಬರುತ್ತದೆ. ವಿದ್ಯಾಭ್ಯಾಸದಿಂದ ಆರಂಭವಾಗಿ ಸಮಾಜಕ್ಕೆ ನಾವು ತೆರೆದುಕೊಳ್ಳುವ ಬಗೆಗಳವರೆಗೂ ಅದು ತನ್ನ ಹರವು ವಿಸ್ತರಿಸಿದೆ. ವಸಾಹತುಶಾಹಿ ಅನುಭವ ಕನ್ನಡದ ಕೆಲವು ಪ್ರಾತಿನಿಧಿಕ ಕೃತಿಗಳಲ್ಲಿ ಹೇಗೆ ವ್ಯಕ್ತವಾಗಿದೆ ಎಂಬುದರ ಕುರಿತು ಈ ಮಹಾಪ್ರಬಂಧವು ಅಧ್ಯಯನ ನಡೆಸುತ್ತದೆ.

**ಮಿರ್ಜಿ ಅಣ್ಣಾರಾಯರ ಒಂದು ಅಧ್ಯಯನ**

ಶಿವಾನಂದ ಗೂಳಿಯವರ 'ಮಿರ್ಜಿ ಅಣ್ಣಾರಾಯರ ಒಂದು ಅಧ್ಯಯನ' ಕೃತಿಯಲ್ಲಿ 'ರಾಷ್ಟ್ರಪುರುಷ' ಕಾದಂಬರಿಯನ್ನು ಮುಖ್ಯವಾಗಿ ಅಧ್ಯಯನ ಮಾಡುವ ಮೂಲಕ ವಿಮರ್ಶೆಗೆ ಒಳಪಡಿಸುತ್ತದೆ. ಕೃತಿ ಸಂಪೂರ್ಣ ಸ್ವಾತಂತ್ರ್ಯ ಚಳುವಳಿ ಬಗ್ಗೆ ಹೇಳುತ್ತದೆ. ಅಜಿತ ಎಂಬ ಕಲ್ಪಿತ ಪಾತ್ರ ಹೋರಾಟದಲ್ಲಿ ಧುಮುಕುವ ಚಿತ್ರಣವಿದೆ. ಭಾರತ ಪಾಕಿಸ್ತಾನಗಳ ನಿರ್ಮಾಣದಂತೆ ಅಖಂಡ ಭಾರತವು ಎರಡು ತುಂಡುಗಳಾಗಿ ವಿಭಜಿಸಲ್ಪಟ್ಟಿದ್ದರ ಸಂಕೇತವಾಗಿದೆ.

**ಇನಾಂದಾರರ ಕಾದಂಬರಿಗಳು**

ಮೋಹನ ಕುಂಟಾರ್‌ವರ ಈ ಕೃತಿ ಇನಾಂದಾರರ ಸಂಪೂರ್ಣ ಕೃತಿಗಳ ಅಧ್ಯಯನ ನಡೆಸಿದೆ. ಅಧ್ಯಯನದ ಅನುಕೂಲಕ್ಕಾಗಿ ಲೇಖಕರು ಕಾದಂಬರಿಗಳನ್ನು ಮುಖ್ಯವಾಗಿ ಸಾಮಾಜಿಕ ಹಾಗೂ ರಾಜಕೀಯ ಅನುವಾದ ಎಂದು ವಿಂಗಡಿಸಿಕೊಂಡಿದ್ದಾರೆ. ಇಲ್ಲಿ ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದ ಹಾಗೆ ಇನಾಂದಾರರ ಎರಡು ಮುಖ್ಯ ಕಾದಂಬರಿಗಳಾದ 'ಮೂರಾಬಟ್ಟೆ' ಹಾಗೂ 'ವಿಜಯಯಾತ್ರೆ'ಯನ್ನು ಸಂಶೋಧಕರು ತಮ್ಮ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದ್ದಾರೆ. ಇನಾಂದಾರರರ ಜೀವನ ಹಾಗೂ ಕೃತಿಗಳ ಒಟ್ಟು ಅಧ್ಯಯನವಾಗಿದೆ,

**ವ್ಯಾಸ ಸಾಹಿತ್ಯ : ವ್ಯಾಸರಾಯ ಬಲ್ಲಾಳರ ಕಾದಂಬರಿಗಳ ಅಧ್ಯಯನ**

ಗೌರಿ ಸುಂದರ ಅವರು ಸಂಪಾದಿಸಿದ ವಿಮರ್ಶಾಗ್ರಂಥ ಇಲ್ಲಿ 'ಹೆಜ್ಜೆ' ಕಾದಂಬರಿಯನ್ನು ವಿಮರ್ಶೆಗೊಳಪಡಿಸಲಾಗಿದೆ. ನೂರಾರು ಪಾತ್ರಗಳು, ಊರುಗಳು, ರಾಜಕೀಯ ಚರಿತ್ರೆಗಳು, ಮತ್ತು ಗಾಂಧೀಜಿ ಬದುಕಿನಲ್ಲಿ ದಾಖಲಾದ ಸಂಗತಿಗಳು, ಅನೇಕ ಚಾರಿತ್ರಿಕ ಪುರುಷರ ಹೆಸರುಗಳು, ನೆಹರು, ಸುಭಾಸ್ ಚಂದ್ರಬೋಸ್, ಹಿಟ್ಲರ್, ಜಿನ್ನಾ, ತಿಲಕ, ಕಾಂಗ್ರೆಸ್ಸಿಗರು, ಮುಸ್ಲಿಂ ಲೀಗ್‌ನವರು, ಹರಿಜನರು ದೇವಸ್ಥಾನಕ್ಕೆ ಪ್ರವೇಶಿಸುವುದು, ಅವರಿಗೆ ಶಿಕ್ಷಣ, ಕೇಶಮುಂಡನ ನಿಲ್ಲಿಸುವುದು, ವಿಧವಾ ವಿವಾಹ, ಜಾತೀಯತೆ, ಲೆಕ್ಕಕ್ಕಿಲ್ಲದೇ ಹೋಗುವುದು,

ಮಹಾಮಡಿವಂತಿಕೆಯಿಂದ ಕ್ರೂರಿಗಳಾಗಿದ್ದವರು, ಕ್ರಮೇಣ ಸುಧಾರಣೆಗೊಂಡು ಮನುಷ್ಯರಾಗುವುದು. ಹೀಗೆ ೨೦ನೇ ಶತಮಾನದ ಸಾಮಾಜಿಕ ಸಂಕ್ರಮಣ ಕಾಲದಲ್ಲಿ ಬದುಕು ಪಡೆದುಕೊಳ್ಳುವ ವಿವಿಧ ತಿರುವುಗಳನ್ನು ಬಲ್ಲಾಳರು ಕಟ್ಟಿಕೊಡುವ ಬಗೆಯನ್ನು ಈ ಕೃತಿಯಲ್ಲಿ ವಿಶ್ಲೇಷಿಸಲಾಗಿದೆ.

**ದು.ನಿಂ. ಬೆಳಗಲಿ ಅವರ ಕಾದಂಬರಿಗಳು: ಒಂದು ಅಧ್ಯಯನ**

ಪ್ರಗತಿಶೀಲ ಲೇಖಕರ ಗುಂಪಿನಲ್ಲಿ ಗುರುತಿಸಿಕೊಂಡ ದು.ನಿಂ. ಬೆಳಗಲಿಯವರ ಕಾದಂಬರಿಯನ್ನು ಕುರಿತು ಡಾ. ವೈ.ಎಂ. ಭಜಂತ್ರಿಯವರು ಸಂಶೋಧನೆ ಕೈಗೊಂಡಿದ್ದಾರೆ. ದು.ನಿಂ. ಬೆಳಗಲಿಯವರ ಕಾದಂಬರಿಯಲ್ಲಿ ದೇಶೀಯ ಮಟ್ಟದ ಚಳುವಳಿ, ಖಾದಿ ಪ್ರಚಾರ, ಗ್ರಾಮ ಸ್ವರಾಜ್ಯದ ಬಗ್ಗೆ ಹೆಚ್ಚಾಗಿ ಕಂಡುಬರುತ್ತದೆ. ಪ್ರಾದೇಶಿಕ ಚಳುವಳಿಯ ಒಡಲಲ್ಲಿ ಸ್ವಾತಂತ್ರ್ಯ ಹೋರಾಟದ ಧ್ವನಿ ಅಲ್ಲಲ್ಲಿ ಬಂದಿರುವುದನ್ನು ಪ್ರಬಂಧದಲ್ಲಿ ಗುರುತಿಸಲಾಗಿದೆ.

**ಕೋಚೆ (ಕೊಚೆನ್ನಬಸಪ್ಪ)**

ಚಂದ್ರಶೇಖರ ಪಾಟೀಲರು ಬರೆದ 'ಕೋಚೆ' ಕೃತಿ ಕೋ. ಚೆನ್ನಬಸಪ್ಪನವರು ೭೯ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದಾಗ ಬಿಡುಗಡೆಯಾಗಿದೆ. ಕೋಚೆಯವರ 'ಬೇಡಿ ಕಳಚಿತು, ದೇಶ ಬಿಡುಗಡೆಯಾಯಿತು' ಕಾದಂಬರಿಯ ಮಹತ್ವವನ್ನು ಹಲವಾರು ಲೇಖಕರು ಪ್ರಶಂಸಿದ್ದಾರೆ. ಇದೊಂದು ಸ್ವಾತಂತ್ರ್ಯದ ಸಂಪೂರ್ಣ ಚಿತ್ರಣವನ್ನು ನೀಡಿದ ಕಾದಂಬರಿ ಎಂದು ಎಲ್ಲರೂ ಒಪ್ಪಿಕೊಂಡಿದ್ದಾರೆ.

**ಸ್ವಾತಂತ್ರ್ಯದ ಸ್ವರ್ಣ ಹೆಜ್ಜೆ**

ಬಿ.ವಿ.ಕಕ್ಕಿಲಾಯ ರಚಿಸಿದ ಈ ಕೃತಿ ನಿರಂಜನರ ಕಲ್ಯಾಣಸ್ವಾಮಿ ಕಾದಂಬರಿಯನ್ನು ವಿಮರ್ಶೆಗೆ ಒಳಪಡಿಸಲಾಗಿದೆ. ಕಲ್ಯಾಣಪ್ಪನ ಕಾಟಕಾಯಿ ಎಂದು ಹೆಸರು ಪಡೆದುಕೊಂಡಿರುವ ದಂಗೆ ನಿಜವಾದ ಅರ್ಥದಲ್ಲಿ ಅಮರ ಸುಳ್ಯದಿಂದ ಆರಂಭವಾಗಿ ಮಂಗಳೂರಿನವರೆಗೆ ಸಂಘಟಿತರಾದ ಜನರ ವ್ಯವಸ್ಥಿತವಾದ ಇಂದು ಸ್ವಾತಂತ್ರ್ಯ ಹೋರಾಟ ಇದನ್ನು ಅಡಗಿಸಿದವರಿಗೆ ಸನ್ಮಾನಿಸಿದ ಬಗೆಯನ್ನು ಈ ಕಾದಂಬರಿ ಆಧಾರ ಸಹಿತವಾಗಿ ಉಲ್ಲೇಖಿಸಲಾಗುತ್ತದೆ.

**ಜ್ಯೋತಿ ರೈರವರ ಕನ್ನಡ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಚಳುವಳಿ**

ಹರಿಹರದ ಜ್ಯೋತಿ ರೈರವರು ಹಂಪಿ ಕನ್ನಡ ವಿವಿಗೆ ಕನ್ನಡ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಚಳುವಳಿ ಎಂಬ ಮಹಾಪ್ರಬಂಧ ಸಲ್ಲಿಸಿದ್ದು. ಇದು ಮುಖ್ಯವಾಗಿ ಕನ್ನಡ ಕಾದಂಬರಿಗಳಲ್ಲಿ ಸ್ವಾತಂತ್ಯ ಚಳುವಳಿ ಕುರಿತು ಹೆಚ್ಚು ತಿಳಿಸುತ್ತದೆ. ಇಲ್ಲಿ ಮುಖ್ಯವಾಗಿ ಕನ್ನಡ ಸಾಹಿತ್ಯದ ನವೋದಯ, ಪ್ರಗತಿಶೀಲ, ನವ್ಯ, ದಲಿತ, ಬಂಡಾಯದ ಸಂದರ್ಭದಲ್ಲಿ

ಮೂಡಿಬಂದ ಸ್ವಾತಂತ್ಯ ಹೋರಾಟದ ಕಾದಂಬರಿಗಳನ್ನು ಅಧ್ಯಯನ ಮಾಡಲಾಗಿದ್ದನ್ನು ಕಾಣಬಹುದು.

ಈ ರೀತಿ ನಿರ್ದಿಷ್ಟ ಲೇಖಕರ ಕೃತಿಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಪ್ರಗತಿಶೀಲ ಕಾಲ ಘಟ್ಟದಲ್ಲಿ ರಚಿತವಾದ ಕಾದಂಬರಿಗಳ ಕುರಿತು ಪೂರ್ಣವಾಗಿ ಅಧ್ಯಯನ ನಡೆದಿಲ್ಲ.

ಮೇಲ್ಕಾಣಿಸಿದ ಅಧ್ಯಯನಗಳು ಕೆಲವೇ ಕೃತಿಗಳ ಅಥವಾ ಲೇಖಕರ ಕೃತಿಗಳನ್ನು ಇಟ್ಟುಕೊಂಡು ಅಧ್ಯಯನ ನಡೆಸಿದ ಮಾದರಿಗಳಾಗಿವೆ ಹೊರತು ಪ್ರಗತಿಶೀಲ ಘಟ್ಟದ ಸಮಗ್ರ ಕಾದಂಬರಿಗಳ ಅಧ್ಯಯನ ನಡೆದಿಲ್ಲ. ಹೀಗಾಗಿ ಸ್ವಾತಂತ್ರ್ಯ ಹೋರಾಟದ ನೆಲೆಗಳು ಪ್ರಗತಿಶೀಲ ಕಥನ ಸಾಹಿತ್ಯದಲ್ಲಿ ಕಾಣುವ ಎಲ್ಲಿಯೂ ಅಧ್ಯಯನಕ್ಕೊಳಪಟ್ಟಿಲ್ಲ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಹೊಸ ದಿಕ್ಕಿನ ಆಲೋಚನಾ ವಿಧಾನವಾಗಿದೆ.

# ಅಧ್ಯಾಯ-೩

# ಪ್ರಗತಿಶೀಲ ಸಂವೇದನೆ ಮತ್ತು ಸ್ವಾತಂತ್ರ್ಯ ಹೋರಾಟದ ಪರಿಕಲ್ಪನೆ

## ೩.೧. ಪ್ರಗತಿಶೀಲ ಸಾಹಿತ್ಯ ಸಂವೇದನೆಯ ಇತಿಹಾಸ/ಹಿನ್ನೆಲೆ

'ಪ್ರಗತಿಶೀಲತೆ' ಕನ್ನಡ ಸಾಹಿತ್ಯ ಎದುರಿಸಬೇಕಾದ ಮೊದಲ ವಾದವೆನ್ನಬಹುದು. ಮತ್ತು ಎಲ್ಲ ವಾದಗಳಂತೆಯೇ ಇನ್ನೂ ಅಪೂರ್ಣವಾಗಿದ್ದು;. ಮಾರ್ಕ್ಸ, ಲೆನಿನ್ನರ ಸಾಮ್ಯವಾದದ ಪರಿಣಾಮವಾಗಿ ರಷಿಯಾದ ಸಾಹಿತ್ಯ ಸಂಪೂರ್ಣವಾಗಿ ಅವಸ್ತಾಂತರವನ್ನು ಪಡೆಯಿತು. ಈ ಕ್ರಾಂತಿ ಭಾರತದಲ್ಲಿ ಅದೂ ಭಾರತೀಯ ಜೀವನದ ಬಗ್ಗೆ ಇಂಗ್ಲೀಷಿನಲ್ಲಿ ಬರೆಯುವ ಮುಲ್ಕರಾಜ ಆನಂದ, ಕೆ. ಅಬ್ಬಾಸರಂಥವರ ಮೂಲಕ ಸಾಹಿತ್ಯಲೋಕವನ್ನು ಪ್ರವೇಶಿಸಿತು. (ಕೀರ್ತಿನಾಥ ಕುರ್ತಕೋಟಿ, ೨೦೧೦, ಪುಟ-೧೬೪-೧೬೫) ಅದು ಮೊಟ್ಟಮೊದಲು ಹಿಂದಿ ಸಾಹಿತ್ಯದಲ್ಲಿ ಪ್ರಗತಿವಾದಕ್ಕೆ ಎಡೆಗೊಟ್ಟಿತು. ಅಲ್ಲಿಂದ ಉಳಿದ ಸಾಹಿತ್ಯಗಳಿಗೂ ಹರಿದು ಬಂದಿತು. ಮೊದಮೊದಲು ಕನ್ನಡದ ಸಾಮಾಜಿಕ ಜೀವನಕ್ಕೆ ಸಹಜವಾಗಿ ಹೊಂದಿಕೊಳ್ಳಲಿಲ್ಲ. ದೀನ-ದಲಿತರ ಬಗ್ಗೆ, ಒಕ್ಕಲಿಗರ ಬಗ್ಗೆ ಸಾಹಿತ್ಯ ಹುಟ್ಟಲೇಬಾರದೆಂದು ಈ ಮೊದಲು ಯಾರು ಕಟ್ಟಳೆಯನ್ನು ಹಾಕಿರಲಿಲ್ಲ. ಆದರೆ ಅದೊಂದೇ ನೆಪವನ್ನು ಮುಂದೆ ಒಡ್ಡಿ 'ಪ್ರಗತಿಶೀಲತೆ' ಹಳೆಯ ಸಾಹಿತ್ಯಕ್ಕೆ ಅಂಶತಃ ಆಗಿಯೇ ಅಗಲಿ, ಪ್ರತಿಕ್ರಿಯೆಯನ್ನು ತೋರಿಸಲಾರಂಭಿಸಿತು. ಪ್ರಗತಿಶೀಲರ ದೃಷ್ಟಿಯಿಂದ ಹಳೆಯ ಸಾಹಿತ್ಯವೆಲ್ಲ 'ಬೂರ್ಜ್ವಾ ಸಾಹಿತ್ಯ'ವಾಯಿತು.

ಭಾರತದಲ್ಲಿ ಮೊದಲಿಗೆ ಉರ್ದು, ಹಿಂದಿ, ಬಂಗಾಳಿ ಭಾಷೆಗಳಲ್ಲಿ ಆರಂಭವಾದ ಪ್ರಗತಿಶೀಲ ಸಾಹಿತ್ಯ ಕ್ರಮೇಣ ಭಾರತದ ಎಲ್ಲಾ ರಾಷ್ಟ್ರೀಯ ಭಾಷೆಗಳಿಗೂ ಪ್ರಸರಿಸಿತು. ಅದರಲ್ಲೂ ಸಜ್ಜಾದ್ ಜಾಹೀರ್ ಅವರನ್ನು ಭಾರತೀಯ ಪ್ರಗತಿಶೀಲ ಸಾಹಿತ್ಯ ಚಳುವಳಿಯ ಪ್ರವರ್ತಕರೆನ್ನಬಹುದು. ಅವರ ಜೊತೆ ೧೯೩೫ರ ಆಸು ಪಾಸಿನಲ್ಲಿ ಮುಲ್ಕ್‌ರಾಜ್ ಆನಂದ್ ಜೊತೆಗೂಡಿ ಪ್ರಗತಿಶೀಲ ಬರಹಗಾರರನ್ನು ಒಂದೆಡೆ ಸೇರಿಸಲು ಶ್ರಮಿಸಿದರು. ಈ ಹೊಸ ಸಮಾಜವಾದಿ ಸಿದ್ಧಾಂತ ಯುರೋಪಿನ ಫ್ಯಾಸಿಸ್ಟ್ ದಬ್ಬಾಳಿಕೆಯ ವಿರುದ್ಧ ಕೆಲಸ ಮಾಡಲು ಪ್ರಾರಂಭಿಸಿತು. ಬೂರ್ಜ್ವಾ ರಾಷ್ಟ್ರೀಯವಾದಿಗಳು ಈ ಫ್ಯಾಸಿಸ್ಟ್ ವಿರೋಧದಲ್ಲಿ ತೊಡಗಿದ್ದರು. ಯುರೋಪಿನಲ್ಲಿ ಬದಲಾದ ರಾಜಕೀಯ ಚಿಂತನೆ ಮಾರ್ಕ್ಸ್‌ವಾದಿ ಹೋರಾಟಕ್ಕೆ ಎಡೆಮಾಡಿಕೊಟ್ಟಿತು. ಆ ಸಂದರ್ಭದಲ್ಲಿ ಸಜ್ಜಾದ್ ಜಾಹೀರ್, ಮುಲ್ಕ್‌ರಾಜ್ ಆನಂದ್,

ರಾಲ್ಫ್‌ಪಾಕ್ಸ್ ಘೋಷ್ ಮುಂತಾದವರು ಸೇರಿ 'ವಿಶ್ವ ಪ್ರಗತಿಶೀಲ ಸಾಹಿತಿಗಳ ಸಂಘ ರಚಿಸಿದರು. ಇದೇ ಪ್ರಗತಿಶೀಲ ಸಾಹಿತ್ಯ ಚಳುವಳಿಗೆ ಬುನಾದಿಯಾಯಿತು.

ರಷ್ಯಾ, ಚೀನಾ, ಇಂಡಿಯಾ, ಇಂಗ್ಲೆಂಡ್, ಅಮೇರಿಕ ಮುಂತಾದ ದೇಶಗಳು ಈ ಸಾಹಿತ್ಯ ಚಳುವಳಿಗೆ ಸ್ಪಂದಿಸಿದವು. ಜಗತ್ತಿನ ಸಾವಿರಾರು ಭಾಷೆಗಳ ಸಾಹಿತ್ಯ ಈ ಹೊರಳುವಿಕೆಗೆ ಒಗ್ಗಿಕೊಂಡಿತು. ಇಂಗ್ಲೆಂಡಿನ ವಿಶ್ವವಿದ್ಯಾನಿಲಯಗಳಲ್ಲಿ ಓದುತ್ತಿದ್ದ ಭಾರತೀಯ ವಿದ್ಯಾರ್ಥಿಗಳನ್ನು; ಲೇಖಕರನ್ನು ಬುದ್ಧಿಜೀವಿಗಳನ್ನು ಸೇರಿಸಿ ಪ್ರಗತಿಶೀಲ ಸಾಹಿತ್ಯ ಚಳುವಳಿ ಎಂದರೆ ಹೇಗಿರಬೇಕು? ಪ್ರಗತಿಶೀಲರು ಅಂದರೆ ಯಾರು? ಚಳವಳಿಯ ಉದ್ದೇಶ ಏನು? ಅರ್ಥ ಏನು? ಮುಂತಾದ ವಿಚಾರಗಳನ್ನು ಚರ್ಚಿಸಲಾಯಿತು. ಅದೇ ಸಂದರ್ಭದಲ್ಲಿ ಫ್ರೇಂಚ್‌ನ ಹೆನ್ನಿ ಬಾರ್ಬೂಸೆ, ರೋಮೆರೋಲಾ, ರಷ್ಯಾದ ಮಾಕ್ಸಿಂಗಾರ್ಕಿ ಮೊದಲಾದವರು ಸೇರಿದ್ದ 'ಸಂಸ್ಕೃತಿಯ ರಕ್ಷಣೆಗಾಗಿ ವಿಶ್ವ ಸಾಹಿತಿಗಳ ಸಮ್ಮೇಳನ ಪ್ಯಾರಿಸ್‌ನಲ್ಲಿ ಜರುಗಿತು.

ಇದರ ಪರಿಣಾಮವು ಭಾರತೀಯರಾದ ಸಜ್ಜಾದ್ ಜಾಹೀರ್, ಮುಲ್ಕರಾಜ್ ಆನಂದ ಪ್ರಗತಿಶೀಲ ಸಾಹಿತ್ಯ ಚಳವಳಿಯನ್ನು ಇಂಡಿಯಾದಲ್ಲಿ ಕಟ್ಟಿ ಬೆಳೆಸಿದರು. 'ಅಖಿಲ ಭಾರತ ಪ್ರಗತಿಶೀಲ ಲೇಖಕರ ಸಂಘ'ದ ಮೊದಲ ಅಧಿವೇಶನವನ್ನು ೧೯೩೬ರಲ್ಲಿ ಲಖನೌದಲ್ಲಿ ಏರ್ಪಡಿಸಿದರು. ಹಿಂದಿ ಲೇಖಕ ಪ್ರೇಮ್‌ಚಂದ್ ಈ ಸಮ್ಮೇಳನದ ಅಧ್ಯಕ್ಷತೆ ವಹಿಸಿದರು. ಅನಂತರ ದೆಹಲಿ, ಕೋಲ್ಕತ್ತಾಗಳಲ್ಲಿ ಅಧಿವೇಶನಗಳು ಜರುಗಿದವು. ಜವಾಹರಲಾಲ್ ನೆಹರು, ಆಚಾರ್ಯ, ನರೇಂದ್ರದೇವ, ಪ್ರೇಮ್‌ಚಂದ್, ಸುಮಿತ್ರಾನಂದನ್ ಪಂತ್, ಕಾಕಾ ಕಾಲೇಲ್ಕರ್, ಕೆ.ಎ. ಅಬ್ಬಾಸ್, ಉಮಾಶಂಕರ ಜೋಷಿ, ಮುಲ್ಕರಾಜ್ ಆನಂದ್, ಬಲ್‌ರಾಜ್ ಸಾಹ್ನಿ ಮುಂತಾದ ಲೇಖಕರು ಈ ಅಧಿವೇಶನಗಳಲ್ಲಿ ಭಾಗವಹಿಸಿದರು. ಪ್ರಗತಿಶೀಲ ಸಾಹಿತ್ಯ ಚಳುವಳಿ ಉದಯವಾಗುವ ಮುನ್ನವೇ ಪ್ರಗತಿಪರ ಆಶಯಗಳನ್ನು ಬಿಂಬಿಸಿ ಹಿಂದಿಯಲ್ಲಿ ಬರೆಯುತ್ತಿದ್ದ ಪ್ರೇಮ್ ಚಂದ್, ಶರತ್ ಚಂದ್ ಅವರಿಗೆ 'ಪ್ರಗತಿಶೀಲ ಸಾಹಿತ್ಯ ಚಳುವಳಿ' ಒಂದು ಒಳ್ಳೆಯ ವೇದಿಕೆಯಾಯಿತು.

ಕರ್ನಾಟಕದಲ್ಲಿ ಅನಕೃ, ತರಾಸು, ನಿರಂಜನ, ಕಟ್ಟೀಮನಿ ಈ ಸಾಹಿತ್ಯದಲ್ಲಿ ಗುರುತಿಸಿಕೊಂಡರು. ರಷ್ಯನ್, ಹಿಂದಿ, ಬಂಗಾಳಿ ಭಾಷೆಗಳ ಪ್ರಗತಿಶೀಲ ಲೇಖಕರ ಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸುವ ಕೆಲಸವನ್ನು ನಿರಂಜನ ಮೊದಲಾದ ಕನ್ನಡ ಪ್ರಗತಿಶೀಲ ಲೇಖಕರು ಮಾಡಿದರು. ಹೊಸಕಾಲಕ್ಕೆ ಹೊಸ ಸಾಹಿತ್ಯದ ಉದಯ ಕನ್ನಡದಲ್ಲೂ ಆಯಿತು. ಅನಕೃ ಅವರ 'ನಗ್ನಸತ್ಯ', ತರಾಸು ಅವರ 'ಮಸಣದ ಹೂ', ಕಟ್ಟೀಮನಿ ಅವರ 'ಜ್ವಾಲಾಮುಖಿಯ ಮೇಲೆ',

ನಿರಂಜನರ 'ಚಿರಸ್ಮರಣೆ' ಕೃತಿಗಳು ಆ ಕಾಲಕ್ಕೆ ಬಂದ ಹೊಸ ದೃಷ್ಟಿಕೋನದ ಪ್ರಗತಿಶೀಲ ಕಾದಂಬರಿಗಳಾಗಿ ಹೊರಹೊಮ್ಮಿದವು.

ಕನ್ನಡ ಸಾಹಿತ್ಯದಲ್ಲಿ ನವೋದಯ, ಪ್ರಗತಿಶೀಲ, ನವ್ಯ ಮತ್ತು ಬಂಡಾಯ ಇವು ಆಧುನಿಕ ಕನ್ನಡ ಸಾಹಿತ್ಯದ ನಾಲ್ಕು ಘಟ್ಟಗಳು. ಈ ಸಾಹಿತ್ಯ ಘಟ್ಟಗಳ ಚಾರಿತ್ರಿಕ ಕಾಲಗಳನ್ನು ಗಮನದಲ್ಲಿಟ್ಟುಕೊಂಡರೆ ಪ್ರಗತಿಶೀಲ ಸಾಹಿತ್ಯವು ನವೋದಯ, ನವ್ಯ, ಬಂಡಾಯ ಸಾಹಿತ್ಯ ಚಳುವಳಿಗೆ ಭಿನ್ನವಿರುವುದನ್ನು ಕಾಣುತ್ತೇವೆ. ಪ್ರಗತಿಶೀಲ ಸಾಹಿತ್ಯ ಹುಟ್ಟಿಕೊಂಡ ಚಾರಿತ್ರಿಕ ಕಾಲಕ್ಕೂ ನವೋದಯ, ನವ್ಯ, ಬಂಡಾಯ ಸಾಹಿತ್ಯಿಕ ಚಳುವಳಿಗಳ ಕಾಲದ ಚಾರಿತ್ರಿಕ ಕಾಲಕ್ಕೂ ವ್ಯತ್ಯಾಸಗಳಿರುವುದನ್ನು ಕಾಣುತ್ತೇವೆ. ಈ ದೃಷ್ಟಿಯಲ್ಲಿ ಪ್ರಗತಿಶೀಲ ಸಾಹಿತ್ಯವು ವೈಜ್ಞಾನಿಕ ಸಮಾಜವಾದವನ್ನು ಎತ್ತಿ ತೋರಿಸುತ್ತದೆ. ಆದರೆ ನವೋದಯ, ನವ್ಯ ಕಥೆಗಳಲ್ಲಿ ಮನೋರಂಜನೆಯೇ ಪ್ರಧಾನ ಕೇಂದ್ರವಾಗಿರುವುದನ್ನು ಕಾಣುತ್ತೇವೆ.

ಕನ್ನಡ ಸಾಹಿತ್ಯ ಪಂಥಗಳಲ್ಲಿ ಚಳುವಳಿಯ ಪ್ರಖರತೆ ಮತ್ತು ಪ್ರತಿಭಟನಾ ಸ್ವರೂಪಗಳನ್ನು ಪ್ರಗತಿಶೀಲರ ಬರಹಗಳಲ್ಲಿ ಮೊದಲಿಗೆ ಕಾಣುತ್ತೇವೆ. ಕನ್ನಡ ನವೋದಯ ಸಾಹಿತ್ಯದಲ್ಲಿ ಪ್ರತಿಭಟನೆಯ ಅಂಶಗಳನ್ನು ಗುರುತಿಸಬಹುದಾದರೂ ಅದೇ ಪ್ರತಿಭಟನೆ ಸಾಹಿತ್ಯವಾಗಿರಲಿಲ್ಲ ಎಂಬುದನ್ನು ಒಪ್ಪಿಕೊಳ್ಳಬಹುದು. ಪ್ರಗತಿಶೀಲ ಸಾಹಿತ್ಯ ಮೊದಲಿಗೆ ಪ್ರತಿಭಟನಾ ಸಾಹಿತ್ಯಕ್ಕೆ ಬುನಾದಿ ಹಾಕಿತು. ಪ್ರಗತಿಶೀಲ ಚಳುವಳಿ ಕನ್ನಡ ಸಾಹಿತ್ಯವನ್ನು ಹೊಸದಿಕ್ಕಿಗೆ ಸೆಳೆಯುವ ಪ್ರಯತ್ನವು ಪ್ರಗತಿಶೀಲ ಘಟ್ಟದಲ್ಲಿ ಹೆಚ್ಚು ಪ್ರಖರತೆ ಪಡೆಯಿತು. 'ಕಲೆಗಾಗಿ ಕಲೆ' ಎನ್ನುವ ಸೌಂದರ್ಯ ಮೀಮಾಂಸೆಯನ್ನು ಮೀರಿ ಪ್ರಗತಿಶೀಲ ಘಟ್ಟದ ಲೇಖಕರು 'ಜೀವನಕ್ಕಾಗಿ ಕಲೆ–ಸಾಹಿತ್ಯ' ಎನ್ನುವ ವಾಸ್ತವ ಮೀಮಾಂಸೆಯನ್ನು ಪರಿಚಯಿಸುತ್ತಾರೆ.

ಪ್ರಗತಿಶೀಲರ ಧೋರಣೆಗಳಿಗೆ ಆಕರ್ಷಿತರಾದ ಯುವ ಸಮುದಾಯ ಆ ಕಡೆ ವಾಲತೊಡಗಿದರು. ಅನುಭವಕ್ಕಿಂತ ದೃಷ್ಟಿಕೋನ ಹೆಚ್ಚು ಮಹತ್ವವನ್ನು ಪಡೆಯಿತು. ಸಾಹಿತ್ಯದ ಯಾವುದೇ ಆಂದೋಲನವಾಗಲಿ ಅನುಭವವನ್ನು ಬಿಟ್ಟು ದೃಷ್ಟಿಕೋನವನ್ನಷ್ಟೇ ಅವಲಂಬಿಸಿದರೆ ಇಲ್ಲದ ಗೊಂದಲಕ್ಕೆ ಆಸ್ಪದವಿತ್ತಂತಾಗುತ್ತದೆ ಎಂದು ಪ್ರಗತಿಶೀಲರ ಮೊದಲ ಕಥೆಗಳಲ್ಲಿ ಪಾತ್ರಗಳು ಪರಕೀಯತೆಯನ್ನು ಅನುಭವಿಸಿದವು. ಹೊಸ ಸತ್ಯವೊಂದನ್ನು ಕಾಣಿಸುವ ರಭಸದಲ್ಲಿ ಪ್ರಗತಿಶೀಲರು ವಾಚಾಳಿಗಳಾದರು ಎಂಬ ವಿಮರ್ಶೆಗೆ ಗುರಿಯಾಗಬೇಕಾಯಿತು. ಮುಂದೆ ಇದರ ದುಷ್ಪರಿಣಾಮದಿಂದ ಕೆಲವು ಸಾರೆ ಅವರು ಹೊಸ ಭಾವನೆಗಳನ್ನು ಪ್ರೇರಿಸಿಕೊಳ್ಳಬೇಕಾಯಿತು. ಅವರಲ್ಲಿ ವಿಚಾರವಾದಿಗಳೆನ್ನಿಸಿಕೊಳ್ಳುವವರು ಹಠವಾದಿಗಳಾದರು; ಅದಲ್ಲದವರು

ಭಾವನಾವಶತೆಗೆ ಜಿಗಳಿಯಂತೆ ಅಂಟಿಕೊಂಡರು. ಇದರ ಪರಿಣಾಮವಾಗಿ (ಕೀರ್ತಿನಾಥ ಕುರ್ತಕೋಟಿ, ೨೦೧೦, ಪುಟ-೧೬೪-೧೬೫) ಪ್ರಗತಿಶೀಲರಲ್ಲಿ ಎರಡು ಗುಂಪುಗಳಾದವು. ಒಂದು ಗುಂಪು ಹಠವಾದಿಗಳಂತೆ ವರ್ತಿಸಿದ ಅ.ನ.ಕೃ. ಮತ್ತು ತ.ರಾ.ಸು. ಮೊದಲಾದವರದು. ಮತ್ತೊಂದು ಭಾವನಾವಶತೆಗೆ ಒಳಗಾಗಿ ಬರೆಯತೊಡಗಿದ ನಿರಂಜನ, ಬಸವರಾಜ ಕಟ್ಟೀಮನಿ, ಹಿರೇಮಲ್ಲೂರ ಈಶ್ವರನ್ ಮೊದಲಾದವರದು.

ಇದರಿಂದ ಹೊಸ ಮನೋಧೋರಣೆ ಹುಟ್ಟಿ ಸಣ್ಣಕಥೆಗಳಲ್ಲಿ ಬದಲಾವಣೆ ಬಂದಿತು. ಕಥಾವಸ್ತುವಿನಲ್ಲಿ ಹಾಗೂ ಮನೋವೃತ್ತಿಯಲ್ಲಿ ಮೂಡಿದ ಬದಲಾವಣೆ ಬರವಣಿಗೆಯನ್ನು ಬದಲು ಮಾಡಿತು. ಹೊಸ ಕಥೆಗಳು ಹಳೆಯ ಕಥೆಗಳಿಗಿಂತ ಹೆಚ್ಚು ವೇಗವನ್ನು ಪಡೆದವು. ಸಂಭಾಷಣೆ ಹೆಚ್ಚು ಚುರುಕಾಯಿತು. ಮುಕ್ತಾಯವು ಹೆಚ್ಚು ಅನಿರೀಕ್ಷಿತವಾಯಿತು. ಮತ್ತು ಕಥೆಗಳ ಒಳಮೈಯಾಗಿ, ಪಾತ್ರ ಸೃಷ್ಟಿಯ ಮನೋಲೋಕವಾಗಿ ಒಂದು ಆಪ್ತ ವಾತಾವರಣ ಹಬ್ಬಿಕೊಂಡಿತು. ಮುಖ್ಯವಾಗಿ ಕಥೆಗಳಲ್ಲಿ ಸಮಸ್ಯೆಗಳ ಚರ್ಚೆ, ಪರಿಹಾರಗಳಿಗೆ ತೊಡಗಿದವು. ಪ್ರತಿಯೊಂದು ಹೊಸ ಕಥೆಯಲ್ಲಿಯೂ ಒಂದು ಸಮಸ್ಯೆ ಚಿಗುರಲಾರಂಭಿಸಿತು. (ಕೀರ್ತಿನಾಥ ಕುರ್ತಕೋಟಿ, ೨೦೧೦, ಪುಟ-೧೬೬.) ಹೀಗೆ ಪ್ರಗತಿಶೀಲ ಕಥೆಗಳು ಭಾರತೀಯ ಹಿನ್ನೆಲೆಯಲ್ಲಿ ಕನ್ನಡಕ್ಕೆ ಪ್ರವೇಶವನ್ನು ಪಡೆಯಿತು.

ಪ್ರಗತಿಶೀಲತೆ ಸಂವೇದನೆಯ ಪಂಥವು ನವೋದಯ ಸಂವೇದನೆಯಿಂದ ಕಳಿಚಿಕೊಂಡಿದ್ದು ಅ.ನ.ಕೃ. ಅವರಲ್ಲಿ ಮೊದಲು ಕಾಣುತ್ತೇವೆ. ೧೯೪೩ರಲ್ಲಿ ಅ.ನ.ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ಸೇರಿದ ಸಂಘಟನೆಯ ಚರ್ಚೆಯಿಂದ ಸ್ಪಷ್ಟ ಚಾಲನೆಯನ್ನು ಪ್ರಗತಿಶೀಲ ಸಾಹಿತ್ಯ ಪಡೆದುಕೊಂಡಿತು. ಇದೇ ಸಂದರ್ಭದಲ್ಲಿ ಪ್ರಗತಿಶೀಲ ಲೇಖಕರ ಸಂಘವು ಹುಟ್ಟಿಕೊಂಡಿತು. ಇವುಗಳ ವತಿಯಿಂದ ಅನೇಕ ಪ್ರಗತಿಶೀಲ ಸಾಹಿತ್ಯ ಸಮ್ಮೇಳನಗಳು ಜರುಗಿದವು. ಇವುಗಳಿಂದ ಪ್ರಗತಿಶೀಲ ಸಾಹಿತ್ಯ ನಡೆಯಬೇಕಾದ ಗೊತ್ತು-ಗುರಿ-ದಾರಿಯನ್ನು ಸ್ಪಷ್ಟಪಡಿಸಿಕೊಳ್ಳಲು ಸಹಾಯಕವಾಯಿತು. ಇದೇ ವೇಳೆಗೆ ಅನಕೃ ಅವರು 'ಪ್ರಗತಿಶೀಲ ಸಾಹಿತ್ಯ' ಎಂಬ ಕೈಪಿಡಿಯನ್ನು ಸಂಪಾದಿಸಿ ಪ್ರಕಟಿಸಿದರು. ಇದು ಪ್ರಗತಿಶೀಲ ಸಾಹಿತಿಗಳು ಸಾಗಬೇಕಾದ ಹಾದಿಯನ್ನು ಮತ್ತಷ್ಟು ಪ್ರಚುರಪಡಿಸಿತು.

ಈ ಸಾಹಿತ್ಯಿಕ ಸಂಘಟನೆಯಲ್ಲಿ ಅ.ನ.ಕೃ., ನಿರಂಜನ, ಬಸವರಾಜ ಕಟ್ಟೀಮನಿ, ತ.ರಾ.ಸು. ಎಂ.ವಿ. ಇನಾಂದಾರ್, ಕುಮಾರ ವೆಂಕಣ್ಣ, ಅರ್ಚಕ ವೆಂಕಟೇಶ್, ಕೃಷ್ಣಕುಮಾರ್ ಕಲ್ಲೂರ್, ಚದುರಂಗ ಮೊದಲಾದ ಶ್ರೇಷ್ಠ ಕಥೆಗಾರರು ಸೇರಿಕೊಂಡು ಪ್ರಗತಿಶೀಲ ಮನೋಧೋರಣೆಯನ್ನು ಸ್ಪಷ್ಟವಾಗಿ ದಾಖಲಿಸಿದರು. ಈ ಲೇಖಕರಲ್ಲಿ ತಮ್ಮ ಅಭಿವ್ಯಕ್ತಿ

ಮಾಧ್ಯಮವಾದ ಸಾಹಿತ್ಯದಲ್ಲಿ ಕಾವ್ಯ, ನಾಟಕ, ಪ್ರಬಂಧ, ಕಾದಂಬರಿಗಳ ಜೊತೆಗೆ ಕಥೆಯನ್ನು ಪರಿಣಾಮಕಾರಿಯಾಗಿ ಬಳಸಿಕೊಂಡರು. ಇತರ ಸಾಹಿತ್ಯ ರೂಪಗಳಿಗಿಂತ ಕಥೆಯು ಪ್ರಗತಿಶೀಲ ಲೇಖಕರಲ್ಲಿ ಹೆಚ್ಚಿನ ಮಟ್ಟದಲ್ಲಿ ಹೊಸರೂಪವನ್ನು ಪಡೆದುಕೊಳ್ಳುತ್ತಾ ಸಾಗಿತು.

ಈ ಜನಪ್ರಿಯ ಕಥಾ ಸಾಹಿತ್ಯ ಹಿನ್ನೆಲೆಯಲ್ಲಿ ಅವರು ಮಾರ್ಕ್ಸ್‌ವಾದವನ್ನು ತಮ್ಮ ಸೃಜನಾತ್ಮಕ ಸ್ತರದಲ್ಲಿ ಮಾನವೀಯತೆಯನ್ನು ಕಲಾತ್ಮಕವಾಗಿ ಕರಗಿಸಿಕೊಂಡು ಹೇಳತೊಡಗಿದರು. ಈ ಮೂಲಕ ಸಮಾಜದಲ್ಲಿ ಸಮಾನತೆ, ನ್ಯಾಯ, ಲಿಂಗಭೇದ, ಜಾತಿ ಭೇದ, ಸ್ತ್ರೀ ಶೋಷಣೆ, ಸ್ವಾತಂತ್ರ್ಯ ಚಳುವಳಿ, ಹೋರಾಟ, ಬದುಕಿನ ಕಟುವಾಸ್ತವತೆ, ಮಾಲಿಕ-ಕಾರ್ಮಿಕರ ನಡುವಿನ ಬಿರುಕು, ಶೋಷಿತರ ನೋವು-ನಲಿವು, ರಾಜಕೀಯ ಮುಖಂಡರ ಕರಾಳತೆ, ಕಾಮ-ಪ್ರೇಮ, ಕುಟುಂಬ-ಸಮಾಜ, ಮಠ-ಮಾನ್ಯಗಳ ಅನಾಚಾರ, ಡಂಬಾಚಾರಗಳು, ಅವೈಜ್ಞಾನಿಕ ನಂಬಿಕೆ, ಮೌಢ್ಯಗಳ ತಿರಸ್ಕಾರ ಮೊದಲಾದವುಗಳನ್ನು ತಮ್ಮ ಕಥೆಯ ವಸ್ತುವನ್ನಾಗಿ ಮಾಡಿಕೊಂಡು ಪರಿಣಾಮಕಾರಿಯಾಗಿ ದಿಟ್ಟತನದಿಂದ ಬರೆಯತೊಡಗಿದರು. ಇವುಗಳು ಪ್ರಾರಂಭದಲ್ಲಿ ಸಣ್ಣಕಥೆ ದಿನಪತ್ರಿಕೆ, ವಾರ ಪತ್ರಿಕೆ, ಮಾಸ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಾ ಸಾಗಿ, ಜನಪ್ರಿಯತೆ ಹೆಚ್ಚಾಗಿ, ಮುಂದೆ ಸಂಕಲನಗಳಾಗಿ ಪ್ರಕಟಗೊಳ್ಳತೊಡಗಿದವು.

ಹೀಗೆ ಪ್ರಗತಿಶೀಲ ಸಂವೇದನೆಯುಳ್ಳ ಕಥಾ ಪರಂಪರೆ ಬೆಳೆದು ಬಂದರೂ ಅದು ಕನ್ನಡ ಸಾಹಿತ್ಯದಲ್ಲಿ ಹೆಚ್ಚು ಕಾಲ ಉಳಿದುಕೊಳ್ಳಲು ವಿಫಲವಾಯಿತೆನ್ನಬಹುದು. ಪ್ರಗತಿಶೀಲರಲ್ಲಿ ಸ್ಪಷ್ಟವಾದ ಗುರಿಗಳು ಇದ್ದರೂ ಅವು ಭಾರತೀಯ ಸಂದರ್ಭದಲ್ಲಿ ಸಾಂಸ್ಕೃತಿಕ ಮಿತಿಯೋ ಏನೋ ಪ್ರಗತಿಶೀಲರ ಸಾಹಿತ್ಯ ಪ್ರಖರವಾಗಿ ಬೆಳೆಯದೇ ಹೋಗಿದ್ದು ಸೋಜಿಗವೆನಿಸುತ್ತದೆ. ಇದಕ್ಕೆ ಪ್ರಗತಿಶೀಲ ಲೇಖಕರ ಒಳಮನಸ್ಸಿನ ಒಡಕೇ ಕಾರಣವೆನ್ನಬಹುದು. ಅನಕೃ ಅವರಿಂದ ಸ್ಪಷ್ಟವಾದ ಹುಟ್ಟು ಪಡೆದುಕೊಂಡು ನಂತರ ಅನಕೃ ಅವರ ಹಠವಾದಿತನದ ಬಿಗಿ ಧೋರಣೆಗಳು ಕೆಲವು ಪ್ರಗತಿಶೀಲ ಲೇಖಕರಲ್ಲಿ ವೈಮನಸ್ಸನ್ನುಂಟು ಮಾಡಿತು. ಅದರಲ್ಲಿಯೂ ನಿರಂಜನ ಮತ್ತು ಹಿರೇಮಲ್ಲೂರು ಈಶ್ವರನ್ ಅವರು ತಮ್ಮದೇ ಆದ ನೆಲೆಯಲ್ಲಿ ಪ್ರಗತಿಶೀಲ ಬರವಣಿಗೆಯನ್ನು ಮುಂದುವರೆಸಿದರು.

ಪ್ರಗತಿಶೀಲ ಲೇಖಕರು ತಮ್ಮ ಸೈದ್ಧಾಂತಿಕ ಧೋರಣೆಗಳಿಗೆ ಪೂರ್ಣಪ್ರಮಾಣದಲ್ಲಿ ಬದ್ಧರಾಗಿರಲಿಲ್ಲ. ಮೊದಲನೆಯದಾಗಿ ಇವರ ಪ್ರಗತಿಯ ಗ್ರಹಿಕೆಯೇ ದೋಷಪೂರ್ಣವಾಗಿತ್ತು ಎಂಬ ವಿಮರ್ಶೆಗೆ ಸಿಕ್ಕಿಕೊಂಡಿತು. ಯುರೋಪ್ ಮತ್ತು ಭಾರತೀಯ ರಾಜಕೀಯ, ಸಾಮಾಜಿಕ, ಪರಿಸ್ಥಿತಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲ. ಪ್ರಗತಿಶೀಲ ಪಂಥದ ಕೆಲವು

ಘೋಷಣೆಗಳು ಯುರೋಪಿನ ಸಂದರ್ಭದಲ್ಲಿ ಅನಿವಾರ್ಯವಾಗಿದ್ದವು. ಆದರೆ ಭಾರತೀಯ ರಾಜಕೀಯ ಪರಿಸ್ಥಿತಿಗೆ ಅವುಗಳ ಅಗತ್ಯತೆ ಕಡಿಮೆ ಎನಿಸಿತು. ಮಧ್ಯಮವರ್ಗದ ಸಾಮಾಜಿಕ ಸಮಸ್ಯೆಗಳನ್ನು ಚಿತ್ರಿಸುವ ಇವರ ಕಳಕಳಿಯು ಅರ್ಥಪೂರ್ಣವಾದುದಾದರೂ ಅದಕ್ಕೆ ಎಲ್ಲರೂ ಒಗ್ಗಿಕೊಳ್ಳುವುದು ಕಷ್ಟವಾಯಿತು. ಆದರೆ ಅಭಿವ್ಯಕ್ತಿಗೆ ಅಗತ್ಯವಾದ ಅನುಭವವು ಈ ಲೇಖಕರಿಗೆ ಇರಲಿಲ್ಲ. ವಿಶ್ವವಿದ್ಯಾಲಯಗಳಂತಹ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿದ್ದ ಬರಹಗಾರರು, ಬೇರೆ ಬೇರೆ ಸಾಂಸ್ಕೃತಿಕ ಸಾಹಿತ್ಯಿಕ ಸಂಘಟನೆಗಳು, ನಾಡಿನ ಹಿರಿಯ ಬುದ್ಧಿ ಜೀವಿಗಳು ಇವರನ್ನು ಬೆಂಬಲಿಸಲಿಲ್ಲ. ಇದು ಪ್ರಗತಿಶೀಲರಿಗೆ ಹಿನ್ನಡೆಯೇ ಎನ್ನಬಹುದು.

ಅವ್ಯವಸ್ಥಿತ, ಗೊಂದಲಮಯವಾದ ಇವರ ನಿಲುವನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಈ ಕಾರಣದಿಂದಲೇ ವಿವಿಧ ವರ್ಗದ, ಸಂಸ್ಥೆಗಳ ಜನರು ಇವರೊಂದಿಗೆ ಕೊನೆ ಕೊನೆಗೆ ಗುರುತಿಸಿಕೊಳ್ಳಲು ಹಿಂಜರಿದರು. ಈ ನಡುವೆ ಇಂತಹ ಗೋಜಲು, ಗೊಂದಲಗಳಿಗೆ ಎಡತಾಕದೇ ಶಿವರಾಮ ಕಾರಂತ, ಚದುರಂಗ ಮೊದಲಾದವರು ಪ್ರಗತಿಪರವಾದ, ಕಲಾತ್ಮಕವೂ ಆದ ಸಾಹಿತ್ಯ ಕೃತಿಗಳನ್ನು ಬರೆಯುತ್ತಿದ್ದುದನ್ನು ಕಾಣುತ್ತೇವೆ. ಬಹುಪಾಲು ಪ್ರಗತಿಶೀಲರ ಘೋಷಣೆ, ಧೋರಣೆಗಳು ಕಮ್ಯುನಿಷ್ಟರ ಪ್ರಣಾಳಿಕೆಯಂತಿದ್ದವು. ಸಮಕಾಲೀನತೆಗೆ ಒತ್ತುಕೊಡುವ ಭರದಲ್ಲಿ ಪ್ರಗತಿಶೀಲರು ಮುಗ್ಗರಿಸಿದರೆನ್ನಬಹುದು.

"ಪ್ರಗತಿಶೀಲರು ಸ್ಪಷ್ಟವಾದ ಗುರಿಗಳನ್ನು ಹೊಂದಿದ್ದರೂ ಭಾರತದ ಸಂದರ್ಭದ ಸಾಂಸ್ಕೃತಿಕ ಮಿತಿಯೋ ಏನೋ ಪ್ರಗತಿಶೀಲ ಚಳುವಳಿ ಪ್ರಖರವಾಗಿ ಬೆಳೆಯದೇ ಹೋಯಿತು. ಪ್ರೇಮ್ ಚಂದ್, ಶರತ್ ಚಂದ್, ಮುಲ್ಕರಾಜ್ ಆನಂದ್, ಸಜ್ಜಾದ್ ಜಾಹೀರ್, ಚಟ್ಟೋಪಾಧ್ಯಾಯ, ರವೀಂದ್ರನಾಥ ಠಾಗೋರ್ ಮೊದಲಾದವರು ಉರ್ದು, ಹಿಂದಿ, ಬಂಗಾಳಿಗಳಲ್ಲಿ ರಚಿಸಿದ ಪ್ರಗತಿಶೀಲ ಸಾಹಿತ್ಯ ಪಂಥ ಒಂದು ಪರಿಪ್ರೇಕ್ಷ್ಯಕ್ಕೆ ಒಳಗಾಯಿತು. ಪ್ರಗತಿಶೀಲ ಸಾಹಿತ್ಯ ಪ್ರಕಟಣೆಯ ವಿಪುಲತೆಯಲ್ಲಿ ಕಂಡ ಯಶಸ್ಸನ್ನು ಬರವಣಿಗೆಯ ಗಟ್ಟಿತನದಲ್ಲಿ ಕಾಣದೇ ಹೋಯಿತು. ಪ್ರಗತಿಶೀಲ ಚಳವಳಿ ಸೋತ ಕಡೆ ಮುಂದಿನ ಸಾಹಿತ್ಯ ಪಂಥಗಳು ಗೆದ್ದವು. ನವ್ಯ, ಬಂಡಾಯ ಸಾಹಿತ್ಯ ಚಳುವಳಿಗಳನ್ನು ನಿಜವಾದ ಅರ್ಥದಲ್ಲಿ ನೆಲದ ಗಾಳಿ ನೀರನ್ನು ಹೀರಿಕೊಂಡು ಭಾರತೀಯ ಸಮಾಜವಾದದ ದಾರಿಯಲ್ಲಿ ಬೆಳೆದವು. ಪ್ರಗತಿಶೀಲರು ರಷ್ಯಾದ ಕ್ರಾಂತಿಯ ಮಾದರಿಯನ್ನು ಯಥಾವತ್ತು ತರಲು ಹೋಗಿ ಮುಗ್ಗರಿಸಿದ್ದನ್ನು ಹೊಸ ತಲೆಮಾರು ಕಂಡುಕೊಂಡಿತ್ತು' ಎಂಬುದನ್ನು ಪ್ರಗತಿಶೀಲತೆಯ ಒಂದು ದಶಕದ ಅಸ್ಮಿತೆ ವಿಸ್ಮೃತಿಯೆಡೆಗೆ ಸಾಗಿದ್ದನ್ನು ನೆನೆಯಬಹುದು.

ಮುಖ್ಯವಾಗಿ ದ್ವಂದ್ವ ನಿಲುವಿಗೆ ಹೆಸರಾಗಿದ್ದ ಪ್ರಗತಿಶೀಲ ಪಂಥದ ಕೇಂದ್ರಬಿಂದುವೂ ಆದ ಅನಕೃ ಅವರ ನೇತೃತ್ವದ್ದು ಮೊದಲನೆಯ ಗುಂಪು. ಈ ಗುಂಪಿನಲ್ಲಿ ತ.ರಾ.ಸು. ಅರ್ಚಕ ವೆಂಕಟೇಶ, ನಾಡಿಗೇರ, ದೇವುಡು, ಡಿ.ಕೆ. ಭಾರದ್ವಾಜ ಮುಂತಾದವರಿದ್ದಾರೆ. ಈ ಗುಂಪಿನ ಲೇಖಕರು ಮಾರ್ಕ್ಸ್ ಪ್ರಣೀತ ಸಾಮ್ಯವಾದ ಪ್ರತಿಪಾದನೆಯಿಂದ ದೂರ ಸರಿದರು. "..... ಸೌಮ್ಯವಾದದ ಭಾರತಕ್ಕೆ ರಷ್ಯಾದ ಮಾರ್ಗವಾಗಿ ಬಂದಿತೆಂದು ಜನ ತಪ್ಪು ತಿಳಿದಿದ್ದಾರೆ. ಅಂಥವರು 'ಅರಣ್ಯಕ'ಗಳನ್ನು ಸ್ವಲ್ಪ ನೋಡಬೇಕು. ಭಾರತ ತನ್ನ ಸಮಾಜವನ್ನು ಕಟ್ಟಿದ್ದೆ ಸಾಮ್ಯವಾದದ ತಳಹದಿಯ ಮೇಲೆ. ಇಂದು ಕನ್ನಡ ಕಾದಂಬರಿಕಾರ ಸಾಮ್ಯವಾದಿಯಾಗಿರುವುದು ಈ ಹಿರಿಯ ಪರಂಪರೆಯ ಪ್ರವರ್ತಕನಾಗಿ, ಮಾರ್ಕ್ಸ್‌ವಾದ ಉಪನಿಷತ್ತಿನ ತತ್ತ್ವವನ್ನು ನೆನಪು ಮಾಡಿಕೊಟ್ಟಿತು" (ಅ.ನ.ಕೃ., ೧೯೫೨, ಪುಟ-೫೩.) ಎಂದು ಅ.ನ.ಕೃ. ಅವರು ಘಂಟಾಘೋಷವಾಗಿ ಹೇಳತೊಡಗಿದರು. ಇದು ಪ್ರಗತಿಶೀಲ ಗುಂಪಿನಲ್ಲಿ ಗುರುತಿಸಿಕೊಂಡವರಿಗೆ ನುಂಗಲಾರದ ತುತ್ತಾಯಿತು. ಅಲ್ಲದೆ ಎರಡನೆಯ ಗುಂಪು ಸೃಷ್ಟಿಕೊಂಡಿತು. ಇದರಲ್ಲಿ ಪ್ರಮುಖವಾಗಿ ನಿರಂಜನ ಮತ್ತು ಕಟ್ಟೀಮನಿಯವರು ನಾಯಕರಾದರು. ಇವರಿಗೆ ಕಮ್ಯುನಿಷ್ಟ್ ಪಕ್ಷದ ನಿಕಟ ಸಂಬಂಧವಿತ್ತು. ಅದರೊಂದಿಗೆ ಇವರು ಪೂರ್ಣ ಪ್ರಮಾಣದಲ್ಲಿ ಗುರುತಿಸಿಕೊಂಡಿದ್ದರು. ಕೊನೆಯವರೆಗೂ ತಮ್ಮ ನಿಲುವಿಗೆ ಅವರು ಬದ್ಧರಾಗಿಯೇ ನಡೆದುಕೊಂಡರು.

ಮೂರನೆಯ ಗುಂಪು ಈ ಚಳವಳಿಯ ಸಿದ್ಧಾಂತ, ಧ್ಯೇಯ ಧೋರಣೆಗಳನ್ನು ಯಾವುದೇ ಸದ್ದುಗದ್ದಲವಿಲ್ಲದೇ ತಮ್ಮ ಸಾಹಿತ್ಯ ಕೃತಿಗಳ ಮೂಲಕ ಅಭಿವ್ಯಕ್ತಪಡಿಸಿದ ವಿಶಿಷ್ಟ ಗುಂಪು. ಈ ಗುಂಪಿನಲ್ಲಿ ಪ್ರಮುಖವಾಗಿ ಚದುರಂಗ, ಶ್ರೀರಂಗ, ವ್ಯಾಸರಾಯ ಬಲ್ಲಾಳ ನಾಯಕರಾದರು. ಈ ಲೇಖಕರ ಮತ್ತೊಂದು ವೈಶಿಷ್ಟ್ಯವೆಂದರೆ ಚಳುವಳಿಯ ಸಿದ್ಧಾಂತಗಳಿಗೆ ಪೂರ್ಣಪ್ರಮಾಣದಲ್ಲಿ ಜೋತು ಬೀಳದೆ ಸಾಮಾಜಿಕ ಪರಿಸ್ಥಿತಿಯಲ್ಲಿ ಉಂಟಾದ ಏರಿಳಿತಗಳಿಗನುಗುಣವಾಗಿ ವೈವಿಧ್ಯಮಯವಾದ ಸಾಹಿತ್ಯ ಕೃತಿಗಳನ್ನು ರಚಿಸಿದರು. ಆ ಮೂಲಕ ಆಧುನಿಕ ಕನ್ನಡ ಸಾಹಿತ್ಯಕ್ಕೆ ಮಹತ್ವಪೂರ್ಣವಾದ ಕೊಡುಗೆ ನೀಡಿದರು. ಇದರಿಂದ ಪ್ರಗತಿಶೀಲ ಚಳುವಳಿಯ ಕಾವು ಕಡಿಮೆಯಾಗತೊಡಗಿತು.

ಬಾಲಗ್ರಹಪೀಡಿತವಾಗಿದ್ದ ಈ ಚಳುವಳಿಗೆ ಮತ್ತೆ ಚೈತನ್ಯ ಮೂಡುವ ಸೂಚನೆಗಳು ಮರುಕಳಿಸತೊಡಗಿದವು. ಡಿ.ಕೆ. ಭಾರದ್ವಾಜರ ಅಧ್ಯಕ್ಷತೆಯಲ್ಲಿ ೧೯೫೨ರಲ್ಲಿ ಹಿರಿಯೂರಿನಲ್ಲಿ ಸಮ್ಮೇಳನ ನಡೆಯಿತು. ಈ ಸಮ್ಮೇಳನವನ್ನು ಕನ್ನಡದ ಪ್ರಗತಿಶೀಲ ಸಾಹಿತಿಗಳ ಪ್ರಥಮ ಸಮ್ಮೇಳನ ಎಂದು ಕರೆಯಲಾಯಿತು. ಈ ಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ ಭಾರದ್ವಾಜರು ಮಾಡಿದ ಭಾಷಣವು ಪ್ರಗತಿಶೀಲ ಧೋರಣೆಗಳಿಗೆ ತೀರಾ ವ್ಯತಿರಿಕ್ತವಾಗಿತ್ತು. ಕೆಲವರ

ಪ್ರಯತ್ನದಿಂದ ಚಳುವಳಿ ಅಡ್ಡದಾರಿ ಹಿಡಿದಿತ್ತು. ಕನ್ನಡ ನಾಡಿನ ಕೆಲವೇ ಪ್ರದೇಶಕ್ಕೆ ಇದು ಸೀಮಿತಗೊಂಡಿತ್ತು. ೧೯೫೨ರ ಸಮ್ಮೇಳನವು ಹೇಳಿಕೊಳ್ಳುವಂತಹ ಯಾವ ಯಶಸ್ಸನ್ನು ಸಾಧಿಸದೆ ನಿರಾಶದಾಯಕ ಮುಕ್ತಾಯ ಕಂಡಿತು. (ತ.ರಾ.ಸು., ೨೦೦೯, ಪುಟ-೪೫)

೧೯೭೬ರಲ್ಲಿ ನಿರಂಜನ ಹಾಗೂ ಕಟ್ಟೀಮನಿಯವರ 'ಪ್ರಗತಿ ಪಂಥ' ಎಂಬ ಹೆಸರಿನಲ್ಲಿ ಈ ಚಳವಳಿಯನ್ನು ಮುಂದುವರಿಸುವ ಪ್ರಯತ್ನ ಮಾಡಿದರು. ಸಮಾನ ಹಿನ್ನೆಲೆಯ ಈ ವ್ಯಕ್ತಿಗಳು ಬೇರೆ ಬೇರೆ ರಾಜಕೀಯ ಪಕ್ಷಗಳಿಗೆ ಸೇರಿದವರಾಗಿದ್ದರು. ಈ ಇಬ್ಬರು ಲೇಖಕರು ಪ್ರತಿನಿಧಿಸುತ್ತಿದ್ದ ರಾಜಕೀಯ ಪಕ್ಷಗಳ ಹೊಂದಾಣಿಕೆಯ ನೀತಿಯ ಫಲವಾಗಿ ಈ ಸಮ್ಮೇಳನವು ಸಂಘಟಿಸಲ್ಪಟ್ಟಿತು. ಇದುವರೆಗೂ ಸರಿಯಾದ ಮಾರ್ಗದಲ್ಲಿಯೇ ನಡೆದು ಬಂದಿದ್ದ ನಿರಂಜನ ಹಾಗೂ ಕಟ್ಟೀಮನಿಯವರ ದ್ವಂದ್ವ ನಿಲುವು ಈ ಸಂದರ್ಭದಲ್ಲಿ ಬೆಳಕಿಗೆ ಬಂದಿತು. ಇದರೊಂದಿಗೆ ಒಂದಲ್ಲ ಒಂದು ಗೊಂದಲ, ಏಳುಬೀಳುಗಳನ್ನು ಎದುರಿಸಿ, ಕುಂಟುತ್ತಲೇ ಸಾಗುತ್ತ ಬಂದಿದ್ದ ಪ್ರಗತಿಶೀಲ ಚಳುವಳಿಯ ಕಾವು ಸಂಪೂರ್ಣವಾಗಿ ತಣ್ಣಗಾಯಿತು.

"ಕಾಲದ ಪರೀಕ್ಷೆಯನ್ನು ಗೆಲ್ಲಲಾರದ ಲೇಖಕರನ್ನು, ಕೃತಿಗಳನ್ನು ರೂಪಿಸಿಕೊಟ್ಟ, ಒಂದು ಪೀಳಿಗೆಯಲ್ಲಿ ವಾಚನಾಸಕ್ತಿಯನ್ನು ಹುಟ್ಟಿಸಿಯೂ, ಅಭಿರುಚಿ ನಿರ್ಮಾಣವನ್ನು ಮಾಡದೆ ಹೋದ, ನವೋದಯ ಕೃತಿಗಳನ್ನು ಅನವಶ್ಯಕ ನಿಂದನೆಗೆ, ನಿರ್ಲಕ್ಷ್ಯಕ್ಕೆ ಗುರಿಮಾಡಿದ ಪ್ರಗತಿಶೀಲ ಸಾಹಿತ್ಯ ಚಳುವಳಿಯನ್ನು ಕುರಿತ ತೀರ್ಮಾನ ನಕರಾತ್ಮಕವಾಗಿರುವುದು ಅನಿವಾರ್ಯ. ಅದನ್ನು ಪ್ರಾರಂಭಿಸಿದ ಲೇಖಕರೇ ಅದನ್ನು ಕೆರೆಗೆ ತಳ್ಳಿ ಕೈ ತೊಳೆದುಕೊಂಡಿರುವಾಗ ಸಾಹಿತ್ಯ ಚರಿತ್ರೆಕಾರನ ಉಪೇಕ್ಷೆಯ ಸಮರ್ಥನೀಯವೇ. ಏಕೆಂದರೆ ಚಳುವಳಿಯು ಪ್ರಗತಿಯ ವ್ಯಂಗ್ಯಾನುಕರಣ ಮೂಲ ದ್ರವ್ಯವಲ್ಲ. ಆದರೆ ಈ ವಿಫಲತೆಗೆ ಕಾರಣ ಸಾಹಿತ್ಯವನ್ನು ಕುರಿತ ಅವರ ತಪ್ಪು ಗ್ರಹಿಕೆಗಳೇ ವಿನಾ ಪ್ರಗತಿಶೀಲ ಮನೋಧರ್ಮವಲ್ಲವೆಂಬ ಮಾತನ್ನು ನಾವು ಮರೆಯಬಾರದು." (ರಾಘವೇಂದ್ರರಾವ್ ಹೆಚ್.ಎಸ್., ೧೯೯೦, ಪುಟ-೯೩.) ಎಂದು ಹೆಚ್.ಎಸ್. ರಾಘವೇಂದ್ರರಾವ್‌ರು ಪ್ರಗತಿಶೀಲ ಸಾಹಿತ್ಯ ಸಂವೇದನೆಯ ಅಳಿವು-ಉಳಿವಿನ ಬಗೆಗೆ ವಿಮರ್ಶಿಸಿದ್ದಾರೆ. ಅವರೆ ಮುಂದು ವರೆದು "೧೯೫೨ರಿಂದ ೧೯೭೬ರ ಕಾಲದಲ್ಲಿ ಪ್ರಗತಿಶೀಲ ಚಳುವಳಿಯ ಹೆಸರು ಕೂಡ ಇರಲಿಲ್ಲ. ಲೇಖಕರಿದ್ದರು." (ರಾಘವೇಂದ್ರರಾವ್ ಹೆಚ್.ಎಸ್, ೧೯೯೦ ಪುಟ-೭೨.) ಎಂದು ಹೇಳಿರುವುದು ಪ್ರಗತಿಶೀಲ ಪಂಥದ ಅಧೋಗತಿಯನ್ನು ತೋರಿಸುತ್ತದೆ.

ಆಧುನಿಕ ಕನ್ನಡ ಸಾಹಿತ್ಯಕ್ಕೆ ಪ್ರಗತಿಶೀಲ ಲೇಖಕರು ತಮ್ಮ ಎಲ್ಲಾ ಮಿತಿಗಳ ನಡುವೆಯೂ ಕೆಲವು ಮಹತ್ವಪೂರ್ಣವಾದ ಕೊಡುಗೆಗಳನ್ನು ಪ್ರಗತಿಶೀಲ ಲೇಖಕರು ನೀಡಿದ್ದಾರೆ. ಆಧುನಿಕ

ಗದ್ಯದ ನಿರ್ಮಾಣದಲ್ಲಿ ಪ್ರಗತಿಶೀಲರ ಪಾತ್ರವೂ ಮುಖ್ಯವಾದದು. ಅದುವರೆಗೂ ಸಾಂಪ್ರದಾಯಿಕ ಆವರಣದ ವ್ಯಾಪ್ತಿಯಲ್ಲಿಯೇ ಬಳಕೆಯಾಗುತ್ತಿದ್ದ ಭಾಷೆಯು ಪ್ರಥಮ ಬಾರಿಗೆ ಆ ವ್ಯಾಪ್ತಿಯನ್ನು ಮೀರಿ ಹೊಸ ಸಾಧ್ಯತೆಗಳನ್ನು ಕಂಡುಕೊಂಡಿತು. ಸ್ವಲ್ಪ ಮಟ್ಟಿಗೆ ಅತಿ ಎನಿಸಿದರೂ ವಸ್ತು ಸನ್ನಿವೇಶ, ಹಾಗೂ ವರ್ಣನೆಗಳಿಗೆ ತಕ್ಕಂತೆ ಮೈಚಳಿ ಬಿಟ್ಟು ಭಾಷೆಯನ್ನು ಬಳಸುವ ಧೈರ್ಯತೋರಿದರು. ಪ್ರಮುಖ ಗದ್ಯ ಪ್ರಕಾರಗಳಾದ ಕಾದಂಬರಿ ಹಾಗೂ ಸಣ್ಣಕಥೆಗಳನ್ನು ಹೇರಳವಾಗಿ ರಚಿಸಿದ್ದೂ ಓದುಗ ಹಾಗೂ ಪ್ರಕಾಶನ ವರ್ಗವನ್ನು ನಿರ್ಮಿಸಿದ್ದೂ ಇವರ ಸಾಧನೆಯಾಗಿದೆ ಮಾತ್ರವಲ್ಲ ರಷ್ಯಾ ಹಾಗೂ ಯುರೋಪಿನ ಸಾಹಿತ್ಯವನ್ನು ಕನ್ನಡದ ಓದುಗರಿಗೆ ಪರಿಚಯಿಸಿದ್ದು ಜನರಲ್ಲಿ ರಾಷ್ಟ್ರೀಯ ಭಾವನೆಯನ್ನು ಜಾಗೃತಗೊಳಿಸುವ, ನಾಡು ನುಡಿಯ ಬಗೆಗೆ ಅಭಿಮಾನ ಮೂಡಿಸುವ ಕೃತಿಗಳ ರಚನೆ ಮಾಡಿದ ಈ ಚಳುವಳಿಯ ಲೇಖಕರ ಸಾಧನೆಯ ಮೆಚ್ಚಲೇಬೇಕು.

ಪ್ರಗತಿಶೀಲ ಸಾಹಿತ್ಯ ಚಳುವಳಿಯ ಹೊಸ ರೂಪ–ಬರೆಹಗಾರರ, ಕಲಾವಿದರ ವೇದಿಕೆಯಾದ ಪ್ರಗತಿಪಂಥ. ಇಂಥ ಸಂಘಟನೆ ಕರ್ನಾಟಕಕ್ಕೆ ವೈಶಿಷ್ಟ್ಯ. ಪ್ರಗತಿಪಚಿಥ ಸಂಸ್ಥಾಪನಾ ಸಮ್ಮೇಳನ ನಡೆಸಲು ವಿಜಯಪುರದ ಮಿತ್ರರು ಸಿದ್ಧತೆ ಮಾಡಿಕೊಳ್ಳುತ್ತಿದ್ದಾಗ (೧೯೭೪) ತುರ್ತುಪರಿಸ್ಥಿತಿ ಇರಲಿಲ್ಲ; ಪ್ರಗತಿಪರ ಬರೆಹಗಾರರನ್ನು ಕಲಾವಿದರನ್ನೂ ಒಟ್ಟುಗೂಡಿಸುವ ಪ್ರಯತ್ನಕ್ಕೆ ಪಕ್ಷ ರಾಜಕೀಯದ ಯಾವ ಲೇಪವೂ ಇರಲಿಲ್ಲ. ಸ್ವಾಗತ ಸಮ್ಮಿತಿಯ ಕೆಲಸ ಕುಂಠಿತವಾಯಿತು. ವರ್ಷ ಸಂದಿತು. 'ಎಮರ್ಜನ್ಸಿ ಕರಾಳ ಅಧ್ಯಾಯ ಆರಂಭವಾಯಿತು. ಹೆಸರಾಂತ ಪ್ರಗತಿಶೀಲ ಲೇಖಕರೊಬ್ಬರು " ಪ್ರಧಾನ ಇಂದಿರಾ ಗಾಂಧಿಗೆ ಬೆಂಬಲವೀಯಬೇಕು; ಇಪ್ಪತ್ತಂಶಗಳ ಅನುಷ್ಠಾನಕ್ಕೆ ದುಡಿಯಬೇಕು., ಅದಕ್ಕಾಗಿ ಪ್ರಗತಿಶೀಲ ಲೇಖಕರ ಪತ್ರಕರ್ತರ ಸಮ್ಮೇಳನಕ್ಕೆ ಕರೆಯಬೇಕು' ಎಂದು ಕರೆಕೊಟ್ಟರು. ಆಗ ನಿರಂಜನರು ಅಂಥಹ ಸಮ್ಮೇಳನಕ್ಕೆ ನನ್ನ ಬೆಂಬಲವಿರಲಿಲ್ಲ. ಬದಲು ಲೇಖಕರ ಕಲಾವಿದರ ವೇದಿಕೆಯಾಗವಂಥಹ ಪ್ರಗತಿಪಂಥವನ್ನು ಸಂಸ್ಥಾಪಿಸುವ ಸಮ್ಮೇಳನ ನಡೆಯಬೇಕು ಎಂದು ಹೇಳಿದ್ದರು. (ನಿರಂಜನ, ೨೦೦೭, ಪು೧.೨೧೪). ಪ್ರಭುತ್ವ ನೀಡಬಹುದಾದ ಚೂರುಪಾರುಗಳಿಗೆ ಮರುಳಾಗದೇ ರಾಜಕೀಯ ಆಮಿಷಗಳಿಗೆ ಬಲಿಯಾಗದೇ, ಬರಹಗಾರರ ಕಲಾವಿದರ ವಿಶಾಲ ವೇದಿಕೆಯಾಗಿ ಪ್ರಗತಿಪಂಥ ಬೆಳೆಯುವುದು ನಾನು ದೃಡವಾಗಿ ನಂಬಿದ್ದೇನೆ. ಪಂಥವೆಂದರೆ ದಾರಿ, ಮಾರ್ಗ; ಗುಂಪಲ್ಲ, ಮಠವಲ್ಲ, (ನಿರಂಜನ, ೨೦೦೭, ಪುಟ.೨೧೫). ಎಂದು ನಿರಂಜನರು ಪ್ರಗತಿಶೀಲ ಧೋರಣೆಗಳ ಬಗ್ಗೆ ಹೇಳುತ್ತಾರೆ. ಹೀಗೆ ಪ್ರಗತಿಶೀಲ ಘಟ್ಟದ ಬಗ್ಗೆ ತಿಳಿಯಬಹುದು.

## ೩.೨. ಪ್ರಗತಿಶೀಲ ಸಂವೇದನೆಯ ಸಣ್ಣಕಥೆಗಳು ಮತ್ತು ಕಥೆಗಾರರು

ಸಾಹಿತ್ಯವೆನ್ನುವದು ತನ್ನ ರೀತಿಯಲ್ಲೇ ವಿಚಾರಶೀಲತೆಯನ್ನು ಪಡೆದುಕೊಳ್ಳುತ್ತಾ ಸಾಗುವಂತಹದ್ದು. ಕಾಲಪ್ರವಾಹದಲ್ಲಿ ಸಿಕ್ಕು, ಸಾಹಿತ್ಯ ತನ್ನ ರೂಪರೇಷೆಗಳನ್ನು ಪಲ್ಲಟಿಸುತ್ತಾ, ತನ್ನ ಸಮಾಜದ ಪ್ರತಿಬಿಂಬವಾಗಿ ವಿಚಾರಶೀಲರನ್ನು ತಲುಪುತ್ತದೆ. ಮತ್ತೆ ಅವರಿಂದಲೇ ಹುಟ್ಟು ಪಡೆದುಕೊಳ್ಳುತ್ತದೆ. ೧೯೦೦ರ ಹಿಂದು ಮುಂದಿನ ದಶಕಗಳಲ್ಲಿ ಕನ್ನಡ ಸಾಹಿತ್ಯ ಅನೇಕ ಸಂಕ್ರಮಣಕ್ಕೆ ಒಳಗಾಯಿತು. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಚಂಪೂ, ಕಂದ, ತ್ರಿಪದಿ, ವಚನ, ರಗಳೆ, ಷಟ್ಪದಿ, ಚೌಪದಿ ಎಂಬ ಕಾವ್ಯರೂಪಗಳನ್ನೇ ಅಭ್ಯಸಿಸುತ್ತೇವೆ. ಅಲ್ಲಲ್ಲಿ ಕಂಡುಬರುವ ಗದ್ಯವು ಕಾವ್ಯಗಳಿಗೆ ಹೊಂದಿಕೊಂಡೆ ರಚನೆಗೊಂಡಿರುತ್ತದೆ ಹೊರತು ಸ್ವತಂತ್ರವಾಗಿ ಕಾಣಸಿಗುವುದು ತುಂಬಾ ಕಡಿಮೆ.

ಗದ್ಯ ರೂಪದ ಕನ್ನಡ ಸಾಹಿತ್ಯ ಹೆಚ್ಚು ಪ್ರಚುರಕ್ಕೆ ಬಂದಿದ್ದು; ಪಾಶ್ಚಿಮಾತ್ಯರ ಪ್ರಭಾವದಿಂದ. ೧೬ನೇ ಶತಮಾನದಲ್ಲಿ ಭಾರತಕ್ಕೆ ವ್ಯಾಪಾರಕ್ಕಾಗಿ ಬಂದ ವಿದೇಶಿಯರು ತಮ್ಮ ಜೊತೆ ಅನೇಕ ಹೊತ್ತಿಗೆಗಳನ್ನು ಹೊತ್ತು ತಂದರು. ಇಲ್ಲಿಯ ಹೊತ್ತಿಗೆಗಳನ್ನು ಹೊತ್ತುಕೊಂಡು ಹೋದರು. ಹಸ್ತಪ್ರತಿಯಲ್ಲಿದ್ದ ಭಾರತೀಯ ಸಾಹಿತ್ಯವನ್ನು ಎಷ್ಟೋ ವರ್ಷಗಳ ಕಾಲದ ನಂತರ ಅವುಗಳ ನಿಜವಾದ ಅಧ್ಯಯನ ಅವರಿಂದ ನಡೆಯಿತು. ೧೯ನೆಯ ಶತಮಾನದಷ್ಟೊತ್ತಿಗೆ ಭಾರತೀಯ ಸಾಹಿತ್ಯದ ಅಲ್ಪ ಸ್ವಲ್ಪ ಪರಿಚಯವಿದ್ದ ಆಂಗ್ಲರು ಭಾರತೀಯ ಸಾಹಿತ್ಯದ ಪುನರ್ ಸೃಷ್ಟಿಗೆ ಪಣತೊಟ್ಟಂತೆ ದುಡಿದರು. ಬಿ.ಎಲ್. ರೈಸ್, ಇ.ಪಿ.ರೈಸ್, ಹರ್ಮನ್ ಮೊಗ್ಲಿಂಗ್, ಜಾನ್ ಎಫ್. ಕಿಟೆಲ್ ಮೊದಲಾದ ಆಂಗ್ಲ ವಿದ್ವಾಂಸರ ಶ್ರಮವನ್ನು ಸ್ಮರಿಸಬೇಕು. ಹೀಗೆ ಕಾಲದ ಹೊಳೆಯಲ್ಲಿ ಸಿಕ್ಕು ಕನ್ನಡ ಸಾಹಿತ್ಯವು ಸಮುದ್ರವನ್ನು ಸೇರಲು ತಡಬಡಿಸುತ್ತಾ ಸಾಗಿತು. ನವೋದಯ, ನವ್ಯ, ನವ್ಯೋತ್ತರ, ಪ್ರಗತಿಶೀಲ, ಪ್ರಗತಿಶೀಲೋತ್ತರ, ದಲಿತ–ಬಂಡಾಯ, ಬಂಡಾಯದೋತ್ತರವಾಗಿ ಈಗ ಶಾಂತವಾಗಿ ಪ್ರಪಂಚ ಸಾಹಿತ್ಯಕ್ಷೇತ್ರದಲ್ಲಿ ತನ್ನದೇ ನೆಲೆ ಕಂಡುಕೊಂಡಿದೆ.

ನವೋದಯ, ನವ್ಯ, ಪ್ರಗತಿಶೀಲ, ದಲಿತ–ಬಂಡಾಯಗಳನ್ನು ಕನ್ನಡ ಸಾಹಿತ್ಯದ ಕಾಲಘಟ್ಟಗಳೆಂದು ಕರೆದು, ಈ ಕಾಲಘಟ್ಟಗಳಲ್ಲಿ ಹುಟ್ಟಿಕೊಂಡ ಕಾವ್ಯ, ಕಥೆ, ಕಾದಂಬರಿ, ವಿಮರ್ಶೆ, ಪ್ರಬಂಧ ಮೊದಲಾದ ರೂಪಗಳು ಪಾಶ್ಚಾತ್ಯ ಸಾಹಿತ್ಯದ ಪ್ರಭಾವವೇ ಎಂದು ಹೇಳಲಾಗುತ್ತದೆ. ಇದನ್ನು ಪೂರ್ಣಪ್ರಮಾಣದಲ್ಲಿ ಒಪ್ಪಿಕೊಳ್ಳಬೇಕೆಂದೂ ಇಲ್ಲ. ಅಥವಾ ಕೈ ಬಿಡುವಂತೆಯೂ ಇಲ್ಲ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಇದ್ದಿರಬಹುದಾದ ಗದ್ಯದಲ್ಲಿ ಇಂದಿನ

ಕಥೆ, ಕಾದಂಬರಿಯ ಲಕ್ಷಣಗಳನ್ನು ಕಾಣುತ್ತೇವೆ ಎಂದಾದರೆ; ೯-೧೦ನೆಯ ಶತಮಾನದಲ್ಲಿ ಯಾವ ವಿದೇಶಿಯರ ಪ್ರಭಾವವು ಇತ್ತು? ಇದು ಹೆಚ್ಚಿನ ಅಧ್ಯಯನಕ್ಕೆ ಒಳಪಡುವಂತಹದ್ದು.

ಪ್ರಸ್ತುತ ಕನ್ನಡದಲ್ಲಿ ಕಾದಂಬರಿಯ ತರುವಾಯ ಸಣ್ಣಕಥೆಯೇ ಅತ್ಯಂತ ಲೋಕಪ್ರಿಯವಾದ ರೂಪವಾಗಿ ಬೆಳೆದಿದೆ. ಕಥೆ ನಮ್ಮ ಜನಪದರಲ್ಲಿ ಚರಿತ್ರೆಯೊಂದಿಗೆ ಅಂಟಿಕೊಂಡು ಬಂದಿರುವಂತದ್ದು. ಜನ ಸಮುದಾಯವಾಗಿ ಬಾಳುವ ಮೊದಲೇ ಕಥೆ ಅವರನ್ನು ಆವರಿಸಿಕೊಂಡಿತ್ತು. ಅದು ಶಿಷ್ಟ ರೂಪವನ್ನು ಪಡೆದುಕೊಂಡಿದ್ದು ಇಂದು ಇತಿಹಾಸವಾಗಿದೆ. ಕಥೆಗಳು ಹಳಗನ್ನಡ, ನಡುಗನ್ನಡದಲ್ಲಿ ಮೌಖಿಕವಾಗಿದ್ದರೆ, ಹೊಸಗನ್ನಡದಲ್ಲಿ ಲಿಪಿರೂಪವನ್ನು ಪಡೆದುಕೊಂಡವು. ಹೊಸಗನ್ನಡದಲ್ಲಿ ಈವರೆಗೆ ಬಂದಿರುವ ಸಣ್ಣಕಥೆಗಳನ್ನು ಲೆಕ್ಕಹಾಕುವುದು ಕಷ್ಟ. ಸಾಹಿತ್ಯ ಓದಿ ಬಲ್ಲವನು ಸುಮ್ಮನೆ ಕುಳಿತುಕೊಳ್ಳದೇ ತನ್ನದೇ ಅನುಭವದ ವಸ್ತುವೊಂದನ್ನು ಕಥೆಯಾಗಿ ರಚನೆಗೊಂಡಿದ್ದು ಕಥಾ ಪ್ರಕಾರ ಒಂದು ವೈಶಿಷ್ಟವೇ!

ಕಥೆಯು ತನ್ನತ್ತ ಓದುಗರನ್ನು ಬಹುಬೇಗ ಸೆಳೆಯಲು ಅದು ಒಳಗೊಳ್ಳುವ ತಂತ್ರ, ವ್ಯಾಪ್ತಿ ಪ್ರಾಮುಖ್ಯವೆನಿಸುತ್ತದೆ. ಚಿಕ್ಕದರಲ್ಲಿ ಹೇಳಬೇಕಾದನ್ನು ನೇರವಾಗಿ, ಪರಿಣಾಮಕಾರಿಯಾಗಿ ಹೇಳಿ ಮುಂದುವರೆಯದೇ ತಟ್ಟನೆ ಕೊನೆಗೊಳ್ಳುತ್ತದೆ. ಕಥೆಯ ವಸ್ತು ಏನೇ ಇದ್ದರು ಅದು ಮುಟ್ಟುವುದು ಲೇಖಕನ ಬರವಣಿಗೆಯ ಶೈಲಿಯ ಮೂಲಕ. ಸಣ್ಣಕಥೆಯ ಕುರಿತು ಅನೇಕ ವಿಮರ್ಶಕರು, ಚಿಂತಕರು ಸಂಶೋಧನಾತ್ಮಕ ಅಧ್ಯಯನ ಕೈಗೊಂಡಿದ್ದಾರೆ. "ಇಂದು ಸಣ್ಣಕಥೆಯ ಬರವಣಿಗೆ ತೀರ ಹಗುರಾಗಿಬಿಟ್ಟಿದೆ. ಮೊದಮೊದಲು ಈ ಹೊಸ ಸಾಹಿತ್ಯ ಪ್ರಕಾರದ ಬಗ್ಗೆ ನಮ್ಮ ಲೇಖಕರು ಬಹಳ ಉತ್ಸಾಹವನ್ನು ತಳೆದಿದ್ದರು. ಈ ಉತ್ಸಾಹದ ಹೊಸತನವೇ ಆಗಿನ ಕಾಲದ ಎಷ್ಟೋ ಸಣ್ಣಕಥೆಗಳ ಉತ್ತಮಿಕೆಗೆ ಕಾರಣವಾಗಿದೆ. ೧೯೨೦-೧೯೩೦ರ ಅವಧಿಯಲ್ಲಿ ಬಂದ ಸಣ್ಣಕಥೆಗಳೆಲ್ಲ ಎಲ್ಲವೂ ಉತ್ತಮ ತರಗತಿಯವಾಗಿರದಿದ್ದರೂ ಅವೆಲ್ಲ ಕಥೆಗಳ ಹಿಂದೆ ಲೇಖಕರ ಪರಿಶ್ರಮವನ್ನು ಕಾಣಬಹುದಾಗಿದೆ" (ಕೀರ್ತಿನಾಥ ಕುರ್ತಕೋಟಿ, ೨೦೧೦, ಪುಟ-೧೪೦-೧೪೧.)ಎಂದು ಕೀರ್ತಿನಾಥ ಕುರ್ತಕೋಟಿಯವರು ಒಂದೆಡೆ ಹೇಳುತ್ತಾರೆ.

ಪ್ರಸ್ತುತ ಮಹಾ ಪ್ರಬಂಧದ ಅಧ್ಯಯದ ಹಿನ್ನೆಲೆಯಲ್ಲಿ ಕನ್ನಡದಲ್ಲಿ ಕಥಾ ಪರಂಪರೆಯನ್ನು ಅಧ್ಯಯನಕ್ಕೆ ತೊಡಗುವುದು ಅವಶ್ಯಕವಾಯಿತು. ಕಥೆಯು ಕನ್ನಡ ಸಾಹಿತ್ಯ ಪರಂಪರೆಯ ಪ್ರಮುಖ ಪ್ರಕಾರಗಳಲ್ಲಿ ಒಂದಾಗಿದ್ದು ಕಾವ್ಯ, ಕಾದಂಬರಿ, ನಾಟಕ, ಪ್ರಬಂದ, ಆತ್ಮಕಥನ, ವಿಚಾರ ವಿಮರ್ಶೆ ಮೊದಲಾದ ಪ್ರಮುಖ ಸಾಹಿತ್ಯ ಪ್ರಕಾರಗಳಿಗಿಂತ ಕಥೆ ಭಿನ್ನವಾಗಿ ನಿಂತುಕೊಳ್ಳುವುದು. ಒಂದು ಜನಪ್ರಿಯ ಮಾಧ್ಯಮವಾಗಿ ಕಥೆ ಇಲ್ಲಿ ಗಮನಾರ್ಹವಾಗಿದೆ. ಇದನ್ನು ಮೊತ್ತ ಮೊದಲು ಬ್ರಹ್ಮಾಂಡ ಸೃಷ್ಟಿಯ ಹಿನ್ನೆಲೆಯಲ್ಲಿ ಮಾತು ಕಲಿತ ಮನುಷ್ಯ ತನ್ನ

ಮಾತಿನೊಂದಿಗೆ ದೇವರು–ಧರ್ಮ, ದೇವ–ದಾನವರು, ಯಕ್ಷ–ಯಕ್ಷಿಯರು, ರಾಜ–ರಾಣಿಯರು, ಅತಿಮಾನುಷ–ಮಾನುಷ್ಯ, ಪ್ರಾಣಿ–ಸಸ್ಯ ಸಂಕುಲ ಹೀಗೆ ಇನ್ನು ಮೊದಲಾದ ನೇತ್ಯಾತ್ಮಕ ವಸ್ತುವನ್ನಿಟ್ಟುಕೊಂಡು ಕಥೆಯನ್ನು ಕಟ್ಟಿಕೊಳ್ಳುತ್ತಾ ಬಂದಿರುವುದು ಐತಿಹಾಸಿಕವಾದುದು. ಹೀಗಾಗಿ ಕಥೆ ಎನ್ನುವುದು 'ಹೇಳುವವನ ಆಸಕ್ತಿ ಕೇಳುವವನ ಕುತೂಹಲದೊಂದಿಗೆ ಜೀವ ಪಡೆದುಕೊಂಡಿತು'. ಜನಪದರು ಮೊತ್ತ ಮೊದಲು ತಮ್ಮ ನಾಲಿಗೆಯ ಮೇಲೆ ಕಥೆಯನ್ನು ಸೃಷ್ಟಿಸಿ, ಕುಣಿಸತೊಡಗಿದಂದಿನಿಂದಲೂ ಭಾಷೆಯ ಜತೆಗೆ ಕಥೆಯು ಮೈದಳೆಯಿತು ಎನ್ನಬಹುದು.

ಕನ್ನಡ ಸಾಹಿತ್ಯದ ಮಟ್ಟಿಗೆ ಕಥೆಯು ತನ್ನ ಜನಪದ ಮೂಲವನ್ನು ಕಳಚಿಕೊಂಡು ಉಪಲಬ್ಧವಾದದ್ದು ೯ನೆಯ ಶತಮಾನದಲ್ಲಿ ರಚನೆಗೊಂಡ 'ವಡ್ಡಾರಾಧನೆ'ಯಿಂದ. ಕನ್ನಡದ ಮೊತ್ತಮೊದಲ ಒಂದು ಮಹತ್ವದ ಗದ್ಯ ಕಥಾಸಂಗ್ರಹವಾಗಿದೆ. ಕನ್ನಡ ಕಥಾಸಾಹಿತ್ಯ ಪರಂಪರೆಯ ಹಿನ್ನೆಲೆಯಲ್ಲಿ ವಸ್ತು, ಪಾತ್ರ, ಭಾಷೆ, ಸಂವಿಧಾನ, ಆಶಯಗಳ ದೃಷ್ಟಿಯಿಂದ ಒಂದು ಪ್ರಮುಖ ಕೃತಿ ಆಗಿದೆ. ಇದೇ ಪರಂಪರೆಯಲ್ಲಿ ಮೂಡಿಬಂದ ಕನ್ನಡದ 'ಪಂಚತಂತ್ರ', 'ಕಾದಂಬರಿ', 'ಧರ್ಮಾಮೃತ', 'ಸಮಯ ಪರೀಕ್ಷೆ', ಬುದ್ಧನ ಜಾತಕ ಕಥೆಗಳು ಗದ್ಯ ಸಾಹಿತ್ಯಕ್ಕೆ ಹತ್ತಿರವಾದವುಗಳಾಗಿವೆ.

ಒಂಭತ್ತನೆಯ ಶತಮಾನದಿಂದ ಹತ್ತೊಂಬತ್ತನೆಯ ಶತಮಾನದವರೆಗೂ ಸಮೃದ್ಧವಾಗಿ ಬೆಳೆದು ಬಂದ ಮಹಾಕಾವ್ಯ ಪರಂಪರೆಯ ಹಿನ್ನೆಲೆಯಲ್ಲಿ 'ವಿಕ್ರಮಾರ್ಜುನ ವಿಜಯ', 'ಸಾಹಸಭೀಮ ವಿಜಯ', 'ರಾಮಚಂದ್ರ ಚರಿತ ಪುರಾಣ', ಕರ್ನಾಟಕ ಕಾದಂಬರಿ, ಹರಿಶ್ಚಂದ್ರಕಾವ್ಯ, ಜೈಮಿನಿಭಾರತ, ಶ್ರೀರಾಮಾಶ್ವಮೇಧ ಮೊದಲಾದ ಕಾವ್ಯಗಳು ಕಥೆಯನ್ನೇ ಪ್ರಧಾನವಾಗುಳ್ಳವಾಗಿವೆ. ಆದರೆ ಕಥೆಯು ಇಲ್ಲಿ ಗೌಣವಾಗಿ ಮೂಡಿ ಬಂದಿರುವುದನ್ನು ಯಾರೂ ಅಲ್ಲಗಳೆಯುವಂತಿಲ್ಲ.

ಹೀಗೆ ಒಂಭತ್ತನೆಯ ಶತಮಾನದಿಂದ ಇಪ್ಪತ್ತನೆಯ ಶತಮಾನದವರೆಗೆ ಅವ್ಯಾಹತವಾಗಿ ಬೆಳೆದು ಬಂದ ಕನ್ನಡ ಕಥಾ ಸಾಹಿತ್ಯ ಪರಂಪರೆಯನ್ನು ವಿದ್ವಾಂಸರು ನಾಲ್ಕು ವಿಧಗಳಲ್ಲಿ, ನಾಲ್ಕು ಹಂತಗಳಾಗಿ ಗುರುತಿಸುತ್ತಾರೆ. ಅವುಗಳೆಂದರೆ:

**ಮೊದಲ ಹಂತ**

ಇಲ್ಲಿ ಶಿವಕೋಟ್ಯಾಚಾರ್ಯನ ವಡ್ಡಾರಾಧನೆ, ದುರ್ಗಸಿಂಹನ ಪಂಚತಂತ್ರ, ಒಂದನೆಯ ನಾಗವರ್ಮನ ಕರ್ನಾಟಕ ಕಾದಂಬರಿ ಮತ್ತು ನಯಸೇನನ ಧರ್ಮಾಮೃತ ಈ ಕೃತಿಗಳಲ್ಲಿ

ಒಡಮೂಡಿದ ಕಥೆಯ ಹಂದರವನ್ನು ಗಮನಿಸುವುದಾದರೆ, ಇಲ್ಲಿ ಕಥೆಯ ಸ್ಪಷ್ಟವಾದ ರೂಪವು ನಮಗೆ ನೇರವಾಗಿ ದೊರಕದೆ ಹೋದರು ಅದರ ಅಪ್ರತ್ಯಕ್ಷವಾದ ಚಹರೆಯನ್ನು ಕಾಣುತ್ತೇವೆ.

**ಎರಡನೆ ಹಂತ**

ಈ ಹಂತದಲ್ಲಿ ಪ್ರಾಚೀನ ಮಹಾಕಾವ್ಯಗಳಾದ ಆದಿಕವಿ ಪಂಪನ 'ವಿಕ್ರಮಾರ್ಜುನ ವಿಜಯ', ರನ್ನನ 'ಸಾಹಸಭೀಮ ವಿಜಯ', ನಾಗಚಂದ್ರನ 'ರಾಮಚಂದ್ರ ಚರಿತ ಪುರಾಣ' ಮತ್ತು ರಾಘವಾಂಕನ 'ಹರಿಶ್ಚಂದ್ರ ಕಾವ್ಯ' ಗಳು ಮೊದಲನೆಯ ಮಹಾಕಾವ್ಯ ಪರಂಪರೆಯ ಹಿನ್ನೆಲೆಯಲ್ಲಿ ಮೂಡಿದ ಕಥೆಯ ಪರಿಕಲ್ಪನೆಯನ್ನು ಕಾವ್ಯದ ಪ್ರಧಾನ ಆಕರಗಳಲ್ಲೊಂದಾಗಿ ಗಮನಾರ್ಹವಾಗಿ ಸೆಳೆದುಕೊಳ್ಳುತ್ತವೆ.

**ಮೂರನೆಯ ಹಂತ**

ಇದು ಹತ್ತೊಂಭತ್ತನೆ ಶತಮಾನದ ಪ್ರಾರಂಭದ ಕಾಲವಾಗಿದ್ದು, ಇಲ್ಲಿ ಕಥೆಯು ಕಾವ್ಯದ ಪ್ರಧಾನ ನೆಲೆಯಿಂದ ಬಿಡಿಸಿಕೊಂಡು ಗದ್ಯಕ್ಕೆ ಹೊರಳುವ 'ಸಂಕ್ರಮಣ'ತೆಯ ಸೆಳುವಿಗೆ ಸಿಲುಕಿದೆ. ಇಲ್ಲಿ ಪಾಶ್ಚಿಮಾತ್ಯ ಸಾಹಿತ್ಯ ಪ್ರಭಾವವು ಕನ್ನಡ ಸಾಹಿತ್ಯಕ್ಕೆ ಅಂಟಿಕೊಳ್ಳುವುದನ್ನು ಗಮನಿಸುತ್ತೇವೆ.

**ನಾಲ್ಕನೆಯ ಹಂತ**

ಈ ಹಂತದಲ್ಲಿ ಪಶ್ಚಿಮದ 'ಶಾರ್ಟ್ ಸ್ಟೋರಿ'ಗೆ ಸಂವಾದಿಯಾಗಿ ಹುಟ್ಟಿಕೊಂಡಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಪಾಶ್ಚಾತ್ಯ ಕಥೆಗಳಲ್ಲಿನ ವಸ್ತು, ತಂತ್ರ, ಪಾತ್ರ, ಶೈಲಿ, ಆಶಯಗಳ ಗಾಢ ಪ್ರಭಾವವನ್ನು ಈ ಹಂತದಲ್ಲಿ ಕಥೆಗಳಲ್ಲಿ ಕಾಣುತ್ತೇವೆ. ಈ ಮೂಲಕ ಕಥಾ ರೂಪವು ಕನ್ನಡ ಸಾಹಿತ್ಯದಲ್ಲಿ ಒಂದು ಹೊಸ ಪರಂಪರೆಯನ್ನು ಹುಟ್ಟುಹಾಕುವ ಮೂಲಕ ಒಂದು ಸಮೃದ್ಧ ಮತ್ತು ಜನಪ್ರಿಯ ಪ್ರಕಾರವಾಗಿ ರೂಪುಗೊಳ್ಳತೊಡಗಿತು. ಇದೇ ಹಂತದಲ್ಲಿ ನಾವು ನವೋದಯ, ಪ್ರಗಶೀಲ, ನವ್ಯ ಹಾಗೂ ದಲಿತ-ಬಂಡಾಯ ಸಂವೇದನೆಯಲ್ಲಿ ಪ್ರಮುಖವಾದ ನಾಲ್ಕು ಕಾಲಘಟ್ಟಗಳನ್ನು ಕಾಣುತ್ತೇವೆ. ಈ ನಾಲ್ಕು ಘಟ್ಟಗಳಲ್ಲಿ ಕಥೆಯನ್ನು ಬರೆಯಲಾರಂಭಿಸಿದ ಕನ್ನಡ ಲೇಖಕರನ್ನು ಮುಂದೆ ಸಂಕ್ಷಿಪ್ತವಾಗಿ ಪಟ್ಟಿ ಮಾಡಲಾಗಿದೆ.

**ಕನ್ನಡ ಕಥೆಗಾರರು**

ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಿಂದ ಇಪ್ಪತ್ತನೆಯ ಶತಮಾನದ ಪ್ರಾರಂಭದವರೆಗೆ ಇಂಗ್ಲಿಷ್ ಸಾಹಿತ್ಯದಲ್ಲಿನ ಕಥೆಗಳ ಪ್ರಭಾವದ ಹಿನ್ನೆಲೆಯಲ್ಲಿ ಕನ್ನಡದ ಕಥೆಗಳನ್ನು ಬರೆಯತೊಡಗಿದ ಮಂಗಳೂರಿನ ದಿ. ಪಂಜೆ ಮಂಗೇಶರಾಯರು 'ಸಣ್ಣಕಥೆ'ಗೆ ಮೊದಲಿಗರಾಗಿದ್ದಾರೆ. ಇವರನ್ನೊಳಗೊಂಡ ನವೋದಯ ಸಂವೇದನೆಯ ಸಣ್ಣಕಥೆಗಳನ್ನು ರಚಿಸಿದ ಲೇಖಕರೆಂದರೆ ದಿ. ಕೆರೂರ ವಾಸುದೇವಾಚಾರ್ಯರರು ತಮ್ಮ 'ಶುಭೋದಯ' ಮತ್ತು 'ಸಚಿತ್ರ ಭಾರತ' ಪತ್ರಿಕೆಗಳಲ್ಲಿ ಅನೇಕ ಕಥೆಗಳನ್ನು ಪ್ರಕಟಿಸುತ್ತಾ ನಡೆದರು. ನಂತರ ಎಂ.ಎನ್.ಕಾಮತ್, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಆನಂದ, ಕೆ. ಗೋಪಾಲ ಕೃಷ್ಣರಾವ್, ಅಶ್ವತ, ಎ. ಆರ್. ಕೃಷ್ಣಶಾಸ್ತ್ರಿ, ಬಿ.ಎಂ.ಶ್ರೀ, ಎಂ. ಗೋವಿಂದ ಪೈ, ಗುಲ್ವಾಡಿ ವೆಂಕಟರಾವ್ ಶಾಂತಕವಿ, ಎಂ.ಎಸ್. ಪುಟ್ಟಣ್ಣ, ಬಿ. ವೆಂಕಟಾಚಾರ್ಯ, ಗಳಗನಾಥ, ಟಿ.ಎಸ್. ವೆಂಕಣ್ಣಯ್ಯ, ಮಧುರಚೆನ್ನ, ರಾವ್ ಬಹದ್ದೂರ್, ಎಸ್.ವ್ಹಿ. ಪರಮೇಶ್ವರಭಟ್, ಕುವೆಂಪು, ದ.ರಾ. ಬೇಂದ್ರೆ, ಮಿರ್ಜಿ ಅಣ್ಣಾರಾಯ, ಸಿದ್ಧಯ್ಯ ಪುರಾಣಿಕ, ಡಿ.ವಿ.ಜಿ., ಶಿವರಾಮ ಕಾರಂತ, ಎಂ.ಕೆ. ಇಂದಿರಾ, ಜೆ.ಪಿ. ರಾಜರತ್ನಂ, ತ್ರಿವೇಣಿ, ಕಡೆಗೊಂಡ್ಲು ಶಂಕರಭಟ್ಟ, ನಾ. ಕಸ್ತೂರಿ, ಬೀಚಿ, ಮೊದಲಾದವರನ್ನು ಹೆಸರಿಸಬಹುದು. ಇವರೆಲ್ಲರಲ್ಲಿ ಮಾಸ್ತಿ ವೆಂಕಟೇಶ ಅಯ್ಯಂಗಾರ (ಶ್ರೀನಿವಾಸ) ಅವರು ಕನ್ನಡ 'ಸಣ್ಣ ಕಥೆಗಳ ಜನಕ' ಎಂದೇ ಖ್ಯಾತರಾದರು. ಇವರ ರಂಗಪ್ಪನ ಕಥೆಗಳು ಕನ್ನಡದ ಹೊಸ ಸಾಹಿತ್ಯಲೋಕವನ್ನು ಅನಾವರಣಗೊಳಿಸಿದವು. ಈ ಮೂಲಕ ಶ್ರೀನಿವಾಸರು ಕನ್ನಡದಲ್ಲಿ ತೀರ ಅಪರೂಪದ ಶ್ರೇಷ್ಠದರ್ಜೆಯ ಗದ್ಯ ಲೇಖಕರಾಗಿ ಹೊರಹೊಮ್ಮಿದರು.

ನಂತರದ ಕನ್ನಡ ಸಾಹಿತ್ಯ ಘಟ್ಟವೆಂದರೆ ಪ್ರಗತಿಶೀಲ ಸಾಹಿತ್ಯ ಸಂವೇದನೆಯ ಸಣ್ಣಕಥೆಗಳು. ಇಲ್ಲಿ ಅ.ನ.ಕೃಷ್ಣರಾಯ, ತ.ರಾ.ಸು, ನಿರಂಜನ, ಬಸವರಾಜ ಕಟ್ಟೀಮನಿ, ಬೆಟಗೇರಿ ಕೃಷ್ಣ ಶರ್ಮ, ಟಿ.ಪಿ. ಕೈಲಾಸಂ, ಅಶ್ವತ್ಥ ನಾರಾಯಣರಾವ್, ಪರ್ವತವಾಣಿ, ಸಿ.ಪಿ.ಕೆ., ವಿ.ಎಂ. ಇನಾಂದಾರ್, ಸಿಂಪಿ ಲಿಂಗಣ್ಣ, ಶಾಂತಿನಾಥ ದೇಸಾಯಿ, ಚಂದ್ರಶೇಖರ ಪಾಟೀಲ, ಆಲನಹಳ್ಳಿ ಕೃಷ್ಣ, ಅನುಪಮಾ ನಿರಂಜನ ಮತ್ತು ಚದುರಂಗ ಮೊದಲಾದವರನ್ನು ಗುರುತಿಸಬಹುದು.

ನಂತರ ನವ್ಯ ಸಾಹಿತ್ಯ ಸಂವೇದನೆಯ ಸಣ್ಣಕಥೆಗಾರರಲ್ಲಿ ಯು.ಆರ್. ಅನಂತಮೂರ್ತಿ, ಯಶವಂತ ಚಿತ್ತಾಲ, ಬೆಸಗರಹಳ್ಳಿ ರಾಮಣ್ಣ, ಸು.ರಂ. ಎಕ್ಕುಂಡಿ, ಗಂಗಾಧರ ಚಿತ್ತಾಲ, ರಾಮಚಂದ್ರ ಶರ್ಮ, ಶಂಕರ ಮೊಕಾಶಿ ಪುಣೇಕರ, ಜಯಂತ ಕಾಯ್ಕಿಣಿ, ಬಿ.ಜಿ.ಎಲ್. ಸ್ವಾಮಿ,

ಎ.ಎನ್. ಮೂರ್ತಿರಾವ್, ಗೋರೂರು ರಾಮಸ್ವಾಮಿ ಅಯ್ಯಂಗಾರ, ಜಿ.ಎಸ್. ಆಮೂರ, ಎ.ಕೆ. ರಾಮಾನುಜನ್, ಪಿ. ಲಂಕೇಶ, ಪೂರ್ಣಚಂದ್ರ ತೇಜಸ್ವಿ ಮೊದಲಾದವರು ಪ್ರಮುಖರಾಗಿದ್ದಾರೆ.

ದಲಿತ ಬಂಡಾಯ ಸಂವೇದನೆಯ ಸಣ್ಣಕಥೆಗಾರರಲ್ಲಿ ದೇವನೂರು ಮಹಾದೇವ, ಬರಗೂರು ರಾಮಚಂದ್ರಪ್ಪ, ಕುಂ. ವೀರಭದ್ರಪ್ಪ, ಬೊಳುವಾರು ಮಹಮದ್ ಕುಂಞ, ವೀಣಾ ಶಾಂತೇಶ್ವರ, ರಹಮತ್ ತರೀಕೆರೆ, ಬಿ.ಟಿ. ಲಲಿತಾ ನಾಯಕ್, ಚಂದ್ರಶೇಖರ ಕಂಬಾರ, ವ್ಯಾಸರಾಯ ಬಲ್ಲಾಳ, ಕೆ.ವಿ. ತಿರುಮಲೇಶ, ವೈದೇಹಿ, ಅರವಿಂದ ಮಾಲಗತ್ತಿ, ಫಕೀರ ಮಹಮದ್ ಕಟ್ಪಾಡಿ, ಕಾಳೇಗೌಡ ನಾಗವಾರ, ಸಿದ್ಧಲಿಂಗಯ್ಯ, ವಿಜಯಾ ದಬ್ಬೆ, ಸಾರಾ ಅಬೂಬಕರ್, ಅಲ್ಲಮಪ್ರಭು ಬೆಟ್ಟದೂರ ಮೊದಲಾದವರನ್ನು ಹೆಸರಿಸಬಹುದು.

ಮೇಲೆ ಹೇಳಿದ ಎಲ್ಲ ಲೇಖಕರು ಒಂದೇ ಕಾಲಘಟ್ಟದಲ್ಲಿ ತಮ್ಮ ಕಥೆಗಳನ್ನು ಬರೆದರೆಂದು ಹೇಳಲುಬಾರದು. ಆದರೆ ಅವರ ಕಥೆಗಳಲ್ಲಿನ ಆಶಯಗಳನ್ನು ಇಟ್ಟುಕೊಂಡು ಹೇಳುವುದಾದರೆ ಅವರು ಎಲ್ಲ ಕಾಲಘಟ್ಟದಲ್ಲಿ ತಮ್ಮ ಕಥೆಗಳನ್ನು ಬರೆದವರಾಗಿದ್ದಾರೆ. ಅಲ್ಲದೇ ಅಂದಿನ ಸಮಾಜದಲ್ಲಿನ ಪ್ರಮುಖವೆನ್ನಬಹುದಾದ ವಸ್ತುವನ್ನಿಟ್ಟುಕೊಂಡು ಕಥೆಗಳನ್ನು ರಚಿಸಿರುವುದು ಕಂಡುಬರುತ್ತದೆ. ಕೆಲವರು ಅಂದಿನ ಕಾಲಘಟ್ಟಕ್ಕೆ ಬದ್ಧರಾಗಿ ತಮ್ಮ ಕೃತಿಗಳನ್ನು ರಚಿಸಿರುವುದುಂಟು. ಅದಕ್ಕೆ ಹೊರತಾಗಿ ಕಾವ್ಯ, ಕಥೆ, ಕಾದಂಬರಿಗಳನ್ನು ರಚಿಸಿರುವುದುಂಟು. ಕೆಲವು ಲೇಖಕರು ನವೋದಯ ಕಾಲಘಟ್ಟದಲ್ಲಿ ಬರೆಯಲು ಪ್ರಾರಂಭಿಸಿ ಪ್ರಗತಿಶೀಲ, ನವ್ಯ, ದಲಿತ ಬಂಡಾಯದವರೆಗೂ ಬರೆಯುತ್ತಾ ಬಂದಿರುವುದುಂಟು.

ಹೀಗೆ ಹತ್ತೊಂಭತ್ತನೆಯ ಶತಮಾನದ ಆರಂಭದಲ್ಲಿ ಪಾಶ್ಚಾತ್ಯ ಸಾಹಿತ್ಯದ ಪ್ರಭಾವ-ಪ್ರೇರಣೆಯ ಹಿನ್ನೆಲೆಯಲ್ಲಿ ಆವಿರ್ಭಸಿದ ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ಸಣ್ಣಕಥೆ ಪ್ರಧಾನವಾಗಿ ಕಂಡುಬರುತ್ತದೆ. ಆಧುನಿಕ ಕನ್ನಡ ಸಣ್ಣಕಥೆಯ ಈ ಬೆಳವಣಿಗೆಯನ್ನು ಪ್ರಮುಖವಾದ ನಾಲ್ಕು ಸಂವೇದನೆಗಳ ಹಿನ್ನೆಲೆಯಲ್ಲಿ ಗುರುತಿಸಿಕೊಂಡು, ಪ್ರಸ್ತುತ ಮಹಾಪ್ರಬಂಧಕ್ಕೆ ಪ್ರಗತಿಶೀಲ ಲೇಖಕರ ಕಥೆಗಳಲ್ಲಿ ವ್ಯಕ್ತವಾದ ಸ್ವಾತಂತ್ರ್ಯ ಹೋರಾಟದ ನೆಲೆಗಳು ಯಾವ ಮಟ್ಟದಲ್ಲಿವೆ? ಎಂಬುದನ್ನು ಅಧ್ಯಯನ ಮಾಡುವದಾಗಿರುವದರಿಂದ ಪ್ರಗತಿಶೀಲ ಸಣ್ಣಕಥೆಗಳ ಇತಿಹಾಸ, ಪ್ರಗತಿಶೀಲ ಲೇಖಕರು ಮತ್ತು ಅವರ ಕಥೆಗಳ ಕುರಿತು ಸಂಕ್ಷಿಪ್ತವಾಗಿ ಇಲ್ಲಿ ಅವಲೋಕಿಸಲಾಗಿದೆ.

## ಪ್ರಗತಿಶೀಲ ಸಣ್ಣ ಕಥೆಗಾರರು

ಪ್ರಗತಿಶೀಲ ಸಂವೇದನೆಯ ಹಿನ್ನೆಲೆಯಲ್ಲಿ ಪ್ರಮುಖ ಕಥೆಗಾರರನ್ನು ಮತ್ತು ಕಥೆಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ಉಲ್ಲೇಖಿಸಲಾಗಿದೆ. ನವೋದಯ ಸಾಹಿತ್ಯದಂತೆ ಪ್ರಗತಿಶೀಲ ಸಾಹಿತ್ಯವು ಕೂಡ ಪಶ್ಚಿಮ ಮತ್ತು ದೇಶೀಯ ತಾತ್ವಿಕ ಸಂವೇದನೆಯ ಹಿನ್ನೆಲೆಯಲ್ಲಿ ರೂಪಿತವಾದ ಒಂದು ಸಾಹಿತ್ಯ ಪಂಥವಾಗಿದೆ. ಮಾರ್ಕ್ಸ್‌ವಾದ, ಗಾಂಧೀವಾದ, ವಾಸ್ತವ ಪ್ರಜ್ಞೆ, ಮಾನವೀಯತೆಯ ತಾತ್ವಿಕ ಚಿಂತನೆ ಪ್ರಮುಖವಾಗಿ ಪ್ರಗತಿಶೀಲ ಲೇಖಕರನ್ನು ಕಂಡುಬರುವ ಎಡಪಂಥೀಯ ಮನೋಧೋರಣೆಯನ್ನು ಕಾಣುತ್ತೇವೆ. ಅಂತಹ ಕೆಲವು ಲೇಖಕರನ್ನು ಪ್ರಮುಖವಾಗಿ ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಆಧುನಿಕ ಸಾಹಿತ್ಯದ ಸಂಧಿಕಾಲದ (೧೯೫೦ರ ದಶಕ) ಬರಹಗಾರರಲ್ಲಿ ಪ್ರಗತಿಶೀಲರು ಪ್ರಮುಖರಾಗಿದ್ದು. ತಮ್ಮ ಸಮಕಾಲೀನ ಬರಹಗಾರರಿಗಿಂತ ಬರವಣಿಗೆಯನ್ನು ಒಂದು ಘಟ್ಟಕ್ಕೆ ಪೂರಕವಾಗಿ ದುಡಿಸಿಕೊಳ್ಳುವುದರಲ್ಲಿ ವಿಶೇಷವಾದ ವಿಚಾರವನ್ನುಂಟು ಮಾಡುವ ಮೂಲಕ ಭಿನ್ನವಾಗಿ ನಿಂತುಕೊಳ್ಳುವರು. ಶೋಷಣೆಯ ವಸ್ತುವನ್ನು ನಿರ್ವಹಿಸುವ ಸಂದರ್ಭದಲ್ಲಿ ಇವರ ಸಮಕಾಲೀನರಿಗೆ ಇರುವ ಆಡಂಬರ ಮತ್ತು ಭಾವುಕತೆಯ ಆ ಪ್ರಮಾಣದಲ್ಲಿ ಇಲ್ಲವೆಂಬುದು ಗಮನಾರ್ಹ. ಅಲ್ಲದೆ, ಅಸಮಾನತೆ, ಅಸಹನೀಯವಾದ, ನಿರ್ದಯವಾದ, ಭ್ರಷ್ಟವಾದ ಸಾಮಾಜಿಕ-ರಾಜಕೀಯ ಸಂದರ್ಭ, ಅದರಿಂದಾಗುವ ನೋವು, ಹಿಂಸೆ, ತಳಮಳ, ಅಸಹಾಯಕತೆಗಳನ್ನು ವಸ್ತುನಿಷ್ಠವಾಗಿ ಸಮಗ್ರವಾಗಿ ಗ್ರಹಿಸಲು ಪ್ರಯತ್ನಿಸುವ, ಹೀಗೆ ಗ್ರಹಿಸಿದ್ದನ್ನು ತಲ್ಲೀನತೆಯಿಂದ, ಕಲಾತ್ಮಕವಾಗಿ ಮೂಡಿಸಲು ಹೆಣಗಾಡುತ್ತಿದ್ದುದರಿಂದಲೇ ಪ್ರಗತಿಶೀಲ ಲೇಖಕರು ಗಮನಾರ್ಹತೆ ಪಡೆದುಕೊಂಡರು.

### ಅ.ನ.ಕೃಷ್ಣರಾಯ: (೧೯೦೮-೧೯೭೧)

ಪ್ರಗತಿಶೀಲ ಸಾಹಿತ್ಯದಲ್ಲಿ ಅ.ನ.ಕೃ. ಅವರು ಒಬ್ಬ ಪ್ರಮುಖ ಕಥೆಗಾರರಾಗಿದ್ದು, ಕಾದಂಬರಿ ಸಾಮ್ರಾಜ್ಞರೆಂದು ಪರಿಚಿತರಾದ ಇವರು ಕನ್ನಡ ನಾಡು-ನುಡಿ, ಸಂಸ್ಕೃತಿಗೆ ನೀಡಿದ ಕೊಡುಗೆ ಅಪಾರ. ಮಾರ್ಕ್ಸ್‌ವಾದ, ಉದಾರವಾದದ ಸಂವೇದನೆಯ ಹಿನ್ನೆಲೆಯಲ್ಲಿ ಹೃದ್ಯವಾದ ಗದ್ಯದಿಂದ, ಸಹಜ ಸಂಭಾಷಣೆಯಿಂದ, ಕುತೂಹಲ ಕೆರಳಿಸುವ ಕಥನ ಶಕ್ತಿಯಿಂದ, ಕಥೆಗಳನ್ನು ಕಟ್ಟುವ ಕಸುಬುಗಾರಿಕೆಯಿಂದ ತುಂಬ ಗಮನಾರ್ಹತೆ ಪಡೆದುಕೊಳ್ಳುವರು. ಈ ಕ್ಷೇತ್ರದಲ್ಲಿ ಇವರು ಹೆಚ್ಚು ಕೃಷಿಮಾಡದಿದ್ದರೂ ಬರೆದಿರುವ ಕಥೆಗಳಲ್ಲೇ ಸತ್ವಯುತ ಕಥೆಗಳನ್ನು ನೀಡಿದ್ದಾರೆ. ಈ ಹಿನ್ನೆಲೆಯಲ್ಲಿ ಅವರು ಪ್ರಗತಿಶೀಲತೆಯ ಉಗ್ರ ನಿಲುವು: ಅವರ ಸಣ್ಣಕಥೆಗಳಲ್ಲಿ ಅಷ್ಟಾಗಿ ಕಂಡುಬರದಿದ್ದರೂ ಜಾತೀಯತೆ, ಹಸಿವು, ಶೋಷಣೆಗಳಂಥ ಸ್ಫೋಟಕ ವಸ್ತುಗಳನ್ನು ಕುರಿತು

ಬರೆದರೆ, ಮತ್ತೆ ಕೆಲವು ಸಲ ಹೆಣ್ಣಿನ ನಿಸ್ವಾರ್ಥ ತ್ಯಾಗ, ತಾಯಿಯ ಕರುಳಿನಂತ ಕಣ್ಣೀರು ತರಿಸುವಂತ ಸಾಂಪ್ರದಾಯಿಕ ವಿಷಯಗಳನ್ನು ಕುರಿತು ಕಥೆಗಳಲ್ಲಿ ಕಾಣಿಸಿದ್ದಾರೆ. ಅವುಗಳಲ್ಲಿ 'ಮಣ್ಣಿನ ಮಗ', 'ಅಗ್ನಿಕನ್ನೆ', 'ಮುಗಿಯದ ಕಥೆ' ಮೊದಲಾದವು ಅವರ ಶ್ರೇಷ್ಠಕಥೆಗಳಾಗಿ ಗಮನಾರ್ಹತೆ ಪಡೆದುಕೊಂಡಿವೆ.

**ಬಸವರಾಜ ಕಟ್ಟೀಮನಿ: (೧೯೧೯-೧೯೮೯)**

ಪ್ರಗತಿಶೀಲ ಕಥೆಗಾರರಲ್ಲಿ ಒಬ್ಬ ಶ್ರೇಷ್ಠ ಕಥೆ, ಕಾದಂಬರಿಕಾರರಾಗಿದ್ದು, ಮಾರ್ಕ್ಸ್‌ವಾದವನ್ನು ಸಮಕಾಲೀನ ಬದುಕಿನ ಹಿನ್ನೆಲೆಯಲ್ಲಿ ತೀವ್ರ ಕಲಾತ್ಮಕವಾಗಿ ನಿರೂಪಿಸುವ ಸತ್ವಯುತ ಕಥೆಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ. ಅವುಗಳಲ್ಲಿ 'ಗಿರಿಜಾ ಕಂಡ ಸಿನಿಮಾ', 'ಬೂಟ್ ಪಾಲಿಷ್', 'ರಕ್ತಧ್ವಜ', 'ನೀಲಿಗಂಗಾ', 'ನಾಗಪಂಚಮಿಗೆ ಬಂದದ್ದು', 'ಜೀವನ ಕಲೆ', 'ಜೋಳದ ಬೆಳೆಯ ನಡುವೆ', 'ಗುಲಾಬಿ ಹೂ', 'ಸೈನಿಕ ಹೆಂಡತಿ', 'ಅಗಸ್ಟ್ ಒಂಭತ್ತು' ಅವರ ಮಹತ್ವದ ಕಥೆಗಳು. ಅವುಗಳ ಹಿನ್ನೆಲೆಯಲ್ಲಿ ಹಸಿವು, ಬಡತನ, ಸ್ವಾತಂತ್ರ್ಯ ಹೋರಾಟ, ಧರ್ಮಸಂಘರ್ಷ, ಜಾತಿ ಸಂಘರ್ಷ, ಸಮಾಜದ ಹಕ್ಕು, ಭ್ರಷ್ಟಾಚಾರ, ಅನ್ಯಾಯ, ರಾಜಕೀಯ ಸಮಾಜದ ಅನಿಷ್ಟತೆ, ಅಂಧಕಾರ, ಆಷಾಢಭೂತಿ, ಶೋಷಣೆ, ಬಡವ-ಶ್ರೀಮಂತ, ಮಾಲಿ-ಕಾರ್ಮಿಕ ಹೀಗೆ ಇವರು ಕೊಳೆ ಇರುವ ಕಡೆ ಬೆಂಕಿಯನ್ನು ಉಗುಳುವ ಕನ್ನಡದ ಜೀವಂತ ಜ್ವಾಲಾಮುಖಿಯಾಗಿ ಗಮನಾರ್ಹತೆ ಪಡೆದುಕೊಂಡಿದ್ದಾರೆ.

**ತ.ರಾ.ಸು: (೧೯೨೦-೧೯೮೪)**

ಸುಬ್ಬರಾಯರದ್ದು ಸ್ವಭಾವತಃ ಕ್ರಾಂತಿಕಾರಿ ಮನೋಭಾವ. ಈ ಮನೋಧರ್ಮವೇ ಅವರನ್ನು ಸ್ವಾತಂತ್ರ್ಯ ಚಳುವಳಿ ಹಾಗೂ ರಾಜಕೀಯ ಚಟುವಟಿಕೆಯಲ್ಲಿ ತೊಡಗಿಸಿತು. ೧೯೪೨ರ ಚಲೇಜಾವ್ ಚಳುವಳಿಯ ಸಂದರ್ಭದಲ್ಲಿ ವಿದ್ಯಾರ್ಥಿಯ ದೆಸೆಯಿಂದಲೇ ಪ್ರಗತಿಶೀಲ ಮನೋಧೋರಣೆಯನ್ನು ಮೈಗೂಡಿಸಿಕೊಂಡವರು. ಅ.ನ.ಕೃ. ಅವರ ಮಾರ್ಗದರ್ಶನದಲ್ಲಿ ಪ್ರಗತಿಶೀಲರಾಗಿ ಹಲವು ಕೃತಿಗಳನ್ನು ರಚಿಸಿದರು. ಪ್ರಮುಖವಾಗಿ ಕಾದಂಬರಿಕಾರರೆಂದು ಗುರುತಿಸಿಕೊಂಡರೂ ಕಥೆಗಳು ಅವರಿಂದ ರಚಿಸಲ್ಪಟ್ಟಿವೆ. ಪತ್ರಿಕಾ ರಂಗದಲ್ಲಿ ತಮ್ಮ ವೃತ್ತಿ ಜೀವನವನ್ನು ಆರಂಭಿಸಿದ ಇವರು ಕನ್ನಡ ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆಯನ್ನಿತ್ತಿದ್ದಾರೆ. ಪ್ರಗತಿಶೀಲ ಪಂಥದ ದೃಷ್ಟಿ, ಆದರ್ಶಗಳು ಮೆಚ್ಚುವಂತವು. ಅ.ನ.ಕೃ. ಅವರು ತ.ರಾ.ಸು. ಅವರ ಮೇಲೆ ಗಾಢವಾದ ಪರಿಣಾಮ ಬೀರಿದ್ದನ್ನು ಅವರ ಸಾಹಿತ್ಯ ಅವಲೋಕಿಸಿದವರಿಗೆ ವೇದ್ಯವಾಗುತ್ತದೆ. 'ತೊಟ್ಟಿಲು ತೂಗಿತು', 'ಗಿರಿಮಲ್ಲಿಗೆಯ ನಂದನದಲ್ಲಿ',

'ಇವೇ ನಿಜವಾದ ಸಂಪತ್ತು', 'ಮೂರು ಮತ್ತೊಂದು ಹೆಸರಿನಲ್ಲಿ', 'ಎಕ್ಸ್' ಮೊದಲಾದ ಕಥೆಗಳನ್ನು ಪ್ರಕಟಿಸಿದ್ದಾರೆ. ಇದರೊಂದಿಗೆ ಕಾದಂಬರಿ, ನಾಟಕ, ಪ್ರಬಂಧಗಳು ಮೂಡಿಬಂದಿವೆ.

**ನಿರಂಜನ: (೧೯೨೩–೧೯೯೨)**

ಪತ್ರಕರ್ತರಾಗಿ, ಕಥೆ–ಕಾದಂಬರಿಕಾರರಾಗಿ ಹೆಸರುಗಳಿಸಿದ ಕುಳಕುಂದ ಶಿವರಾಯರ ಕಾವ್ಯನಾಮ ನಿರಂಜನ. ದಕ್ಷಿಣ ಕನ್ನಡ ಜಿಲ್ಲೆಯ ಕುಳಕುಂದದಲ್ಲಿ ಇವರ ಜನನ, ಪ್ರಗತಿಶೀಲ ಸಾಹಿತ್ಯದಲ್ಲಿ ಒಬ್ಬ ಅಪ್ಪಟ ಮಾರ್ಕ್ಸ್‌ವಾದಿ ಸೃಜನಶೀಲ ಬಹಗಾರರಾಗಿದ್ದು, ಆ ಹಿನ್ನೆಲೆಯಲ್ಲಿ ಶ್ರೇಷ್ಠ ಸಣ್ಣಕಥೆಗಳನ್ನು ನೀಡಿದ್ದಾರೆ. ಅವುಗಳಲ್ಲಿ 'ರಕ್ತ ಸರೋವರ' (೧೯೪೭), 'ಸಂಧಿಕಾಲ' (೧೯೪೩), 'ಕೊನೆಯ ಗಿರಾಕಿ' (೧೯೫೧), ರಾಷ್ಟ್ರಬಂಧು, ಅಯ್ಯನ್ಯೇ, ಕೆಸರು ಕೊಚ್ಚೆಯ ಕಮಲ, ನೀಲೇಶ್ವರದಲ್ಲಿ ಮೊದಲಾದವು ಅವರ ಗಮನಾರ್ಹ ಕಥೆಗಳಾಗಿವೆ. ಆ ಹಿನ್ನೆಲೆಯಲ್ಲಿ ಶೋಷಣೆ, ಬಡತನ, ಪಟ್ಟಭದ್ರ ಹಿತಾಸಕ್ತಿ ಸಾಮಾಜಿಕ ಅಸಮತೋಲನಗಳನ್ನು ಕುರಿತು ಸಿಟ್ಟು, ಅಸಹನೆ, ಪ್ರತಿಭಟನೆಗಳು ಉಗ್ರವಾಗಿ ಕಾಣಿಸಿದ್ದಾರೆ. ಅಲ್ಲದೆ ಅವರ ಕಥೆಗಳಲ್ಲಿ ಆವೇಶ, ಭಾವುಕತೆ, ಪಕ್ಷಪಾತ ದೃಷ್ಟಿಕೋನದಿಂದಾಗಿ ಅವರ ಗ್ರಹಿಕೆ ಏಕಮುಖದ್ದಾಗಿ, ಮಿತಿಯನ್ನು ಕೂಡ ಪಡೆದುಕೊಂಡಿರುವುದು ಗಮನಾರ್ಹ. ಒಟ್ಟಿನಲ್ಲಿ ಅವರ ಎಲ್ಲ ಕಥೆಗಳು ಕನ್ನಡ ಕಥಾಸಾಹಿತ್ಯ ಸಂದರ್ಭದಲ್ಲಿ ತುಂಬ ಮೌಲಿಕವೆಂದು ಗುರುತಿಸಬಹುದಾಗಿದೆ.

**ಚದುರಂಗ: (೧೯೧೬–೧೯೯೮)**

ಚದುರಂಗರು ಪ್ರಗತಿಶೀಲ ಸಾಹಿತ್ಯದಲ್ಲಿ ಒಬ್ಬ ಪ್ರತಿಭಾವಂತ ಮತ್ತು ಸತ್ವಯುತ ಕಥೆ–ಕಾದಂಬರಿಕಾರರಾಗಿದ್ದು ವಾಸ್ತವ ಜಗತ್ತಿನ ಭ್ರಷ್ಟತೆ, ಬಡವರ ಅಸಹಾಯಕತೆ, ಜಡತೆ, ನಮ್ಮ ಸಾಮಾಜಿಕ ವ್ಯವಸ್ಥೆ ಮಾನವ ಸಂಬಂಧಗಳು ಹೇಗೆ ಅಮಾನವೀಯ, ಅಸೂಕ್ಷ್ಮ, ಭ್ರಷ್ಟತೆ, ಕ್ರೂರತೆಯಿಂದ ಕೂಡಿವೆ ಹಾಗೂ ಹಳ್ಳಿಯ ಮುಗ್ಧತೆ, ಪ್ರಾಮಾಣಿಕತನ, ಪರೋಪಕಾರಿಗುಣ, ಉದಾತ್ತತನ, ಕುರುಡು ನಂಬಿಕೆ, ಮುಗ್ಧತೆ ಹೊಡೆಯುವಿಕೆ, ಕ್ರಾಂತಿಕಾರಿಕ ಮೊದಲಾದ ಮಹತ್ವದ ಅಂಶಗಳ ಮೇಲೆ ಅವರ ಕಥೆಗಳು ಕನ್ನಡಿ ಹಿಡಿಯುವುವು. ಅವುಗಳಲ್ಲಿ 'ಸ್ವಪ್ನಸುಂದರಿ', 'ಇಣುಕು ನೋಟ', 'ಶವದ ಮನೆ', 'ಮೀನಿನ ಹೆಜ್ಜೆ', 'ಬಂಗಾರದ ಗೆಜ್ಜೆ' ಮೊದಲಾದವು ಅವರ ಅತ್ಯುತ್ತಮ ಕಥೆಗಳಾಗಿ ಗಮನಾರ್ಹತೆ ಪಡೆದುಕೊಂಡಿವೆ.

**ಮಿರ್ಜಿ ಅಣ್ಣಾರಾಯ: (೧೯೧೮–೧೯೭೫)**

ಅಣ್ಣಾರಾಯರು ಕಥೆಗಾರ, ಕಾದಂಬರಿಕಾರ, ಪ್ರಬಂಧಕಾರ, ಸಂಶೋಧಕ, ಚಿಂತಕ, ತತ್ತ್ವವೇತ್ತ ಆದರ್ಶ ಶಿಕ್ಷಕ, ಸರಳ ಆದರ್ಶಜೀವಿಯಾಗಿ ಪ್ರಗತಿಶೀಲ ಮನೋಧೋರಣೆಯ

ಬರಹಗಳನ್ನು ರಚಿಸಿದ್ದಾರೆ. ಚಲೇಜಾವ್ ಚಳುವಳಿಯಲ್ಲಿ ಭಾಗವಹಿಸಿದ ಅನುಭವ ಇವರ ಸಾಹಿತ್ಯಕ್ಕೆ ಹೆಚ್ಚು ಪ್ರೇರಣೆ ಎಂಬುದನ್ನು ಗಮನಿಸಬಹುದು. ಕನ್ನಡ, ಸಂಸ್ಕೃತ, ಗುಜರಾತಿ ಭಾಷೆಗಳಲ್ಲಿ ಪರಿಣಿತಿಯನ್ನು ಪಡೆದಿದ್ದರು. ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರೀಯವಾಗಿ ಪಾಲ್ಗೊಂಡಿದ್ದರು ಇದರ ಪ್ರಭಾವವೇ ನಮ್ಮೂರ ನಾಯಕರು, 'ರಾಷ್ಟ್ರಪುರುಷ', 'ರಾಮಣ್ಣ ಮಾಸ್ತ್ರ', 'ಶ್ರೇಯಾಂಕ', 'ಪ್ರತಿಸರಕಾರ', 'ಅಶೋಕ ಚಕ್ರ', 'ಎರಡುಹೆಜ್ಜೆ', 'ಹದಗೆಟ್ಟಹಳ್ಳಿ' ಮುಂತಾದ ಕಥೆ–ಕಾದಂಬರಿಗಳು ಮೈತಳೆದವು.

ಇವರಲ್ಲದೆ ತ.ರಾ.ಸುಬ್ಬರಾವ್ ಅವರ 'ರೂಪಸಿ', 'ಗಿರಿಮಲ್ಲಿಗೆಯ ಸ್ವಚಂದವನದಲ್ಲಿ', ಕೋ. ಚೆನ್ನಬಸಪ್ಪ ಅವರ 'ಮುಕ್ಕಣ್ಣನ ಮುಕ್ತಿ', ಶ್ರೀವರಗಿರಿ ಅವರ 'ದ್ಯಾಮಕೆಂಚಿ', ಶ್ರೀ ಎಸ್. ಅನಂತನಾರಾಯಣ ಅವರ 'ಮಾನವ ಪ್ರೇಮ', ಶ್ರೀಮತಿ ಅನುಪಮಾ ನಿರಂಜನ ಅವರ 'ದೇವರೇ ಬರಲಿಲ್ಲ', ಶ್ರೀರಂಗ ಅವರ 'ಭೂಮಿ ಕಂಪಿಸಲಿಲ್ಲ', ಶ್ರೀಸದಾಶಿವ ಅವರ 'ನಲ್ಲಿಯಲ್ಲಿ ನೀರು ಬಂದಿತು!!!', ಹಾಗೆಯೇ ಹಿರೆಮಲ್ಲೂರು ಈಶ್ವರನ್ ಅವರ ಕಥೆಗಳನ್ನು ಪ್ರಗತಿಶೀಲ ಸಂವೇದನೆಯಲ್ಲಿ ನೋಡಬಹುದು.

ಹೀಗೆ ಮೊದಲಾದವರನ್ನು ನಾವಿಲ್ಲಿ ಪ್ರಮುಖ ಪ್ರಗತಿಶೀಲ ಸಂವೇದನೆಯ ಕಥೆಗಾರರನ್ನಾಗಿ ಗಮನಿಸಬಹುದು. ಇವರ ಈಡೀ ಬರವಣಿಗೆಯ ಹಿನ್ನೆಲೆಯಲ್ಲಿ ಪ್ರಮುಖವಾಗಿ ವಾಸ್ತವವಾದ, ಆಡುಮಾತಿನ ಬಳಕೆ, ಸಾಮಾನ್ಯ ಮನುಷ್ಯನ ಕಷ್ಟ–ಸುಖ, ದಿಟ್ಟ ಪ್ರತಿಭಟನೆ, ಬಡವ–ಶ್ರೀಮಂತರ ಭೇದ, ಸ್ತ್ರೀಯರ ಶೋಷಣೆ, ಕಾಮ–ಪ್ರೇಮ, ಬಡತನ, ದ್ರಾರಿದ್ರ್ಯತನ, ರೈತರ ನೋವು–ನಲಿವು, ಕೌಟುಂಬಿಕ ವಿಘಟನೆ ಹೀಗೆ ಇನ್ನೂ ಮುಂತಾದ ಪ್ರಮುಖ ಸಂವೇದನೆಗಳ ಮೇಲೆ ಕೇಂದ್ರೀಕರಿಸಿ ಬರೆದ ಬರವಣಿಗೆಯು ತುಂಬ ಮಹತ್ವದ್ದಾಗಿದೆ.

ಭಾರತ ಸ್ವಾತಂತ್ರೋತ್ತರ ದಿಶೆಯಲ್ಲಿ ಉಂಟಾದ ಪರಿಣಾಮಗಳ ಜೊತೆಗೆ ಸ್ವಾತಂತ್ರ್ಯ ಪಡೆಯುವ ತುರ್ತಿನಲ್ಲಿ ಕಟ್ಟಿಕೊಂಡ ಕನಸು, ಆದರ್ಶ, ನಂಬಿಕೆ, ಬದಲಾವಣೆ, ಧ್ಯೇಯಧೋರಣೆ ನಿಲವು, ಭರವಸೆಗಳೆಲ್ಲವು ನುಚ್ಚುನೂರಾದವು. ಅದರ ಹಿನ್ನಲೆಯಲ್ಲಿ ಭ್ರಮೆ, ನಿರಾಸೆ, ಏಕಾಂಗಿತನ, ನಿರುದ್ಯೋಗ, ಕುಟುಂಬ ವಿಘಟನೆ, ರಾಜಕೀಯ ಬದಲಾವಣೆ, ಕೈಗಾರಿಕ ಕ್ರಾಂತಿ ಇನ್ನೂ ಮೊದಲಾದ ಜಾಗತಿಕ ಬಿಕ್ಕಟ್ಟುಗಳ ಕುರಿತು ತಮ್ಮ ಕಥೆಗಳಲ್ಲಿ ಪ್ರಧಾನವಸ್ತುವನ್ನಾಗಿ ಮಾಡಿಕೊಂಡು ಪ್ರಗತಿಶೀಲರು ಬರೆಯತೊಡಗಿದರು. ಪ್ರಸ್ತುತ ಮಹಾ ಪ್ರಬಂಧದಲ್ಲಿ ಸ್ವಾತಂತ್ರ್ಯ ಹೋರಾಟಗಳ ಚಿತ್ರಣಗಳು ಸ್ವಾತಂತ್ರ್ಯಪೂರ್ವದಲ್ಲಿ ಮತ್ತು ಸ್ವಾತಂತ್ರ್ಯ ನಂತರದಲ್ಲಿ ಹೇಗೆ ಕಥೆಗಳಿಗೆ ವಸ್ತುವಾದವು ಎಂಬುದನ್ನು ವಿಶ್ಲೇಷಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧವು ಪ್ರಗತಿಶೀಲ ಕಥಾ ಸಾಹಿತ್ಯದಲ್ಲಿ ಒಡಮೂಡಿದ ಸ್ವಾತಂತ್ರ್ಯ ಚಳುವಳಿಯನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡಿರುವದರಿಂದ ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಪ್ರಗತಿಶೀಲ ಸಾಹಿತ್ಯಕ್ಕೆ ಹೆಚ್ಚಿನ ಮನ್ನಣೆಯನ್ನು ಸಾಂಸ್ಕೃತಿಕ ದೃಷ್ಟಿಯಿಂದ, ರಾಜಕೀಯ ಮತ್ತು ಚಾರಿತ್ರಿಕ ದೃಷ್ಟಿಯಿಂದ ಕಲ್ಪಿಸಬಹುದಾಗಿದೆ. ಆಧುನಿಕ ಕನ್ನಡ ಸಾಹಿತ್ಯದ ಸಾಂಸ್ಕೃತಿಕ ಇತಿ ಮಿತಿಗಳನ್ನು ಸೂಚ್ಯವಾಗಿ ಮತ್ತು ಸಂಕ್ಷಿಪ್ತವಾಗಿ ತಿಳಿಸಿಕೊಡುತ್ತಾ ಪ್ರಗತಿಶೀಲ ಚಳುವಳಿಯ ಸಾಹಿತ್ಯಿಕ ಸಾಧನೆಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಕನ್ನಡ ಪ್ರಗತಿಶೀಲ ಸಾಹಿತ್ಯ ಸಂದರ್ಭದಲ್ಲಿ ಅನಕೃ, ತರಾಸು, ಬಸವರಾಜ ಕಟ್ಟೀಮನಿ, ನಿರಂಜನ ಮತ್ತು ಚದುರಂಗ ಇವರ ಪ್ರಾತಿನಿಧಿಕ ಕಥೆಗಳನ್ನು ಮಾತ್ರ ಅಧ್ಯಯನದ ವ್ಯಾಪ್ತಿಗೆ ಬಳಸಿಕೊಳ್ಳಲಾಗಿದೆ. ಪ್ರಗತಿಶೀಲ ಲೇಖಕರ ಪ್ರಗತಿಶೀಲ ಚಳುವಳಿಯು ಹೆಚ್ಚಾಗಿ ಕಥೆ–ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡಷ್ಟು ಕಾವ್ಯ, ನಾಟಕ, ಪ್ರಬಂಧಗಳಲ್ಲಿ ಕಾಣುವುದಿಲ್ಲ. ಹೀಗಾಗಿ ಪ್ರಸ್ತುತ ಮಹಾಪ್ರಬಂಧದ ಅಧ್ಯಯನವು ಹೆಚ್ಚಾಗಿ ಕಥೆ ಮತ್ತು ಕಾದಂಬರಿಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ವಿಶ್ಲೇಷಿಸಲಾಗಿದೆ.

ಪ್ರಗತಿಶೀಲ ಲೇಖಕರು ಸಮಾಜದ ಬಡತನ, ಸೂಳೆಗಾರಿಕೆ, ಹಸಿವು ಮುಂತಾದ ಸಾಮಾಜಿಕ ವಿಷಮತೆಗಳನ್ನು ಕುರಿತು ತಮ್ಮ ಕಥೆಗಳಲ್ಲಿ ಬರೆಯತೊಡಗಿದ್ದು, ಆ ವಸ್ತುಗಳನ್ನೇ ಕಥೆಯಲ್ಲಿ ಪ್ರಧಾನವಾಗಿ ಎತ್ತಿ ಹೇಳುತ್ತಾರೆ. ವಸಾಹತುಶಾಹಿ, ಸಾಮ್ರಾಜ್ಯಶಾಹಿ, ಪುರೋಹಿತಶಾಹಿ, ಬಂಡವಾಳಶಾಹಿಗಳಂತಹ ಅನಿಷ್ಠಗಳ ವಿರುದ್ಧ ದನಿ ಎತ್ತಿದರು. ಹಳ್ಳಿ ನಗರ, ಬಡವ ಶ್ರೀಮಂತ, ಕಾರ್ಮಿಕ ಬಂಡವಾಳಶಾಹಿಗಳ ನಡುವೆ ಇದ್ದ ತಾರತಮ್ಯವನ್ನು ಬಯಲು ಮಾಡಿದರು. ಪ್ರಗತಿಶೀಲ ಚಳುವಳಿ ಹೊಸ ದೃಷ್ಟಿಕೋನದಲ್ಲಿ ಹುಟ್ಟಿಕೊಂಡ ಸಾಹಿತ್ಯ ಸಂವೇದನ ಪಂಥವಾಗಿದೆ.

### ೩.೩. ಪ್ರಗತಿಶೀಲ ಕಥೆಗಳ ಗುಣಲಕ್ಷಣ

ಪ್ರಗತಿಶೀಲ ಸಣ್ಣಕಥೆಗಳನ್ನು ಬರೆಯ ತೊಡಗಿದ ನಿರಂಜನ, ಕಟ್ಟೀಮನಿ, ಚದುರಂಗ, ಅನಕೃ, ತರಾಸು, ಹಿರೇಮಲ್ಲೂರು ಈಶ್ವರನ್, ಚದುರಂಗ ಮೊದಲಾದವರ ಕಥೆಗಳನ್ನು ಗಮನಿಸುವದಾದರೆ ಪ್ರಗತಿಶೀಲ ಕಥೆಗಳು ತಮ್ಮದೇ ಆದ ಕೆಲವು ಲಕ್ಷಣಗಳು ಹೊಂದಿವೆ ಎನ್ನಬಹುದು. ಆದರೆ ಇತರ ಪಂಥಗಳ ಸಣ್ಣಕಥೆಗೆ ಹೋಲಿಸಿದರೆ ಪ್ರಗತಿಶೀಲ ಸಾಹಿತ್ಯ ಚಳುವಳಿಯ ಕಥೆಗಳು ಭಿನ್ನವೆನಿಸುತ್ತವೆ. ಅಂತಹ ಕೆಲವು ಲಕ್ಷಣಗಳನ್ನು ಈ ರೀತಿ ಗುರುತಿಸಬಹುದು.

- ವಸ್ತುವಿನ ಆಯ್ಕೆ ಮತ್ತು ಸಂಕ್ಷಿಪ್ತತೆಯಿಂದ ಕೂಡಿದ್ದು, ತೀವ್ರ ಪರಿಣಾಮದಿಂದ ಬದುಕನ್ನು ತೆರೆದು ನೋಡುವಂತೆ ಮಾಡುವುದು.
- ಅನುಭವಕ್ಕಿಂತ ದೃಷ್ಟಿಕೋನ ಹೆಚ್ಚು ಮಹತ್ವವನ್ನು ಪಡೆಯಿತು. ಈ ಹಿನ್ನೆಲೆಯಲ್ಲಿ ಅನೇಕ ತರುಣ ಬರಹಗಾರರನ್ನು ಹುಟ್ಟುಹಾಕಿತು.
- ಸಂಪ್ರದಾಯ, ಕಟ್ಟಳೆಗಳಿಗೆ ಜೋತುಬೀಳದೆ ಸ್ವತಂತ್ರ ವಸ್ತುವನ್ನು ಕಥೆಗೆ ಆಯ್ದುಕೊಂಡಿತು.
- ಕಥೆಯಲ್ಲಿ ಸಂಭಾಷಣೆ ಹೆಚ್ಚು ಚುರುಕಾಗಿ ಕಾಣಿಸುತ್ತದೆ. ಮತ್ತು ಕಥೆ ಅನಿರೀಕ್ಷಿತವಾಗಿ ಮುಕ್ತಾಯಗೊಳ್ಳುತ್ತಿದ್ದವು.
- ವೈವಿಧ್ಯಪೂರ್ಣ ಅನುಭವಗಳಿಂದ ಸಾಣೆಸಿ ತೆಗೆದುಕೊಂಡ ವಸ್ತುವನ್ನು ಒಳಗೊಂಡಿರುವುದುಂಟು.
- ಸಣ್ಣ ಕಥೆಯ 'ವಸ್ತು' ಕಥಾ ಪರಿಮಿತಿಯೊಳಗೆ ಸಮರ್ಪಕವಾಗಿ ಮತ್ತು ಪರಿಣಾಮಕಾರಿಯಾಗಿ ನಿರ್ವಹಿಸಲು ಸಾಧ್ಯತೆಯನ್ನು ಪಡೆದುಕೊಂಡಿದೆ.
- ಸಣ್ಣಕಥೆ ಒಂದೇ ಒಂದು ಭಾವನೆಯನ್ನೊಳಗೊಂಡಿದ್ದು ಈ ಭಾವನೆಯನ್ನು ತರ್ಕಬದ್ಧವಾಗಿ ಮುಕ್ತಾಯಮಾಡುವಂತಿರಬೇಕು.
- ಗುರಿಯ ಏಕಾಗ್ರತೆ ಮತ್ತು ಪರಿಣಾಮದ ಏಕಾಗ್ರತೆಯ ಸಾಧಿತ ಗುಣ ಹೊಂದಿರುತ್ತದೆ.
- ಪ್ರಗತಿಶೀಲ ಕಥೆಗಲ್ಲಿ ಐಕ್ಯತೆ ಗುಣ ಪ್ರಧಾನವಾಗಿರುತ್ತದೆ.
- ಕಥೆಯಲ್ಲಿ ಸಂಭಾಷಣೆ ಇಲ್ಲದಿರಬಹುದು. ಅಥವಾ ಬಹುಮಟ್ಟಿಗೆ ಸಂಭಾಷಣೆಯೇ ಆಗಿರಬಹುದು. ಹಾಗೆ ಅದು ವರ್ಣನೆಗೂ ಕೂಡ ಅನ್ವಯಿಸುತ್ತದೆ.
- ಸಂಕ್ಷಿಪ್ತತೆ ಪ್ರಸ್ತುತ ಕಥೆಗೆ ಅತ್ಯಂತ ಸ್ಪಷ್ಟಗುಣ ಮತ್ತು ಕೆಲವು ನಿಶ್ಚಿತವಾದ ಜೀವನ ಗುಣಗಳ ಬೆಳವಣಿಗೆಯಾಗಿವೆ.
- ಪ್ರಗತಿಶೀಲ ಕಥಾ ಸಾಹಿತ್ಯವು ಮಾನವೀಯ ಭಾವನೆಯಿಂದ ತುಂಬಿರಬೇಕು. ಜೀವನ ಶ್ರದ್ಧೆಯನ್ನು ಉಜ್ವಲ ಭವಿಷ್ಯತ್ತಿನಲ್ಲಿ ಭರವಸೆಯನ್ನು ಹೊಂದಿರಬೇಕು ಎಂಬ ಭಾವನೆಗಳನ್ನು ವ್ಯಕ್ತಪಡಿಸುತ್ತದೆ.
- ಸಣ್ಣಕಥೆಯಲ್ಲಿ ಮಾತಿನ ಬಳಕೆ ಅತ್ಯಂತ ಮಿತವಾಗಿದೆ. ಇದು ಮಿಂಚಿ ಒಮ್ಮೆ ಹೊಳೆದು ನಮ್ಮ ಸುತ್ತ ಮುತ್ತಲಿನ ಪ್ರದೇಶವನ್ನು ಕ್ಷಣ ಕಾಣಿಸಿ ಮರೆಯಾದಂತೆ ಮಾಡುವುದು.
- ಸೂಕ್ಷ್ಮ ಕಲಾತ್ಮಕತೆ ಪ್ರಗತಿಶೀಲ ಸಣ್ಣ ಕಥೆಯಲ್ಲಿ ಮುಖ್ಯವಾಗಿದೆ.

- ಒಂದು ನೆನಪು, ಒಂದು ಅನುಭವ, ಒಂದು ಮನೋಧರ್ಮದ ಆವಿಷ್ಕಾರ, ಸಂಕ್ಷಿಪ್ತತೆಯಲ್ಲಿ ಸರ್ವಶಕ್ತಿಯ ಗುಣವನ್ನು ಹೊಂದಿರುತ್ತದೆ.
- ಆಡಿದ ಒಂದು ಮಾತಿನಲ್ಲಿ, ನಡೆದ ಒಂದು ಘಟನೆಯಲ್ಲಿ ಅಡಗಿರುವ ಗಂಭೀರ ಅರ್ಥವಿದ್ದು, ಬೃಹತ್ ಕಾದಂಬರಿಯಲ್ಲಿ ಹೇಳಲಾಗದ್ದನ್ನು ಒಂದು ಪುಟದಲ್ಲಿ ಹೇಳುವ ಯತ್ನ ಪ್ರಗತಿಶೀಲ ಸಣ್ಣಕಥೆಗಳಲ್ಲಿ ಕಂಡುಬರುತ್ತದೆ.
- ಧ್ವನಿ, ಪ್ರತಿಮೆ ಮತ್ತು ಸಂಕೇತಗಳ ಮೂಲಕ ಅನುಭವಕ್ಕೆ ಮಾತಿನ ಶರೀರ ತೊಡಿಸಿ, ತನ್ನ ಸೀಮಿತ ಬರವಣಿಗೆಯ ಚೌಕಟ್ಟಿನಲ್ಲಿ ತೀವ್ರ ಪರಿಣಾಮದಿಂದ ಕೆಲಸ ಮಾಡುವುದು.
- ಪ್ರಗತಿಶೀಲ ಸಣ್ಣಕಥೆಯಲ್ಲಿನ ಬಹುಪಾಲು ಪಾತ್ರಗಳು ಬದುಕಿನ ಬಲಿಪಶುಗಳು, ಅವಮಾನಿತರು, ನೊಂದವರು, ಹತಾಶರು ಮತ್ತು ಅನಾಥರಾಗಿದ್ದು ಆರೋಗ್ಯದ, ಜೀವನೋತ್ಸಾಹದ ಬದುಕನ್ನು ಗೆಲ್ಲುವ ಛಲದ ಪಾತ್ರಗಳೇ ಹೆಚ್ಚಾಗಿ ಕಾಣಸಿಗುತ್ತವೆ.
- ಕಥೆಯ ಸಂವಿಧಾನ ಮತ್ತು ತಂತ್ರವು ಪ್ರಮುಖ ಲಕ್ಷಣವಾಗಿದ್ದು, ಇವು ಕಥೆಯ ಕಲಾತ್ಮಕತೆಯ ಯಶಸ್ಸಿಗೆ ಪ್ರಮುಖ ಪಾತ್ರವಹಿಸುತ್ತದೆ.
- ವ್ಯಂಗ್ಯ, ಧ್ವನಿ, ಕಲಾತ್ಮಕತೆ, ಆಕರ್ಷಣೆ, ವಿನೋದ, ಮಾನವೀಯತೆ ಮೊದಲಾದ ಪ್ರಮುಖ ಗುಣಗಳನ್ನು ಹೊಂದಿರುವವು.
- ಮಾನವನ ಸೃಷ್ಟ್ಯಾತ್ಮಕ ಶಕ್ತಿಯ ಬಗ್ಗೆ ತಿರಸ್ಕಾರ, ಒಂದು ಕುಲ ಅಥವಾ ಜನಾಂಗದ ಮೇಲೆ ಮತ್ತೊಂದರ ಅಧಿಕಾರ, ಜಾತಿ ಮತ್ತು ಮತೀಯ ದ್ವೇಷ ಇವುಗಳು ಪ್ರಗತಿಶೀಲ ಕಥೆಗಳಲ್ಲಿ ವ್ಯಕ್ತವಾಗಿವೆ.
- ಒಂದು ಪುಟ್ಟ ಘಟನೆಯ ಸುತ್ತ ಹೆಣೆದ ಕಥೆಯಲ್ಲಿ ವಿಶ್ವಪ್ರಜ್ಞೆಯನ್ನು ಮೂಡಿಸುವ ಸಂವೇದನೆಯನ್ನು ಹೊಂದಿರಬೇಕು.
- ಕಥೆಯಲ್ಲಿ ಭಾಷೆಯ ಒಂದು ಮಹತ್ವದ ಅಂಶವಾಗಿದ್ದು, ವಸ್ತು, ತಂತ್ರ, ಪಾತ್ರ, ಆಶಯಕ್ಕೆ ಒಂದು ಅರ್ಥಪೂರ್ಣತೆಯನ್ನು ಒದಗಿಸುವ ಶರೀರ ಮಾಧ್ಯಮವಾಗಿರುತ್ತದೆ.
- ಕ್ರಿಯೆ ಪ್ರಗತಿಶೀಲ ಸಣ್ಣಕಥೆಯಲ್ಲಿನ ಪ್ರಮುಖ ಲಕ್ಷಣವಾಗಿದ್ದು ಆ ಮೂಲಕ ಒಂದು ಮೌಲ್ಯವನ್ನು ಉಂಟುಮಾಡುತ್ತದೆ.
- ಒಂದು ನಾಟಕೀಯ ಘಟನೆ, ಸನ್ನಿವೇಶ, ಒಂದು ಪರಿಣಾಮ ದೃಶ್ಯ, ಒಂದು ಘಟನಾವಳಿ, ಪಾತ್ರದ ಒಂದು ಮುಖ ಹಾಗೂ ಅನುಭವದ ಒಂದು ತುಣುಕು. ಒಂದು ಬದುಕಿನ ಪಾರ್ಶ್ವ, ಒಂದು ನೈತಿಕ ಸಮಸ್ಯೆ ಇವುಗಳಲ್ಲಿ ಯಾವುದಾದರೂ ಕಥೆಯ ಬೀಜಾಂಕುರ ಆಗಿರಬಹುದು.

ಹೀಗೆ ಪ್ರಗತಿಶೀಲ ಸಂವೇದನೆಯ ಕಥಾ ಸಾಹಿತ್ಯವು ತನ್ನ ಪರಿಸರದಲ್ಲಿನ, ಜನರ ಕಲೆ ಮತ್ತು ಸಾಂಸ್ಕೃತಿಕ, ರಾಜಕೀಯ, ಧಾರ್ಮಿಕ ನೆಲೆಗಟ್ಟಿನಲ್ಲಿ ರಾಷ್ಟ್ರೀಯವಾದವನ್ನು ಚಳುವಳಿಯೆಂಬಂತೆ ಪ್ರತಿಪಾದಿಸುತ್ತದೆ. ಜಗತ್ತಿನ ಎಲ್ಲ ಸಾಂಸ್ಕೃತಿಕ ಪರಂಪರೆಯ ವಿಷಯದಲ್ಲಿ ಸಾಹಿತಿಗಳಾದವರು, ಕಲಾವಿದರು ಹೆಮ್ಮೆಪಡುತ್ತಾರೆ. ಅದನ್ನು ತಮ್ಮ ಕೃತಿಗಳಲ್ಲಿ ದಾಖಲಿಸಲು ಇಷ್ಟಪಡುತ್ತಾರೆ. ಅಂತಹ ಪ್ರಯತ್ನಗಳನ್ನು ಪ್ರಗತಿಶೀಲ ಪಂಥದವರು ಮೊದಲ ಚಳುವಳಿಯ ಹುಟ್ಟನ್ನು ಹಾಕಿದರು ಎನ್ನಬಹುದು.

ಕಾದಂಬರಿ ಪ್ರಕಾರವನ್ನೇ ಬಲುಮಟ್ಟಿಗೆ ಹೋಲುವ, ಕಾದಂಬರಿಯಂತೆ ಸಣ್ಣಕಥೆಯೂ ವಿಶಾಲವಾದ, ಉದಾರವಾದ, ವಾಸ್ತವ ಮತ್ತು ಅದರಾಚೆಗಿನ ಪ್ರಪಂಚವನ್ನೆಲ್ಲ ತನ್ನ ತೆಕ್ಕೆಗೆ ತಂದುಕೊಳ್ಳುವ ಒಂದು ಪ್ರಮುಖ ಪ್ರಕಾರವಾಗಿದ್ದು 'ಸಣ್ಣ ಕಥೆ' ಎಂಬ ಪರಿಭಾಷೆಯು ಫಲಿತವಾದದ್ದು. ಇಂಗ್ಲೀಷ್ ಸಾಹಿತ್ಯ ವಿಮರ್ಶೆಯ ಪರಿಚಯದಿಂದ ಎಂಬುದು ನಿದರ್ಶಿತ. ಹಾಗೆಯೇ 'ಕಥೆಯ ಬಗ್ಗೆ ಮನುಷ್ಯನಿಗಿರುವ ಜನ್ಮಜಾತವಾದ ಕುತೂಹಲವೂ ಅಲ್ಲದೆ ಸಣ್ಣಕಥೆ ಭಾವಗೀತದೊಡನೆ ಹೊಸದಾಗಿ ಬಂದ ಸಾಹಿತ್ಯ ಪ್ರಕಾರವಾಗಿರುವುದೂ ಇದಕ್ಕೆ ಕಾರಣವಾಗಿದೆ'. ಅಲ್ಲದೆ 'ಕನ್ನಡದಲ್ಲಿ ಕಾದಂಬರಿಯ ತರುವಾಯ ಸಣ್ಣಕಥೆಯೇ ಅತ್ಯಂತ ಲೋಕಪ್ರಿಯ ಮಾಧ್ಯಮವಾಗಿ ಗಮನಾರ್ಹತೆ ಪಡೆದುಕೊಂಡಿದೆ.

ಹಾಗೆಯೇ ಇಲ್ಲಿ ಕಾದಂಬರಿಯನ್ನು ಒಂದು ಮೇಜರ್ ಸಾಹಿತ್ಯವೆಂದು ಹೆಸರಿಸಿ, ಸಣ್ಣಕಥೆಯನ್ನು ಒಂದು ಮೈನರ್ ಸಾಹಿತ್ಯ ಪ್ರಕಾರ'ವೆಂದು ವಿದ್ವಾಂಸರು ಗುರುತಿಸಿದ್ದಾರೆ. ಆದರೆ ಈ ಮಾತನ್ನು ಒಪ್ಪುವುದು ಕಷ್ಟ. ಇದಕ್ಕೆ ಅಪವಾದವಾಗಿ ನಿಲ್ಲುವ ಮಾಸ್ತಿ ಅವರು ಸಣ್ಣಕಥೆಯ ಸೃಷ್ಟಿಗೆ ಒಂದು ಗಟ್ಟಿಯಾದ ಸ್ಥಾನ ಮಾನವನ್ನು ತಂದು ಕೊಡುವ ಮೂಲಕ ಒಬ್ಬ ಮೇಜರ್ ಗದ್ಯ ಬರಹಗಾರರಾಗಿ ಆಧುನಿಕ ಕನ್ನಡ ಸಾಹಿತ್ಯದಲ್ಲಿ ತುಂಬ ಮಹತ್ವದ ಸ್ಥಾನವನ್ನು ಪಡೆದುಕೊಂಡಿದ್ದಾರೆ. ಪ್ರಗತಿಶೀಲರಿಗೆ ಇವರ ಕಥೆಗಳೇ ಮಾರ್ಗವೆನ್ನಲೂಬಹುದು. ಏಕೆಂದರೆ ಮಾಸ್ತಿ ಅವರ ಅನಂತರ ಅನಕೃ, ನಿರಂಜನ, ಕಟ್ಟೀಮನಿ, ಚದುರಂಗ, ಯಶವಂತ ಚಿತ್ತಾಲ, ವ್ಯಾಸರಾಯ ಬಲ್ಲಾಳ, ಅನಂತಮೂರ್ತಿ, ಪಿ. ಲಂಕೇಶ, ತೇಜಸ್ವಿ, ದೇವನೂರು ಮಹಾದೇವ, ಅಬ್ದುಲ್ ರಶೀದ್, ಬೆಸಗರಹಳ್ಳಿ ರಾಮಣ್ಣ, ಕಾಳೇಗೌಡ ನಾಗವಾರ, ವೈದೇಹಿ, ಕುಂವೀ, ಸಾರಾ ಅಬೂಬಕರ್ ಮೊದಲಾದವು ಆಧುನಿಕ ಕನ್ನಡ ಸಾಹಿತ್ಯದ ಪ್ರಗತಿಶೀಲ ಕಾಲಘಟ್ಟದಲ್ಲಿ ಮತ್ತು ಆ ನಂತರವೂ ಬರೆಯತೊಡಗಿದವರೆಂದು ಹೇಳಬಹುದು.

ತಮ್ಮ ಕಾಲದ ಸುಂದರವಾದುದೆಲ್ಲವನ್ನೂ ಹಿರಿದಾದುದೆಲ್ಲವನ್ನೂ ತಮ್ಮ ಸೃಜನಶೀಲ ಮನಸ್ಸಿನ ತೆಕ್ಕೆಗೆ ತೆಗೆದುಕೊಂಡು ಬರೆಯತೊಡಗಿದ್ದು ಸಾಹಿತ್ಯದ ಎಲ್ಲಾ ಕಾಲಘಟ್ಟಗಳಲಿ

ಕಾಣುತ್ತದೆ. ಹಾಗೇ ಪ್ರಗತಿಶೀಲ ಲೇಖಕರಲ್ಲಿ ಸ್ವಾತಂತ್ರ್ಯ ಚಳುವಳಿ, ಪ್ರತಿಭಟನೆ, ಹೋರಾಟಗಳ ಛಲ-ಬಲಗಳ ಕುರಿತು ವ್ಯವಸ್ಥಿತ ರೂಪದಲ್ಲಿ ತರಲು ಪ್ರಯತ್ನಿಸಿರುವುದು ಕಂಡುಬರುತ್ತದೆ.

**೩.೪. ಪ್ರಗತಿಶೀಲ ಚಳುವಳಿಯ ಸೈದ್ಧಾಂತಿಕ ಧೋರಣೆಗಳು:**

ಗುರಿ ಹಾಗೂ ಆಶಯಗಳ ದೃಷ್ಟಿಯಿಂದ ತಮ್ಮದು ನವೋದಯ ಪಂಥಕ್ಕಿಂತ ಭಿನ್ನವಾದ ಮಾರ್ಗವೆನ್ನುತ್ತಾರೆ ಪ್ರಗತಿಶೀಲರು. ಜನಪರವಾದ ಸಾಹಿತ್ಯ ದೀನ, ದಲಿತರ, ಬಡವರ, ಸ್ತ್ರೀಯರ, ರೈತರ, ಕೂಲಿಕಾರರ ಹಿತಾಸಕ್ತಿಯೇ ಪ್ರಗತಿಶೀಲರ ಸಾಹಿತ್ಯದ ಪ್ರಮುಖ ಅಭಿವ್ಯಕ್ತಿ ಎನಿಸಿದೆ. ಪ್ರಗತಿಪರ ಲೇಖಕನ ಬರವಣಿಗೆಯಲ್ಲಿ ಸಾಮಾಜಿಕ ಆರ್ಥಿಕ ಸಮಾನತೆ ಒತ್ತಾಯವಿರಬೇಕು ಎಂಬುದು ಪ್ರಗತಿಶೀಲರ ಪ್ರತಿಪಾದನೆಯಾಗಿತ್ತು. ಅಂತಹ ಅಂಶಗಳಿಗೆ ಸಂಪೂರ್ಣವಾಗಿ ಬೆಂಬಲವನ್ನು ಪರಸ್ಪರ ಪ್ರಗತಿಶೀಲರು ತೋರುತ್ತಿದ್ದರು.

"ಪ್ರಗತಿಶೀಲ ಲೇಖಕರ ಕಾದಂಬರಿಗಳಲ್ಲಿ ವಾಸ್ತವವಾದ ತನ್ನ ಮರ್ಯಾದೆಯನ್ನು ಮೀರಿ ಅಸಹನೀಯವಾಗಿ ಪರಿಣಮಿಸಿದ್ದನ್ನು ಎಲ್ಲರೂ ಬಲ್ಲರು... ವಾಸ್ತವವಾದಿ ಬರವಣಿಗೆ ಒಂದು ಮಟ್ಟದಲ್ಲಿ ಲೇಖಕರ ಹರಿತವಾದ ಸಾಮರ್ಥ್ಯವನ್ನು ತೋರಿಸಬಹುದು. ಆದರೆ ಅದು ಬಹಳ ಆಳವಾದದ್ದನ್ನು ಸೂಚಿಸುವುದಿಲ್ಲ. ಹಾಗೂ ಅದೇ ತನ್ನಷ್ಟಕ್ಕೆ ಉತ್ತಮ ಕಲೆಯಲ್ಲ. ವಾಸ್ತವ ವಿವರಗಳನ್ನೆಲ್ಲ ಒಂದು ವೈಚಾರಿಕ ಕೇಂದ್ರಕ್ಕೆ ಅಧೀನವಾಗಿಸುವ ಕನಿಷ್ಠ ನಿರೀಕ್ಷೆಯನ್ನಾದರೂ ಅದು ಸಫಲಗೊಳಿಸದಿದ್ದರೆ ಎಲ್ಲವೂ ವ್ಯರ್ಥವಾಗುತ್ತದೆ" (ಗಿರಡ್ಡಿಗೋವಿಂದರಾಜು, ೧೯೮೭, ಪು, ೧೭೧-೧೭೨.) ಎಂದು ವಿಮರ್ಶಕ ಗಿರಡ್ಡಿ ಗೋವಿಂದರಾಜು ವಿಮರ್ಶಿಸುತ್ತಾರೆ. ಈ ಪರಿಕಲ್ಪನೆ ಪ್ರಗತಿಶೀಲ ಕಥೆಗಳಿಗೂ ಅನ್ವಯಿಸುವಂತಿದೆ. ಪ್ರಗತಿಶೀಲ ಧೋರಣೆಯುಳ್ಳ ಲೇಖಕನು ಬರೆಯುವ ಕಾದಂಬರಿ, ಕಾವ್ಯ, ಕಥೆ, ನಾಟಕ ಎಲ್ಲವೂ ಈ ರೀತಿಯ ವಿಮರ್ಶೆಗೆ ಒಳಪಟ್ಟಿರುವುದನ್ನು ನೋಡಬಹುದು.

ಪ್ರಗತಿಶೀಲ ಚಳುವಳಿಯ ಕಾವು ತೀವ್ರವಾಗಿದ್ದ ದಿನಗಳಲ್ಲಿ ಬರವಣಿಗೆಯನ್ನು ಆರಂಭಿಸಿದ ಅನೇಕ ಲೇಖಕರು ತಮ್ಮ ಮನೋಧರ್ಮಕ್ಕನುಗುಣವಾಗಿ ಪ್ರಗತಿಶೀಲ ಚಳುವಳಿಯೊಂದಿಗೆ ಗುರುತಿಸಿಕೊಂಡರು. ಅದರಲ್ಲಿಯೂ ಪ್ರಗತಿಶೀಲತೆಗೆ ಒಂದು ಕ್ರಮಬದ್ಧತೆಯನ್ನು ತಂದುಕೊಡುವಲ್ಲಿ ಶ್ರಮಿಸಿದ ಅ.ನ.ಕೃ. ಅವರು ಪ್ರಗತಿಶೀಲ ಬರವಣಿಗೆಯ ಕೆಲವು ಧೋರಣೆಗಳನ್ನು ಬಿಚ್ಚಿಡುತ್ತಾರೆ:

೧) "ಬಂಡವಾಳಶಾಹಿ, ಸಾಮ್ರಾಜ್ಯಶಾಹಿ ಮತ್ತು ಫ್ಯಾಸಿಸಂ, ನಾಜಿಜಂಗಳನ್ನು ಪ್ರಗತಿಶೀಲ ಲೇಖಕರ ಸಂಘ ತೀವ್ರವಾಗಿ ವಿರೋಧಿಸುತ್ತದೆ.

೨) ಪ್ರಗತಿಶೀಲ ಲೇಖಕರ ಸಂಘ ಪ್ರತಿಯೊಂದನ್ನು ಶ್ರಮಜೀವಿಗಳ ದೃಷ್ಟಿಕೋನದಲ್ಲಿ ನೋಡುತ್ತದೆ. ಶ್ರಮಜೀವಿಗಳ ಹಿತ ಸಂರಕ್ಷಣೆಯೇ ನಮ್ಮ ಜೀವಿತ ಧ್ಯೇಯ.

೩) ಪ್ರಗತಿಶೀಲ ಲೇಖಕರ ಗುರಿ ಹಿಂದೂಸ್ತಾನದ ಸ್ವಾತಂತ್ರ್ಯ ಸಮರದಲ್ಲಿ ನೆರವಾಗುವುದು. ಸ್ವಾತಂತ್ರ್ಯ ಭಾವನೆಯನ್ನು ಭಾರತೀಯರ ಮನದಲ್ಲಿ ಅಚ್ಚೊತ್ತಲು ತಮ್ಮ ಲೇಖನಿಯನ್ನು ಅದಕ್ಕಾಗಿ ಮೀಸಲು ಮಾಡುವುದು. ಸ್ವಾತಂತ್ರ್ಯ ದೊರೆತ ಮೇಲೆ ಅದರ ಸುರಕ್ಷಣೆಗೆ ನೆರವಾಗುವುದು.

೪) ಹಿಂದೂಸ್ತಾನದಲ್ಲಿ ಸಮಾನ ಜೀವಿಗಳಿಗೆ ಅವಕಾಶವಾಗಲು ಪ್ರಗತಿಶೀಲ ಲೇಖಕರ ಸಂಘವು ಹೆಣಗುತ್ತದೆ.

೫) ಸಂಪ್ರದಾಯದ ಕೈಗೆ ಸಿಕ್ಕಿ ನರಳುತ್ತಿರುವ ನಮ್ಮ ಸಾಹಿತ್ಯ ಕಲೆಗಳನ್ನು ಅದರ ಬಂಧನದಿಂದ ಪಾರುಮಾಡುವುದು. (ಅ.ನ.ಕೃ., ೧೯೪೪, ಪುಟ-೪೯-೫೦.)

೬) ಪ್ರಗತಿಶೀಲರ ಮುಖ್ಯ ಉದ್ದೇಶವೇ ಜನಪರವಾದ ಸಾಹಿತ್ಯವನ್ನು ರಚಿಸುವುದು. ಹರಿಜನರು, ಬಡವರು, ಸ್ತ್ರೀಯರು, ರೈತರು, ಕೂಲಿಕಾರರ ಮುಂತಾದ ವರ್ಗಗಳ ಹಿತಾಸಕ್ತಿಗೆ ಅನುಗುಣವಾಗಿ ಸಾಹಿತ್ಯವು ಪ್ರಗತಿಶೀಲರ ಬರವಣಿಗೆಯಲ್ಲಿ ಅಡಗಿತು.

೭) ಆರ್ಥಿಕ ಮತ್ತು ಸಾಮಾಜಿಕ ಸಮಾನತೆಗಾಗಿ ಒತ್ತಾಯಿಸುವುದು ಹಾಗೂ ಮಧ್ಯಮ ವರ್ಗದವರ ಜೀವನವನ್ನು ಸಾಹಿತ್ಯದಲ್ಲಿ ಚಿತ್ರಿಸುವುದು.

ಹೀಗೆ ಒಂದು ಪ್ರಣಾಳಿಕೆಯನ್ನೇ ಪ್ರಗತಿಶೀಲತೆಯ ಕುರಿತು ಅ.ನ.ಕೃ. ಅವರು ನೀಡುತ್ತಾರೆ. ಈ ಘೋಷಣೆಗಳಿಗೆ ಪ್ರಗತಿಶೀಲ ಲೇಖಕರು ಪೂರ್ಣಪ್ರಮಾಣದಲ್ಲಿ ಬದ್ಧರಾಗಲಿಲ್ಲ. ಸೈದ್ಧಾಂತಿಕ ಭಿನ್ನಾಭಿಪ್ರಾಯ ಹಾಗೂ ವೈಯಕ್ತಿಕವಾದ ತಪ್ಪು ತಿಳುವಳಿಕೆಯಿಂದ ಈ ಚಳುವಳಿಯ ಲೇಖಕರು ಹಲವು ಗುಂಪುಗಳಲ್ಲಿ ಹರಿದು ಹಂಚಿಹೋಗಿದ್ದು ಚರಿತ್ರೆಯಾಗಿದೆ.

ಪ್ರಗತಿಶೀಲ ಸಾಹಿತಿಗಳಲ್ಲಿ ಮುಂಚೂಣಿಯಲ್ಲಿದ್ದ ಅ.ನ.ಕೃ. ಅವರು 'ಪ್ರಗತಿಶೀಲ ಸಾಹಿತ್ಯ' ಎಂಬ ಕೈಪಿಡಿಯನ್ನು ಸಂಪಾದಿಸಿ ಅದರಲ್ಲಿ ಪ್ರಗತಿಶೀಲ ಸಾಹಿತಿಗಳು ಮತ್ತು ಪ್ರಗತಿಶೀಲ ಚಳವಳಿ ಸಾಗಬೇಕಾದ ಗೊತ್ತು ಗುರಿಗಳನ್ನು ಸ್ಪಷ್ಟಪಡಿಸಿದರು:

೧) "ಭಾರತದ ಜನರು, ತಮ್ಮ ಕಲೆ ಮತ್ತು ಸಾಹಿತ್ಯ, ತಮ್ಮ ರಾಷ್ಟ್ರೀಯ ಪರಂಪರೆಗಳ ಅನುಸಾರವಾಗಿ ಅಭಿವೃದ್ಧಿ ಹೊಂದಬೇಕೆಂದು ಬಯಸುತ್ತಾರೆ. ಎಲ್ಲ ದೇಶಪ್ರೇಮಿ ಸಾಹಿತಿಗಳೂ ಕಲಾವಿದರೂ ಜನತೆಯ ಈ ನ್ಯಾಯವಾದ ಹೆಬ್ಬಯಕೆಯನ್ನು ತೃಪ್ತಿಗೊಳಿಸಲು ಪ್ರಯತ್ನಿಸುತ್ತಾರೆ. ತಮ್ಮ ಸಾಂಸ್ಕೃತಿಕ ಪರಂಪರೆಯ ವಿಷಯದಲ್ಲಿ ಅವರು ಹೆಮ್ಮೆಪಡುತ್ತಾರೆ. ಆ ಪರಂಪರೆಯಲ್ಲಿ ಸುಂದರವಾದುದೆಲ್ಲವನ್ನೂ ಹಿರಿದಾದುದೆಲ್ಲವನ್ನೂ

ತಮ್ಮ ಸೃಷ್ಟ್ಯಾತ್ಮಕ ಪ್ರಯತ್ನಗಳಿಂದ ಮುಂದುವರಿಸಲು ಅವರು ಇಷ್ಟಪಡುತ್ತಾರೆ. ಅದರಲ್ಲಿ ಸುಳ್ಳಾದುದೆಲ್ಲವನ್ನೂ ಅವನತಿಯಾದುದೆಲ್ಲವನ್ನೂ ತೊಡೆದುಹಾಕಲು ಅವರು ಆಶಿಸುತ್ತಾರೆ.

೨) ನಮ್ಮ ಸಾಹಿತ್ಯವು ಮಾನವೀಯ ಭಾವನೆಯಿಂದ ತುಂಬಿರಬೇಕು. ಜೀವನದಲ್ಲಿ ಶ್ರದ್ಧೆಯನ್ನೂ ಉಜ್ವಲ ಭವಿಷ್ಯತ್ತಿನಲ್ಲಿ ಭರವಸೆಯನ್ನೂ ಹೊಂದಿರಬೇಕು.

೩) ಮಾನವನ ಸೃಷ್ಟ್ಯಾತ್ಮಕ ಶಕ್ತಿಯ ಬಗ್ಗೆ ತಿರಸ್ಕಾರ, ಒಂದು ಕುಲ ಅಥವಾ ಜನಾಂಗದ ಮೇಲೆ ಮತ್ತೊಂದರ ಅಧಿಕಾರ, ಜಾತಿ ಮತ್ತು ಮತೀಯ ದ್ವೇಷ–ಇವು ನಮ್ಮ ಜನತೆಯ ಹಿತಕರವಾದ ಪರಂಪರೆಗೆ ದೂರವಾಗಿವೆ. ಧ್ಯೇಯರಹಿತ ಜೀವನ, ಮೂಢನಂಬಿಕೆ, ನಿರಾಸೆ ಮತ್ತು ವಿಧಿವಾದ ಇವು ನಮ್ಮ ಬೆಳವಣಿಗೆಯನ್ನು ತಡೆಯುತ್ತವೆ.

೪) ಅಶ್ಲೀಲತೆಯ ಕಾಮ ಪ್ರಚೋದನೆಯ ಕೊಲೆ ಸುಲಿಗೆಯ ಸಾಹಿತ್ಯವನ್ನು ನಾವು ವಿರೋಧಿಸುತ್ತೇವೆ.

೫) ನಮ್ಮ ಸಾಹಿತ್ಯವು ಕಲಾತ್ಮಕವಾಗಿಯೂ ಸುಂದರವಾಗಿಯೂ ಇರಬೇಕು. ಅದರ ಸ್ವರೂಪವು ರಾಷ್ಟ್ರೀಯವಾಗಿಯೂ ಜನಪ್ರಿಯವಾಗಿಯೂ ಇರಬೇಕು. ನಮ್ಮ ದೇಶದ ಎಲ್ಲ ಭಾಷೆಗಳಲ್ಲಿಯೂ ಸಾಹಿತ್ಯವು ವಿಕಾಸಗೊಳ್ಳಲು ಪೂರ್ಣ ಅನುಕೂಲತೆಗಳಿರಬೇಕು ಎಂದು ನಾವು ಆಶಿಸುತ್ತೇವೆ.

೬) ನಮ್ಮ ಸಾಹಿತಿಗಳು ಜನತೆಯ ಸೇವೆಯಲ್ಲಿ ಒಂದುಗೂಡಬೇಕೆಂದೂ ಸುಖಮಯ ಸಮೃದ್ಧ ಜೀವನದ ಕಡೆಗೆ ಮುನ್ನಡೆಯುವಂತೆ ಜನತೆಯನ್ನು ತಮ್ಮ ಸೃಷ್ಟ್ಯಾತ್ಮಕ ಕೃತಿಗಳ ಮೂಲಕ ಪ್ರೇರೇಪಿಸಬೇಕೆಂದೂ ನಾವು ಕರೆಕೊಡುತ್ತೇವೆ.

ಎಂದು ಅ.ನ.ಕೃ. ಅವರು ಪ್ರಗತಿಶೀಲ ಬರಹಗಾರರ ಸಾಹಿತ್ಯವು ಹೇಗೆ ಇರಬೇಕೆಂದು ಸೂಚಿಸುತ್ತಾರೆ. ಈ ರೀತಿಯ ಪ್ರಣಾಳಿಕೆಯು ಸಾಹಿತ್ಯವನ್ನು ಪ್ರಚಾರದ ಮಾಧ್ಯಮವನ್ನಾಗಿ ಮಾಡಿತು. ಪ್ರಚಾರ ಸಾಹಿತ್ಯವನ್ನು ಕೀಳುಮಟ್ಟಕ್ಕೆ ಒಯ್ಯುವ ಕೆಲಸ ಪ್ರಗತಿಶೀಲ ಪಂಥದಲ್ಲಿ ಆಯಿತು ಎಂಬ ಆರೋಪವನ್ನು ಪ್ರಗತಿಶೀಲರು ಎದುರಿಸಬೇಕಾಯಿತು. "…..ದುಷ್ಪರಿಣಾಮಗಳನ್ನು ಆ ಮೇಲಿನ ಕಥೆಗಾರರೆಲ್ಲ ಅನುಭವಿಸಬೇಕಾಯಿತು. ಹೊಸ ಸತ್ಯವೊಂದನ್ನು ಕಾಣಿಸುವ ರಭಸದಲ್ಲಿ ಅವರು ವಾಚಾಳಿಗಳಾದರು; ಪ್ರತಿಕ್ರಿಯೆಯ ಮನೋವೃತ್ತಿ ಒಂದುಬಿಟ್ಟಿತು. ಕೆಲವು ಸಾರೆ ಅವರು ಹೊಸ ಭಾವನೆಗಳನ್ನು ಪ್ರೇರೆಪಿಸಿಕೊಳ್ಳಬೇಕಾಯಿತು. ಅವರಲ್ಲಿ ವಿಚಾರವಾದಿಗಳೆನ್ನಿಸಿಕೊಳ್ಳುವವರು ಹಟವಾದಿಗಳಾದರು; ಅದಲ್ಲದವರು ಭಾವನಾವಶತೆಗೆ ಜಿಗಳಿಯಂತೆ ಅಂಟಿಕೊಂಡರು." (ಕೀರ್ತಿನಾಥ ಕುರ್ತಕೋಟಿ, ೨೦೧೦,

ಪುಟ-೧೬೫.) ಎಂದು ಕೀರ್ತಿನಾಥ ಕುರ್ತಕೋಟಿ ಅವರು ಪ್ರಗತಿಶೀಲ ಲೇಖಕರ ಸಾಹಿತ್ಯಿಕ ಮನೋಧೋರಣೆಗಳ ಸೈದ್ಧಾಂತಿಕ ನಿಲುವುಗಳಲ್ಲಿ ವಿಮರ್ಶಿಸುತ್ತಾರೆ.

ಆದರೆ ಈ ರೀತಿಯ ಚೌಕಟ್ಟುಗಳು ಸಣ್ಣ ಕಥೆಗಳ ಸೃಷ್ಟಿಗೆ ಹೊಸತನವನ್ನು ಕೊಟ್ಟವು. ಹಳೆಯ ಮನೋಧರ್ಮದಲ್ಲಿ ಸಾಂಪ್ರದಾಯಿಕತೆಗೆ ಸಿಕ್ಕು ಬೆಂದಂತ ಕಥಾ ಸಾಹಿತ್ಯ ಪ್ರಗತಿಶೀಲರಲ್ಲಿ ಬದಲಾವಣೆಯ ಗಾಳಿಯನ್ನು ಬೀಸಿತು. "ಕಥಾವಸ್ತುವಿನಲ್ಲಿ ಮತ್ತು ಮನೋವೃತ್ತಿಯಲ್ಲಿ ಮೂಡಿದ ಬದಲಾವಣೆ ಬರವಣಿಗೆಯನ್ನೂ ಬದಲುಮಾಡಿತು. ಹೊಸಕಥೆಗಳು ಹಳೆಯ ಕಥೆಗಳಿಗಿಂತ ಹೆಚ್ಚು ವೇಗವನ್ನು ಪಡೆದವು; ಸಂಭಾಷಣೆ ಹೆಚ್ಚು ಚುರುಕಾಯಿತು; ಮುಕ್ತಾಯ ಹೆಚ್ಚು ಅನಿರೀಕ್ಷಿತವಾಯಿತು. ಮತ್ತು ಕಥೆಗಳ ಒಳಮೈಯಾಗಿ, ಪಾತ್ರ ಸೃಷ್ಟಿಯ ಮನೋಲೋಕವಾಗಿ ಒಂದು ಅತಪ್ತ ವಾತಾವರಣ ಹಬ್ಬಿಕೊಂಡಿತು. ಮುಖ್ಯವಾಗಿ ಕಥೆಗಳೆಲ್ಲ ಸಮಸ್ಯೆಗಳ ಚರ್ಚೆ, ಪರಿಹಾರಗಳಿಗೆ ತೊಡಗಿದವು. ಪ್ರತಿಯೊಂದು ಹೊಸ ಕಥೆಯಲ್ಲಿಯೂ ಒಂದು ಸಮಸ್ಯೆ ಚಿಗುರಲಾರಂಭಿಸಿತು." (ಕೀರ್ತಿನಾಥ ಕುರ್ತಕೋಟಿ, ೨೦೧೦, ಪುಟ-೧೬೬.) ಇದು ಪ್ರಗತಿಶೀಲ ಚಳುವಳಿಯ ಸೈದ್ಧಾಂತಿಕ ಧೋರಣೆಗಳ ಕೊಡುಗೆ ಎನ್ನಬಹುದು.

ಹೀಗೆ ಪ್ರಗತಿಶೀಲ ಸಾಹಿತ್ಯ ಪಂಥದ ಸೈದ್ದಾಂತಿಕ ಶಿಸ್ತು "ವಾಸ್ತವ ಪರಿಸ್ಥಿತಿಗೆ ಕಣ್ಣು ಕಿವಿ ತೆರೆದಿಟ್ಟು ಒಳ್ಳೆಯ ಬದುಕಿಗಾಗಿ ಹೋರಾಡುತ್ತಿರುವ ಜನತೆಗೆ ಸ್ಫೂರ್ತಿ ನೀಡುವತಂಹ ಕೃತಿ ರಚಿಸುವದೇ ಪ್ರಗತಿಶೀಲತೆ" (ದೇಜಗೌ ಮತ್ತು ಸಿಪಿಕೆ (ಸಂ), ೧೯೬೯, ಪುಟ-೩೩) ಎನ್ನುವುದು; ಅದು ಬಸವರಾಜ ಕಟ್ಟೀಮನಿ, ನಿರಂಜನ, ಚದುರಂಗರಂಥವರ ಬೆರಳೆಣಿಕೆ ಕೃತಿಗಳಲ್ಲಿ ಮಾತ್ರ ಉಳಿಯಿತು.

### ೩.೫ ಪ್ರಗತಿಶೀಲತೆ ಮತ್ತು ಸ್ವಾತಂತ್ರ್ಯ ಹೋರಾಟ: ಕಥೆ ಮತ್ತು ಕಾದಂಬರಿಯ ಹಿನ್ನೆಲೆಯಲ್ಲಿ

ಜಗತ್ತಿನ ಇತಿಹಾಸದಲ್ಲಿ ತತ್ವಜ್ಞಾನ ಮತ್ತು ತತ್ವಜ್ಞಾನಿಗಳ ಬಹುಮುಖ್ಯ ಕಾರಣದಿಂದಲೇ ಅನೇಕ ಕ್ರಾಂತಿಗಳು ಜರುಗಿವೆ. ಫ್ರಾನ್ಸ್, ಅಮೇರಿಕಾ, ರಷ್ಯಾ ಕ್ರಾಂತಿಗಳ ಸಂದರ್ಭಗಳು ಈ ಹಿನ್ನೆಲೆಯವು. ಪ್ರಗತಿಶೀಲ ಚಳುವಳಿ ಕರ್ನಾಟಕದ ಸಂದರ್ಭಕ್ಕೆ ಸೀಮಿತವಲ್ಲ. ಅದು ಯುರೋಪಿನಲ್ಲಿ ಆರಂಭವಾಗಿ ರಷ್ಯಾದಲ್ಲಿ ಹುಲುಸಾಗಿ ಬೆಳೆದು ಭಾರತಕ್ಕೆ ಕಾಲಿಟ್ಟಿತು. ಪ್ರಗತಿಶೀಲ ಚಳುವಳಿ ವಿಶ್ವ ಸಾಹಿತ್ಯದ ಸಂದರ್ಭದಲ್ಲೇ ವೈಚಾರಿಕ ಪ್ರಜ್ಞೆಯ ರಾಜಕೀಯ ಮತ್ತು ಆರ್ಥಿಕ ಸಮಾನತೆಯನ್ನು ಪ್ರತಿಪಾದಿಸಿತು.

'೧೯೩೫ ಪ್ರಗತಿಶೀಲ ಸಾಹಿತಿಗಳ ಕನಸಿನ ಕಾಲ' (ರಾಘವೇಂದ್ರರಾವ್. ಹೆಚ್.ಎಸ್., ೧೯೯೦, ಪುಟ-೭೦.) ಆಗಿನ್ನೂ ಭಾರತ ಬ್ರಿಟಿಷ್ ವಸಾಹತುವಾಗಿತ್ತು. ಪುರೋಹಿತಶಾಹಿ ಹಾಗೂ ಸಾಮ್ರಾಜ್ಯಶಾಹಿಗಳ ಹಿಡಿತದಲ್ಲಿ ಭಾರತ ನಲುಗಿತ್ತು. ಮಧ್ಯಮ. ಕೆಳವರ್ಗದ ಹಾಗೂ ತೀರಾ ಕೆಳ ಸಮುದಾಯಗಳು ದೀನಸ್ಥಿತಿಗೆ ತಳ್ಳಲ್ಪಟ್ಟಿದ್ದವು. ಇಂಥ ಉಸಿರುಗಟ್ಟಿಸುವ ವಾತಾವರಣದಿಂದ ದೇಶವನ್ನು ಬಿಡುಗಡೆಗೊಳಿಸುವ, ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆದುಕೊಳ್ಳುವ ತವಕ ಮಗುವಿನಿಂದ ಮುದುಕನವರೆಗೂ ಆವರಿಸಿತ್ತು. ಅದರಲ್ಲೂ ತರುಣರಲ್ಲಿ ಸ್ವಾತಂತ್ರ್ಯದ ಕಹಳೆ ಧುಮ್ಮಿಕ್ಕುವ ಸಂದರ್ಭ. ಗಾಂಧೀಜಿಯವರ ಭಾಷಣಗಳು, ಘೋಷಣೆಗಳು, ಚಳುವಳಿಗಳು ಭೋರ್ಗರೆಯುತ್ತಿದ್ದವು. ಇವುಗಳಿಗೆ ಸಹಜವಾಗಿ ಭಾರತವು ಮೈ ಕೊಡವಿ ಬ್ರಿಟೀಷ್‌ರ ವಿರುದ್ಧ ಎದ್ದು ನಿಂತಿತ್ತು. ಇಂತಹ ವಾತಾವರಣದಿಂದ ದೇಶವನ್ನು ಬಿಡುಗಡೆಗೊಳಿಸುವ ಜರೂರತ್ತು ಪ್ರಗತಿಶೀಲ ಲೇಖಕರದಾಗಿತ್ತು.

ಭಾರತವು ಸ್ವಾತಂತ್ರ್ಯಕ್ಕಾಗಿ ತುದಿಗಾಲಲ್ಲಿ ಇರುವ ಹೊತ್ತಿಗೆ ಅಮೇರಿಕಾ ೧೭೭೬ರಲ್ಲಿ ಫ್ರಾನ್ಸ್ ೧೭೮೯ರಲ್ಲಿ ಮತ್ತು ರಷ್ಯಾ ೧೯೧೭ರಲ್ಲಿ ಚರ್ಚುಗಳ ಮತ್ತು ರಾಜಪ್ರಭುತ್ವಗಳ ಹಿಡಿತದಿಂದ ಹೊರಬಂದಿದ್ದವು. ಇವುಗಳ ಸ್ವಾತಂತ್ರ್ಯ ಹೋರಾಟದ ಇತಿಹಾಸವನ್ನು ಓದಿದ ಭಾರತೀಯ ವಿದ್ಯಾವಂತ ವಲಯವು ಅನಕ್ಷರಸ್ಥ ಭಾರತೀಯರನ್ನು ಒಂದುಗೂಡಿಸಲು ಶ್ರಮವಹಿಸುತ್ತಿತ್ತು. ರಷ್ಯಾ, ಫ್ರಾನ್ಸ್, ಅಮೇರಿಕಾ ಕ್ರಾಂತಿಗಳ ದಟ್ಟ ಪ್ರಭಾವವು ಭಾರತದ ಮೇಲೂ ಬೀರಿತು. ಇವುಗಳಿಗೆ ಭಾರತೀಯ ಪ್ರಗತಿಶೀಲ ಲೇಖಕರು ಕೈ ಜೋಡಿಸಿದರು.

ಒಂದು ಕಡೆ ಗಾಂಧೀಜಿಯವರ ಅಹಿಂಸಾ ವಾದದ ಧೋರಣೆ ಪ್ರಗತಿಶೀಲರಿಗೆ ತೊಡಕಾದರೂ ಸಹ ತಮ್ಮದೇ ಆದ ವಲಯವನ್ನು ಪ್ರಗತಿಶೀಲರು ಸ್ವಾತಂತ್ರ್ಯ ಹೋರಾಟಕ್ಕೆ ರೂಪಿಸಿಕೊಳ್ಳಬೇಕಾಯಿತು. ಅದಕ್ಕಾಗಿ ಪ್ರಗತಿಶೀಲರು ಭಾರತದ ಪುರೋಹಿತಶಾಹಿ ಮತ್ತು ಫ್ಯೂಡಲಿಸಂ ವಿರುದ್ಧ ಹೋರಾಡಬೇಕಾಯಿತು. ರಾಜಕೀಯವಾಗಿ ಭಾರತದ ನೆಲ ಮಾರ್ಕ್ಸ್ ಸಿದ್ಧಾಂತವನ್ನು ಒಪ್ಪದೇ ಗಾಂಧೀ ಮಾದರಿಯನ್ನು ಅಪ್ಪಿದ್ದರಿಂದ ಪ್ರಗತಿಶೀಲ ಚಳುವಳಿ ಹೆಚ್ಚು ಪರಿಣಾಮಕಾರಿ ಎನಿಸಲಿಲ್ಲ.

ರಷ್ಯಾದ ಮ್ಯಾಕ್ಸಿಂಗಾರ್ಕಿಯ 'ಮದರ್' ಕಾದಂಬರಿ ಕಾರ್ಮಿಕ ವರ್ಗದ ಜನರ ನೋವು, ನಲಿವು, ಬದುಕಿನ ಬವಣೆಗಳನ್ನು ಜಗತ್ತಿಗೆ ಸಾರಿತು. ಆ ಕಾಲಕ್ಕಾಗಲೇ ಯುರೋಪಿನ ರಾಜಕೀಯ ಚಳುವಳಿಯಲ್ಲಿ ಮಾರ್ಕ್ಸ್ ಏಂಗಲ್ಸ್ ವಿಚಾರಗಳು ಪ್ರಮುಖ ಪಾತ್ರ ವಹಿಸಿದ್ದವು. ಮಾರ್ಕ್ಸ್‌ನ ಮುಂದಿನ ತಲೆಮಾರು ಸಹ ಕಾರ್ಮಿಕರ ಹಿತವನ್ನು ಕಾಯುವ ಕೆಲಸಕ್ಕೆ ಕೈಜೋಡಿಸಿತು. ಈ ನಿಟ್ಟಿನಲ್ಲಿ ಲೆನಿನ್ ರಷ್ಯಾದ ರಾಜಕೀಯ ಚರಿತ್ರೆಯನ್ನೇ ಅಲ್ಲದೆ ವಿಶ್ವದ

ರಾಜಕೀಯ ಚರಿತ್ರೆಯನ್ನು ಮೀರುವ ಕ್ರಿಯೆಯಲ್ಲಿ ತೊಡಗಿದ್ದರು. ಈ ವಿಚಾರಧಾರೆಗಳು ಭಾರತೀಯ ಪ್ರಗತಿಶೀಲರ ಮೇಲೆ ದಟ್ಟ ಪ್ರಭಾವ ಬೀರಿದವು.

ಆರ್ಥಿಕ ಶೋಷಣೆ ಕಾರ್ಮಿಕ ಸಂಘಗಳ ಉದಯಕ್ಕೆ ಕಾರಣವಾಗಿ ವರ್ಗ ಸಂಘರ್ಷಕ್ಕೆ ಎಡೆಯಾಯಿತು. ಇದೇ ಕಾಲಕ್ಕೆ ಮಾರ್ಕ್ಸ್ ವೈಜ್ಞಾನಿಕ ಸಮಾಜವಾದವನ್ನು ಮಂಡಿಸಿ ಕಾರ್ಮಿಕ ಕ್ರಾಂತಿಗೆ ಬೆಂಗಾವಲಾಗಿ ನಿಂತನು. ಕಾರ್ಮಿಕ ರಾಜ್ಯದ ಕನಸನ್ನು ಕಟ್ಟಿದನು. ಮಾರ್ಕ್ಸ್ ಏಂಗೆಲ್ಸ್ ಬರೆದ 'ಕಮ್ಯುನಿಸ್ಟ್ ಮ್ಯಾನಿಫೆಸ್ಟೊ' ಕೃತಿ ದುಡಿಯುವ ವರ್ಗದ ಜನತೆಯ ಕೈಪಿಡಿಯಾಗಿ ಪರಿಣಮಿಸಿತು. ಹೀಗೆ ಕಮ್ಯುನಿಸ್ಟರು ತಮ್ಮ ಬರವಣಿಗೆಯ ಮೂಲಕ ದುಡಿಯುವ ವರ್ಗವನ್ನು ಹೋರಾಟಕ್ಕೆ ಸಿದ್ಧಗೊಳಿಸತೊಡಗಿತು. ಇದರ ಪರಿಣಾಮವಾಗಿ ೧೯೧೭ರ ಅಕ್ಟೋಬರ್ ಕ್ರಾಂತಿಗೆ ಜಯ ಲಭಿಸಿತು. ಇದನ್ನು ಮನಗಂಡ ಭಾರತೀಯ ಲೇಖಕರು ಅದರಲ್ಲಿಯೂ ಪ್ರಗತಿಶೀಲ ಮನೋಧೋರಣೆಯುಳ್ಳ ಲೇಖಕರು ತಮ್ಮ ಲೇಖನಗಳನ್ನು ಹೋರಾಟದ ಕ್ರಾಂತಿಗಳಿಗೆ ಮೀಸಲಿಟ್ಟರು.

"ಪ್ರಗತಿಶೀಲ ಚಳವಳಿ ತನಗೆ ರಕ್ತದಾನ ಮಾಡಬಲ್ಲ ಸಾಮಾಜಿಕ, ರಾಜಕೀಯ ಚಳುವಳಿಗಳ ಸಾಂಗತ್ಯವನ್ನು ಪಡೆದಿರಲಿಲ್ಲ. ಹೀಗಾಗಲು ಸಮುದಾಯದ ಒಟ್ಟು ಚೈತನ್ಯದ ಒಂದು ಭಾಗ ಸ್ವಾತಂತ್ರ್ಯ ಚಳುವಳಿಯಲ್ಲಿ ತೊಡಗಿಸಿಕೊಂಡಿದ್ದು ಕೂಡ ಕಾರಣವಾಗಿರಬಹುದು. ಪ್ರಗತಿಶೀಲ ಚಳವಳಿಯ ಕಾಳಜಿಯ ಕೇಂದ್ರ ಶ್ರಮಿಕವರ್ಗ ಹಾಗೂ ಕೃಷಿಕ ವರ್ಗಗಳೇ ಆದರೂ ಅದರಲ್ಲಿ ತೊಡಗಿಸಿಕೊಂಡ ಲೇಖಕರು ಮಧ್ಯಮ ವರ್ಗದಿಂದ ಬಂದವರೇ ಅಗಿದ್ದರು. ಕಟ್ಟೀಮನಿ ಅವರನ್ನು ಬಿಟ್ಟರೆ ಅದರ ಮುಖ್ಯ ಲೇಖಕರು ಮೇಲುಜಾತಿಗೆ ಸೇರಿದವರಾಗಿದ್ದರಿಂದ ತಾವು ಚಿತ್ರಿಸುವ ಜೀವನ ಕ್ರಮದ ಸರಿಯಾದ ಗ್ರಹಿಕೆ ಅವರಿಗಿರಲಿಲ್ಲ. ಒಟ್ಟು ಚಳುವಳಿಯ ಬೌದ್ಧಿಕತೆಗಿಂತ ಹೆಚ್ಚಾಗಿ, ಭಾವುಕತೆಯಿಂದ ನಿಯಂತ್ರಿತವಾಗಿತ್ತು." (ರಾಘವೇಂದ್ರರಾವ್.ಎಚ್.ಎಸ್, ೧೯೯೦, ಪುಟ-೨೦) ಸಾಮ್ಯವಾದ, ಸಮಾಜವಾದ, ಗಾಂಧೀವಾದಗಳಂಥ ವಿಭಿನ್ನ ನಿಲುವುಗಳ ಸಹಚರ್ಯವು ಸ್ವಾತಂತ್ರ್ಯ ಹೋರಾಟಕ್ಕೆ ಪ್ರಗತಿಶೀಲರಿಗೆ ಪ್ರೇರಣೆಯಾದವು.

### ೩.೬ ಪ್ರಗತಿಶೀಲ ಸಂವೇದನೆಯಲ್ಲಿ ಹುಟ್ಟಿಕೊಂಡ ಕಾದಂಬರಿ ಮತ್ತು ಕಾದಂಬರಿಕಾರರು

ಕನ್ನಡ ಆಧುನಿಕ ಸಾಹಿತ್ಯದಲ್ಲಿ ಚಳುವಳಿ, ಹೋರಾಟ, ಪ್ರತಿಭಟನೆ ಅಂಶಗಳು ಒಡಮೂಡಿ ಬಂದಿವೆ. ಇವುಗಳ ಕುರಿತ ಒಂದೇ ಸೂರಿನಡಿಯಲ್ಲಿ ಅಧ್ಯಯನಗಳು ನಡೆದಿರುವುದು ಬೆರಳೆಣಿಕೆಯಷ್ಟು ಮಾತ್ರ. ಆಧುನಿಕ ಕನ್ನಡ ಸಾಹಿತ್ಯಕ್ಕೆ ಭಾರತ ಸ್ವಾತಂತ್ರ್ಯ ಪ್ರಭಾವ-ಪ್ರೇರಣೆಯಾಗಿದ್ದು ಅಭಿವ್ಯಕ್ತವಾಗಿದೆ. ಚಳುವಳಿಗೆ ಹೆಚ್ಚು ಪ್ರಾಧಾನ್ಯತೆಯನ್ನು ಕೊಟ್ಟ

ಕನ್ನಡ ಪ್ರಗತಿಶೀಲ ಸಾಹಿತ್ಯ ಪಂಥದ ಸ್ವಾತಂತ್ರ್ಯ ಚಳುವಳಿಯನ್ನು ಕುರಿತು ಒಂದೇ ಕಡೆ ಅಧ್ಯಯನಕ್ಕೊಳಪಡಿಸುವುದು ಪ್ರಸ್ತುತ ಮಹಾಪ್ರಬಂಧದ ಆಶಯವಾಗಿದೆ. ಈ ಹಿನ್ನೆಲೆಯಲ್ಲಿ ಪ್ರಗತಿಶೀಲ ಕಾದಂಬರಿಕಾರರು ಮತ್ತು ಅವರ ಕಾದಂಬರಿಗಳ ಐತಿಹಾಸಿಕ ಸಂಕ್ಷಿಪ್ತ ನೋಟವನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಕನ್ನಡದಲ್ಲಿ ಮೊಟ್ಟಮೊದಲ ಸ್ವತಂತ್ರ ಕಾದಂಬರಿ ಎಂದರೆ ಗುಳವಾಡಿ ವೆಂಟರಾಯರ 'ಇಂದಿರಾಬಾಯಿ' ಇದು ೧೮೮೯ರಲ್ಲಿ ಪ್ರಕಟಣೆ ಕಂಡಿತು. ೧೮೯೨ರಲ್ಲಿ ಪ್ರಕಟವಾದ ಲಕ್ಷ್ಮಣರಾವ್ ಗದಗಕರ ಅವರ 'ಸೂರ್ಯಕಾಂತ' ಕನ್ನಡದ ಮೊದಲ ಐತಿಹಾಸಿಕ ಕಾದಂಬರಿ. ವೆಂಕಟಸುಬ್ಬರಾವ್ ಅವರ 'ಕೇಸರಿ ವಿಲಾಸ' ೧೮೯೫ರಲ್ಲಿ ಪ್ರಕಟವಾಯಿತು. ಎಂ. ವೆಂಕಟಕೃಷ್ಣಯ್ಯನವರ 'ಚೋರಗ್ರಹಣತಂತ್ರ' ೧೮೯೬ರಲ್ಲಿ ರಚನೆಗೊಂಡ ಮೊದಲ ಪತ್ತೇದಾರಿ ಕಾದಂಬರಿ.

ಹೀಗೆ ಸಾಮಾಜಿಕ, ಪತ್ತೇದಾರಿ, ಐತಿಹಾಸಿಕವೆಂದು ಕಾದಂಬರಿಯ ಪ್ರಥಮ ಹುಟ್ಟನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಿದ್ವಾಂಸರು ದಾಖಲಿಸುತ್ತಾರೆ. ಇವುಗಳಲ್ಲಿಯೂ ಸ್ಪಷ್ಟತೆ ಕಡಿಮೆ ಮತ್ತು ಗೊಂದಲಗಳೇ ಹೆಚ್ಚು ಎನ್ನಬಹುದಾದರೂ ಸ್ವಲ್ಪ ಹೆಚ್ಚು ಕಡಿಮೆ ೧೯ನೇ ಶತಮಾನದ ಅಂತ್ಯದಲ್ಲಿ ಮತ್ತು ೨೦ನೇ ಶತಮಾದ ಆರಂಭದಲ್ಲಿ ಮೂಡಿಬಂದುವಾಗಿವೆ. "ಅನುವಾದ, ಸ್ವತಂತ್ರ ದಿಕ್ಕಿನಲ್ಲಿ ಕಾದಂಬರಿ ತನ್ನ ವಿಸ್ತಾರವನ್ನು ಹೆಚ್ಚಿಸಿಕೊಳ್ಳುವುದರೊಂದಿಗೆ, ವಾಸ್ತವ ಮಾರ್ಗದತ್ತ ಮೈಯನ್ನು ನಿಚ್ಚಳವಾಗಿ ಬಿಚ್ಚಿಕೊಳ್ಳಲು ಪ್ರಾರಂಭಿಸಿತು. ಇವುಗಳಲ್ಲಿ ಆಧುನಿಕತೆ ತಲೆಹಾಕಿತು. ವಾಸ್ತವಿಕತೆಯನ್ನೇ ಕಾದಂಬರಿಗೆ ಆಧಾರವಾಗಿಟ್ಟುಕೊಂಡು ಮೊದಲು ಕಾದಂಬರಿ ರಚಿಸಿದವರೆಂದರೆ, ಎಂ.ಎಸ್. ಪುಟ್ಟಣ್ಣನವರು. ಇವರ ಮೊದಲ ಕಾದಂಬರಿ 'ಮಾಡಿದ್ದುಣ್ಣೋ ಮಹಾರಾಯ' ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ನಡೆದ ಹಲವು ಸಂಗತಿಗಳ ಆಧಾರದ ಮೇಲೆ ರಚನೆಯಾದ ಈ ಕಾದಂಬರಿಯ ಹೆಸರೇ ಸೂಚಿಸುವಂತೆ ಕೆಟ್ಟದ್ದನ್ನು ಮಾಡಿದವರಿಗೆ ಕೆಟ್ಟದ್ದು, ಒಳ್ಳೆಯದನ್ನು ಮಾಡಿದವರಿಗೆ ಒಳ್ಳೆಯದು ಆಗುವುದೆಂಬ ನಂಬಿಕೆ ತುಂಬಿಕೊಂಡಿದೆ. ಕಾರಂತರ 'ದೇವತೂತರು' ೧೯೨೮ರಿಂದ ಕುವೆಂಪು ಅವರ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ೧೯೩೬ರ ವರೆಗೆ ಈ ವಾಸ್ತವ ಮಾರ್ಗದ ಜಾಡನ್ನು ಗುರುತಿಸಬಹುದು". (ಭಜಂತ್ರಿ. ವೈ.ಎಂ. ೨೦೦೯. ಪುಟ-೨೧-೨೨.) ನಂತರ ಬರುವವರೇ ಪ್ರಗತಿಶೀಲ ಹರಿಕಾರ ಅ.ನ.ಕೃ. ಗಮನಾರ್ಹ ಕಾದಂಬರಿಕಾರ ಎನಿಸಿಕೊಳ್ಳುತ್ತಾರೆ.

ಅನಕೃ ಅವರನ್ನು ಕನ್ನಡದ ಪ್ರಗತಿಶೀಲ ಕಾದಂಬರಿಗಳ ಜನಕ ಎನ್ನಬಹುದು. ಅವರು ಮೊದಲು ಬರೆದದ್ದು 'ಜೀವನ ಯಾತ್ರೆ' ಎಂಬ ಕಾದಂಬರಿಯನ್ನು. ಆದರೆ 'ಸಂಧ್ಯಾರಾಗ'

ಜನಪ್ರಿಯತೆಯನ್ನು ತಂದುಕೊಟ್ಟ ಕಾದಂಬರಿ. ಅಲ್ಲದೆ ಕನ್ನಡ ಪ್ರಗತಿಶೀಲ ಕಾದಂಬರಿಗಳಿಗೆ ಹೆದ್ದಾರಿಯೊಂದನ್ನು ಸೃಷ್ಟಿಸಿತು ಎಂದು ಹೇಳಬಹುದು. ಸಂಧ್ಯಾರಾಗದ ತರುವಾಯ ಕನ್ನಡದಲ್ಲಿ ಕಾದಂಬರಿಯ ಹೊಳೆಯೇ ಹರಿಯಿತು. ಅನಕೃ ಒಬ್ಬರೇ ೧೧೨ ಕಾದಂಬರಿಗಳನ್ನು ಬರೆದರು. ಅವರನ್ನು ಅನುಸರಿಸಿ ಅನೇಕರು ಕಾದಂಬರಿಗಳನ್ನು ಬರೆದರು. ತರಾಸು, ನಿರಂಜನ, ಕಟ್ಟೀಮನಿ, ಚದುರಂಗ, ವ್ಯಾಸರಾಯಬಲ್ಲಾಳ, ನಾಡಿಗೇರ ಕೃಷ್ಣರಾಯ, ಕುಮಾರ ವೆಂಕಣ್ಣ ಮೊದಲಾದವರು ಕನ್ನಡ ಪ್ರಗತಿಶೀಲ ಕಾದಂಬರಿಗಳನ್ನು ಬರೆದರು. ಆದರೆ ಅನಕೃ ಮಾದರಿ ಕನ್ನಡ ಸಾಹಿತ್ಯದಲ್ಲಿ ಬಿರುಗಾಳಿಯನ್ನು ಎಬ್ಬಿಸಿ ಅಷ್ಟೇಬೇಗ ವಿವಾದಗಳ ಸುಳಿಗೆ ಸಿಲುಕಿತು. ಸಂಪ್ರದಾಯವಾದಿಗಳಿಂದ ವ್ಯಾಪಕ ಟೀಕೆಗಳಿಗೆ ಒಳಗಾಯಿತು. ಗೋಜಲು ಗೊಂದಲಗಳಿಂದ ಕನ್ನಡ ಸಾಹಿತ್ಯ ಪರಿಸರ ತುಂಬಿ ಸದ್ದು ಮಾಡಿತು. "ಕಾದಂಬರಿ ಪ್ರಗತಿಶೀಲರಿಂದಲೇ ಜನಪ್ರಿಯವಾದ, ಅವರು ತಮ್ಮ ಸಾಹಿತ್ಯ ರಚನೆಗೆ ಅತಿ ಸೂಕ್ತವೆಂದು ತಿಳಿದ ಸಾಹಿತ್ಯ ಪ್ರಕಾರವೆನ್ನುವುದು ನಿರ್ವಿವಾದದ ಸಂಗತಿ." (ರಾಘವೇಂದ್ರರಾವ್.ಎಚ್.ಎಸ್., ೧೯೯೦, ಪುಟ-೭೬.) ಪ್ರಗತಿಶೀಲ ಕಾದಂಬರಿಗಳನ್ನು ಸೃಷ್ಟಿಸಿಕೊಟ್ಟ ಜಗತ್ತಿನ ಕಪ್ಪು-ಬಿಳುಪುಗಳ, ಮೇಲು-ಕೀಳುಗಳ, ಶ್ರೀಮಂತ-ಬಡವನ ಹೋರಾಟ-ಹೊಡೆದಾಟಗಳು ಮುಂದುವರೆದು ಒಂದು ಪಂಥವನ್ನೇ ಸಾಹಿತ್ಯವಲಯದಲ್ಲಿ ಹುಟ್ಟುಹಾಕಿತು. "...ಪ್ರಗತಿಶೀಲ ಅವಧಿಯಲ್ಲಿ ಅತ್ಯುತ್ತಮ ಕಾದಂಬರಿಗಳೆಂದು ಕರೆಯಬಹುದಾದ 'ಮಾಡಿ ಮಡಿದವರು', 'ಚಿರಸ್ಮರಣೆ', 'ಜ್ವಾಲಾಮುಖಿಯ ಮೇಲೆ' ಮುಂತಾದ ಕೃತಿಗಳನ್ನು" (ರಾಘವೇಂದ್ರರಾವ್.ಎಚ್.ಎಸ್, ೧೯೯೦, ಪುಟ-೭೮.) ಹೆಸರಿಸಬಹುದು.

ಕಾದಂಬರಿ ಬೆಳೆದು ಬಂದ ಬಗೆಯನ್ನು ಕುರಿತು ನಿರಂಜನರು; "೧೯೪೩ರ ಬಳಿಕ ಪ್ರಗತಿಶೀಲತೆಯ ಕರೆ ನಮ್ಮ ನಾಡಿನಲ್ಲಿ ಕೇಳಿಸಿತು. ಅಂದಿನಿಂದ ಅದು ಹೊಸತಾಗಿ ಬಂದಿತೆಂದು ಅರ್ಥವಲ್ಲ. ಆ ಒಳ್ಳೆಯ ಭಾವನೆಗಳಿಗೆ ನಿರ್ಧಿಷ್ಟ ರೂಪಕೊಟ್ಟು ಅದು ಇಂಥದೇ ಎಂದು ಗುರುತಿಸುವ ಯತ್ನ ಆಗ ನಡೆಯಿತು. ಅದರ ಫಲವಾಗಿಯೂ ಯುದ್ಧ ಹಾಗೂ ಯುದ್ಧಾನಂತರ ನೂತನ ಬಣ್ಣ ತಳೆದು ರೂಪುಗೊಳ್ಳತೊಡಗಿದ ನಮ್ಮ ಸಾಮಾಜಿಕ ವಾತಾವರಣದ ಫಲವಾಗಿಯೂ ಕಾದಂಬರಿಗಳ ವಸ್ತುಗಳಲ್ಲಿ ಹೊಸತನ ತೋರಿತು. ಪ್ರಮುಖ ಲೇಖಕರು ಕೆಲವರು ಬದುಕನ್ನು ನೋಡುವ ದೃಷ್ಟಿ ಬದಲಾಯಿತು. ಅವರ ಸಮಾಜಪ್ರಶ್ನೆ ಸ್ಫುಟಗೊಂಡಿತು" (ನಿರಂಜನ, ೨೦೦೭, ಪುಟ-೭೦.) ಎಂದು ಹೇಳುತ್ತಾರೆ. ಇಂಥ ಕೆಲವು ಕಾದಂಬರಿಗಳನ್ನು ಇಲ್ಲಿ ಉಲ್ಲೇಖಿಸಬಹುದು:

## ಅನಕೃ ಅವರ ಕಾದಂಬರಿಗಳು

ಅನಕೃ ಅವರ ಸಂಧ್ಯಾರಾಗ, ಉದಯರಾಗ, ಮಂಗಳಸೂತ್ರ, ಸಾಹಿತ್ಯ ರತ್ನ, ನಟಸಾರ್ವಭೌಮ, ಬಣ್ಣದ ಬದುಕಿನಲ್ಲಿ, ಹುಲಿಯುಗುರು, ಗೃಹಲಕ್ಷ್ಮಿ, ರುಕ್ಮಿಣಿ, ತಾಯಿ ಮಕ್ಕಳು, ನಗ್ನಸತ್ಯ, ಶನಿಸಂತಾನ, ಸಂಜೆಗತ್ತಲು, ಅಪರಂಜಿ, ಗಾಜಿನಮನೆ, ಕನ್ನಡಮ್ಮನ ಗುಡಿಯಲ್ಲಿ, ದೀಪಾರಾಧನೆ, ಅಮರ ಅಗಸ್ಟ್, ಹೇಗಾದರೂ ಬದುಕೋಣ, ಹೀಗೆ ೧೧೫ಕ್ಕೆ ಹೆಚ್ಚು ಕಾದಂಬರಿಗಳನ್ನು ರಚಿಸಿದ 'ಕಾದಂಬರಿ ಸಾರ್ವಭೌಮ' ಅನಕೃ ಅವರಾಗಿದ್ದಾರೆ. ಇವರ ಕುರಿತು ಕೀರ್ತಿನಾಥ ಕುರ್ತಕೋಟಿ ಅವರು "ಮುಖ್ಯತಃ ಅವರು ವಿಚಾರವಾದಿಗಳಲ್ಲ. ಆದ್ದರಿಂದ ಸರಳವಾದ ಕಥೆಗಳ ಬಗ್ಗೆಯೇ ಅವರು ಗಮನಕೊಡಬೇಕಾಗಿತ್ತು. ವಿಪರೀತವಾದ ಭಾವನಾವಶತೆಯ ಪರಿಣಾಮವಾಗಿ, ಬುದ್ಧಿವಂತಿಕೆಯ ಬಲವೂ ತಪ್ಪಿಹೋಯಿತು. ಅಂತಃಕರಣದ ಆಳವನ್ನು ತೋರಿಸಬಲ್ಲ ಹೃದಯದಲ್ಲೇ ಬೌದ್ಧಿಕ ತಪ್ಪು ತಿಳುವಳಿಕೆಯ ಮಂಜು ಮುಸುಕಿದೆ. ಅದರಾಚೆಗಿರುವ ಜೀವನ ಅವರಿಗೆ ಕಾಣಿಸುವುದಿಲ್ಲ. ಹೀಗಾಗಿ ಮಂಡಿಸಬೇಕೆಂದರೆ ಸ್ವಂತ ವಿಚಾರಗಳಿಲ್ಲದೆ, ಚಿತ್ರಿಸಲಿಕ್ಕೆ ಜೀವನವೂ ಇಲ್ಲದೆ ಅ.ನ.ಕೃ. ದುರಂತ ಚಿತ್ರವಾಗಿದ್ದಾರೆ. ಅವರು ಜೀವನವೆಂದು ಹಿಡಿದದ್ದು ಕನಸಾಗುತ್ತದೆ; ಭಾವಪ್ರಪಂಚ ತರಲವಾಗುತ್ತದೆ; ಪಾತ್ರಗಳೆಲ್ಲ ನೆರಳುಗಳಾಗುತ್ತವೆ. ಅವರ ಕಾದಂಬರಿಗಳಿಗೆ ವಸ್ತುವಿನ ನೆರಳುಗಳಾಗುತ್ತವೆ. ಅವರ ಕಾದಂಬರಿಗಳಿಗೆ ವಸ್ತುವಿನ ಕೊರತೆ ಎಂದಿಗೂ ತಪ್ಪಿಲ್ಲ. ಬರೆಯುವುದು ಅವರಿಗೆ ಉಸಿರಾಡಿಸಿದಷ್ಟು ಸುಲಭವಾಗಿದೆ. ಆದರೆ ಯಾವುದನ್ನು ಕುರಿತು ಬರೆಯಬೇಕೆಂಬುದು ಅವರ ಸಮಸ್ಯೆ ಹೀಗಾಗಿ ಈ ಕೊರತೆಯನ್ನು ಅವರು ಸ್ವಂತ ಕನಸುಗಳಿಂದ ತುಂಬುತ್ತಾರೆ. ಜೀವನ ಅವರ ಕೈಗೆ ಅನುಭವವಾಗಿ ದೊರೆಯದೆ, ಕನಸಾಗಿಯೇ ದೊರೆತಿದೆ" (ರಾಘವೇಂದ್ರರಾವ್.ಎಚ್.ಎಸ್. ೧೯೯೦, ಪುಟ-೮೧.) ಎನ್ನುತ್ತಾರೆ.

ಇವರ ಮನೋಧೋರಣೆಯ ಕುರಿತು ಏನೆ ವಾದ-ವಿವಾದ, ದ್ವಂದ್ವಗಳಿದ್ದರೂ ಆಧುನಿಕ ಕನ್ನಡ ಸಾಹಿತ್ಯಕ್ಕೊಂದು ಲವಲವಿಕೆಯನ್ನು, ಲಾಲಿತ್ಯವನ್ನು ತಂದುಕೊಟ್ಟರು. ಅವರ ಕಾಲದಲ್ಲಿ ಹೊಸ ಹೊಸ ಬರಹಗಾರರು ಮೈಚಳಿಬಿಟ್ಟು ಬರೆಯತೊಡಗಿದರು. ಅವರು ಕನ್ನಡ ಬರಹಗಾರರ ಪಡೆ ಕಟ್ಟಿದರು. ಸಾಹಿತ್ಯ ಸುಲಭ ಬೆಲೆಯಲ್ಲಿ ಜನರಿಗೆ ತಲುಪಿಸುವಂತೆ ಪ್ರಕಾಶಕರ ಮನವೊಲಿಸಿದರು. ಜನರಲ್ಲಿ ವಾಚಾನಾಭಿರುಚಿಯನ್ನು ಬೆಳೆಸಿದರು ಎಂಬುವುದನ್ನು ಕೀರ್ತಿನಾಥ ಕುರ್ತಕೋಟಿಯಂತಹ ವಿಮರ್ಶಕರು ಗಮನಿಸಬೇಕು. ಕೇವಲ ಸಾಹಿತ್ಯ ರಚನೆ ಮಾತ್ರವಲ್ಲ. ೧೯೪೩ರಲ್ಲಿ ಅವರು ಪ್ರಗತಿಶೀಲ ಲೇಖಕರ ಸಂಘ ಕಟ್ಟಿದರು. ತಮ್ಮ ಜೊತೆಯವರನ್ನು ಸೇರಿಸಿಕೊಂಡು ಕರ್ನಾಟಕದ ತುಂಬ ಓಡಾಡಿ ಸಾಹಿತ್ಯದಲ್ಲಿ ಪ್ರಗತಿಶೀಲ ಗಾಳಿ ಬೀಸುವಂತೆ ಮಾಡಿದುದು ಇವರ ಹೆಚ್ಚಿನತನವೆಂದು ತೋರುತ್ತದೆ. ೧೯೪೪ರಲ್ಲಿ ಪ್ರೊ.

ಎಸ್.ಎಸ್. ಬಸವನಾಳರ ಅಧ್ಯಕ್ಷತೆಯಲ್ಲಿ ರಬಕವಿಯಲ್ಲಿ 'ಪ್ರಗತಿಶೀಲ' ಸಮ್ಮೇಳನ ನಡೆಸಿದರು. ಪ್ರಗತಿಶೀಲ ಬರಹಗಾರರನ್ನು ಪ್ರೋತ್ಸಾಹಿಸಿ ಹೊಸ ಹೊಸ ಪುಸ್ತಕಗಳು ಬರುವಂತೆ ನೋಡಿಕೊಂಡರು.

**ತರಾಸು ಅವರ ಕಾದಂಬರಿಗಳು**

ಪ್ರಗತಿಶೀಲ ಪಂಥದ ಲೇಖಕರ ಪರಂಪರೆಯಲ್ಲಿ ಅ.ನ.ಕೃ. ಅವರ ಪ್ರಭಾವಲಯದಲ್ಲಿ ರೂಪುಗೊಂಡ ಕನ್ನಡದ ಮಹತ್ವದ ಲೇಖಕರಲ್ಲಿ ತರಾಸು ಅಗ್ರಗಣ್ಯರಾಗಿದ್ದಾರೆ. ಪ್ರಗತಿಶೀಲ ಪಂಥದ ಕಥೆಗಾರರಾಗಿ, ಕಾದಂಬರಿಕಾರರಾಗಿ ಹೊರಹೊಮ್ಮಿದರಾದರೂ, ಆ ಪಂಥಕ್ಕೆ ಕಟ್ಟು ಬೀಳದೆ, ತಮ್ಮ ಸೃಜನಾತ್ಮಕ ಪ್ರತಿಭೆಯಿಂದ ಸತತವಾಗಿ ಸಾಹಿತ್ಯ ರಚನೆ ಮಾಡಿಕೊಂಡು ಬಂದವರು. ವಿದ್ಯಾರ್ಜನೆಯ ಅವಧಿಯಲ್ಲಿಯೇ ಸ್ವಾತಂತ್ರ್ಯ ಸಂಗ್ರಾಮದತ್ತ ಆಕರ್ಷಿತರಾಗಿದ್ದ ತರಾಸು ಅದರ ಭವಣೆಗಳನ್ನು ಅನುಭವಿಸಿದರು. ಮುಂದೆ ಅದೇ ಅವರ ಸ್ವಾತಂತ್ರ್ಯ ಹೋರಾಟದ ಕಥೆ-ಕಾದಂಬರಿಗಳ ರಚನೆಗೆ ವೇದಿಕೆಯಾಯಿತು.

೧೯೪೪ರಲ್ಲಿ ತ.ರಾ.ಸು. ಅವರ ಮೊದಲ ಕಾದಂಬರಿ 'ಮನೆಗೆ ಬಂದ ಮಹಾಲಕ್ಷ್ಮಿ' ಪ್ರಕಟವಾಯಿತು. ಆ ವೇಳೆಗಾಗಲೇ ಕನ್ನಡ ಕಾದಂಬರಿ ಕ್ಷೇತ್ರವು ಹುಲುಸಾಗಿ ಬೆಳೆದಿತ್ತು. ಅದು ಪ್ರಗಶೀಲ ಪಂಥದ ಗಾಢ ಪ್ರಭಾವ ಇವರ ಮೇಲೆ ಆಯಿತು. ರಕ್ತತರ್ಪಣ (೧೯೪೬), ಕಾಮಾಕ್ಷಿ, ಜೀತದ ಜೀವ, ಗಾಳಿಮಾತು, ನಾಗರಹಾವು, ಹಂಸಗೀತೆ, ಗೃಹಪ್ರವೇಶ, ಎರಡು ಹೆಣ್ಣು ಒಂದು ಗಂಡು, ಚಂದನದ ಗೊಂಬೆ, ಬಿಡುಗಡೆಯ ಬೇಡಿ, ಚಕ್ರತೀರ್ಥ, ಶಿಲ್ಪಶ್ರೀ, ಜೀವನಯಾತ್ರೆ, ತಿರುಗು ಬಾಣ, ದುರ್ಗಾಸ್ತಮಾನ, ನೃಪತುಂಗ, ಕಸ್ತೂರಿ ಕಂಕಣ ಹೀಗೆ ೬೮ ಕಾದಂಬರಿಗಳನ್ನು ರಚಿಸಿದ್ದಾರೆ. ಡಾ.ಎಂ.ಎಸ್. ಪಾಟೀಲ ಅವರು "ಸಾಮಾಜಿಕ ಅವ್ಯವಸ್ಥಿತ ಬದುಕಿನಲ್ಲಿ ಸಿಕ್ಕು ನರಳುತ್ತಿರುವ ವ್ಯಕ್ತಿಯ ವೈಯಕ್ತಿಕ ಬದುಕಿನ ಸುಂದರ ಚಿತ್ರಣಗಳನ್ನು ತರಾಸು ಬಹುಮಟ್ಟಿನ ತಮ್ಮ ಕಾದಂಬರಿಗಳಲ್ಲಿ ಕಾಣಿಸಿದ್ದಾರೆ. ವ್ಯಕ್ತಿ, ಕುಟುಂಬ, ಸಮಾಜವನ್ನೇ ದುರ್ಬಲಗೊಳಿಸುವ ಕಾಮ, ಪ್ರೇಮಗಳ ಕುರಿತು ಅವರ ಹರಿತವಾದ ಲೇಖನಿ ಸುಮ್ಮನೆ ಕುಳಿತಿಲ್ಲ. ವಸ್ತುನಿಷ್ಠ ಸಾಮಾಜಿಕ ವಿಮರ್ಶೆ, ಸಹಜವಾದ ನಿರೂಪಣೆ, ಕಲಾತ್ಮಕ ಬರಹದಿಂದ ತರಾಸು ಸಾಮಾಜಿಕ ಪ್ರಜ್ಞೆಯನ್ನು ತಮ್ಮ ಕಾದಂಬರಿಗಳಲ್ಲಿ ವ್ಯಕ್ತಪಡಿಸಿದ್ದಾರೆ" (ತ.ರಾ.ಸು. ೨೦೦೫, ಪುಟ-೩೫.) ಎಂದು ಹೇಳುತ್ತಾರೆ.

ಅಲ್ಲದೆ "ತ.ರಾ.ಸು. ಅವರ ಬರವಣಿಗೆ ಇನ್ನಷ್ಟು ಕುತೂಹಲಕಾರಿಯಾದುದು. ಅವರ ಬರವಣಿಗೆಯಲ್ಲಿ ನಿಜವಾಗಿಯೂ ಪ್ರಗತಿಪರವೆನಿಸುವ ಆಶಯಗಳನ್ನು ಹುಡುಕುವುದು ಕಷ್ಟ. ಕಾದಂಬರಿಗಳ ಒಳಗೆ ಮತ್ತು ಹೊರಗೆ, ಹಾಗೂ ಅವರ ಸ್ವಘೋಷಿತ ನಿಲುವುಗಳಲ್ಲಿಯೂ

ಪ್ರಗತಿಶೀಲತೆಯ ಅಂಶ ಕಡಿಮೆಯೇ. ಹೆಸರಿಗೆ ಐತಿಹಾಸಿಕ ಕಾದಂಬರಿಗಳೆಂದು ಕರೆಸಿಕೊಂಡರೂ ಐತಿಹಾಸಿಕತೆಯ ತಿಳುವಳಿಕೆಯೇ ಇಲ್ಲದ "ಕಂಬನಿಯ ಕುಯಿಲು', 'ರಕ್ತರಾತ್ರಿ', 'ಹಂಸಗೀತೆ', 'ಸಿಡಿಲಮೊಗ್ಗು' ಮುಂತಾದದ ಕಾದಂಬರಿಗಳನ್ನು ಪರಿಶೀಲಿಸಬಹುದು" (ರಾಘವೇಂದ್ರರಾವ್.ಎಚ್.ಎಸ್., ೧೯೯೦, ಪುಟ-೮೧-೮೨.) ಎಂದು ಖಾರವಾದ ವಿಮರ್ಶೆಗೆ ಒಳಗಾಗಿರುವುದುಂಟು.

## ನಿರಂಜನ ಅವರ ಕಾದಂಬರಿಗಳು

ಕಲ್ಯಾಣಸ್ವಾಮಿ (೧೯೫೬), ಪಾಲಿಗೆ ಬಂದ ಪಂಚಾಮೃತ, ಏಕಾಂಗಿನಿ, ಅಂಜನ (೧೯೫೭), 'ಹೆಣ್ಣಾಗಿ ಕಾಡಿತ್ತು ಮಾಯೆ' (೧೯೬೨), 'ಬಂಗಾರದ ಜಿಂಕೆ' (೧೯೬೨), 'ನಂದಗೋಕು' (೧೯೬೩), ಸ್ವಾಮಿ ಅಪರಾಂಪರ (೧೯೬೭), ವಿಮೋಚನೆ (೧೯೫೩), ಚಿರಸ್ಮರಣೆ (೧೯೫೫), ಮೃತ್ಯುಂಜಯ (೧೯೭೬), ಮಿಣುಕು ಹುಳು (೧೯೫೬), ಕೊನೆಯ ನಮಸ್ಕಾರ (೧೯೫೫) ಮೊದಲಾದ ೨೫ ಕಾದಂಬರಿಗಳನ್ನು ರಚಿಸಿದ್ದಾರೆ.

ಪ್ರಗತಿಶೀಲ ಲೇಖಕರಲ್ಲಿ ಎಡಪಂಥೀಯ ವಿಚಾರಧಾರೆಯನ್ನು ತುಂಬಾ ಕಮಿಟ್‌ಮೆಂಟಾದ ರೀತಿಯಲ್ಲಿ ಕೃತಿಗಿಳಿಸಿದವರೆಂದರೆ ನಿರಂಜನರು. ಹೀಗಾಗಿ ಇವರ ಒಟ್ಟು ವಿಚಾರಧಾರೆಯ ತಾತ್ವಿಕತೆಯ ಕುರಿತಂತೆ ಗಮನಹರಿಸಬೇಕಾಗುತ್ತದೆ. ಶತಮಾನಗಳ ಶೋಷಣೆಯ ವಿರುದ್ಧ ಹುಟ್ಟಿಕೊಂಡ ಪ್ರಗತಿಶೀಲ ಚಳುವಳಿ ಅಸಮಾನತೆಯ ವ್ಯವಸ್ಥೆಯ ವಿರುದ್ಧ ಬಂಡೆದ್ದು ಹೋರಾಡಿತು. ಅಖಿಲ ಭಾರತದ ಮಟ್ಟದಲ್ಲಿ ಪ್ರೇಮಚಂದ್‌ರಂತಹ ಪ್ರಗತಿಪರ ಲೇಖಕರಿಂದ ನಾಯಕತ್ವವನ್ನು ಪಡೆದುಕೊಂಡ ಈ ಚಳುವಳಿ ಕರ್ನಾಟಕಕ್ಕೂ ಹಬ್ಬಿತು. ಕರ್ನಾಟಕದಲ್ಲಿ ಪ್ರಗತಿಶೀಲ ಚಳುವಳಿಯ ಬಾವುಟವನ್ನು ಹಿಡಿದು ನಿಂತ ಅ.ನ.ಕೃ. ಹಾಗೂ ತ.ರಾ.ಸು. ಅಂತಹವರಲ್ಲಿ ತಾತ್ವಿಕ ವಿರೋಧಾಭಾಸಗಳಿದ್ದವು. ಅ.ನ.ಕೃ ಅವರ ಬರವಣಿಗೆಯಲ್ಲಿ ಪ್ರಗತಿಶೀಲ ವಿಚಾರಧಾರೆ ಕಾಣಿಸುವುದೇ ಇಲ್ಲ. ಇಂತಹ ಸಂದರ್ಭದಲ್ಲಿ ನಿರಂಜನರಂತಹ ಕಮಿಟೆಡ್ ಲೇಖಕರು ಚಳುವಳಿಯ ದ್ವಂದ್ವ ನೀತಿಯನ್ನು ಬಯಲಿಗೆಳೆದರು. (ಬಸವರಾಜ ಸಬರದ, ೧೯೯೯, ಪುಟ-೧೮.)

"ಕನ್ನಡದಲ್ಲಿ ಪ್ರಗತಿಶೀಲ ಸಾಹಿತ್ಯ ಚಳವಳಿಯನ್ನು ಹುಟ್ಟು ಹಾಕಿದವರೇ ನಿರಂಜನ" ಎಂದು ಸ್ಪಷ್ಟಪಡಿಸಿರುವ ಬಸವರಾಜ ಕಟ್ಟೀಮನಿಯವರು "ನಿರಂಜನರು ಪ್ರಗತಿಶೀಲ ಚಳುವಳಿಯನ್ನು ಅ.ನ.ಕೃ. ಹಿಡಿದುಕೊಂಡು ಯದ್ವಾತದ್ವಾ ಮಾತು ಸುರುಮಾಡಿದರು. ತ.ರಾ.ಸು. ನಾಡಿಗೇರ, ಅರ್ಚಕ ವೆಂಕಟೇಶ, ಕುಮಾರ ವೆಂಕಣ್ಣ, ಮ. ಶ್ರೀಧರಮೂರ್ತಿ ಇವರ ಗುಂಪಿಗೆ ಅ.ನ.ಕೃ. ನಾಯಕರಾದರು. ಶಿವರಾಯರಿಗಾಗಲಿ ನನಗಾಗಲಿ ಆ ಗುಂಪಿನಲ್ಲಿ

ಪ್ರವೇಶವಿರಲಿಲ್ಲ. ಅ.ನ.ಕೃ. ಅವರ ನುಡಿಗೂ ನಡೆಗೂ ಇದ್ದ ಮಹದಂತರ ಕಂಡು ನನಗೂ ಅವರ ಬಗೆಗೆ ಬೇಸರವಾಯಿತು. 'ನಟಸಾರ್ವಭೌಮ', 'ನಗ್ನ ಸತ್ಯ', 'ಶನಿಸಂತಾನ', 'ಸಂಜೆಗತ್ತಲು, ಇತ್ಯಾದಿ ವಿಕೃತ ಕಾಮಕೇಳಿಯ ಕಾದಂಬರಿಗಳೇ ಪ್ರಗತಿಶೀಲ ಸಾಹಿತ್ಯ ಎಂದು ಅ.ನ.ಕೃ. ಮತ್ತು ಅವರ ಗುಂಪು ವಿತಂಡವಾದ ಹೂಡುತ್ತಲೂ, ನಿರಂಜನರು ತಮ್ಮ ಖಡ್ಗದಂಥ ಲೇಖನಿ ಬಳಸಿ ಆ ಅವಿವೇಕದ ವಾದವನ್ನು ಕೊಚ್ಚಿ ಹಾಕುತ್ತಲೂ ಇದ್ದರು. ಮೂರು ನಾಲ್ಕು ವರ್ಷಗಳಲ್ಲಿಯೇ ಪ್ರಗತಿಶೀಲ ಲೇಖಕರ ಸಂಘ ಒಡೆದು ಎರಡು ಹೋಳಾಯಿತು. ಅ.ನ.ಕೃ. ಮತ್ತು ಅವರ ಸಂಗಡಿಗರದೊಂದು ಗುಂಪು. ನಿರಂಜನ ಮತ್ತು ಬಸವರಾಜ ಕಟ್ಟೀಮನಿ ಅವರದೊಂದು ಗುಂಪು" ಎಂದು ಬಸವರಾಜ ಕಟ್ಟೀಮನಿಯವರು ಪ್ರಗತಿಶೀಲ ಚಳುವಳಿ ಹೋಳಾದ ಬಗೆಗೆ ಸ್ಪಷ್ಟವಾಗಿ ಹೇಳಿದ್ದಾರೆ. (ಬಸವರಾಜ ಸಬರದ, ೧೯೯೯, ಪುಟ-೧೩.)

**ಬಸವರಾಜ ಕಟ್ಟೀಮನಿ ಅವರ ಕಾದಂಬರಿಗಳು**



ಕಟ್ಟೀಮನಿಯವರಿಗೆ ವಿಶಿಷ್ಟವಾದ ಒಂದು ಶೈಲಿಯಿದೆ. ಇತರರ ಬರಹಗಳೊಂದಿಗೆ ಇಟ್ಟಾಗ ಇದು ಬಸವರಾಜರದೇ ಎಂದು ತಟ್ಟನೆ ಗುರುತಿಸುವಷ್ಟು ಅವರ ವ್ಯಕ್ತಿತ್ವ ನಿಚ್ಚಳವಾಗಿ ಮೂಡಿ ಬರುತ್ತದೆ. ಲೋಕದ ಕೊಂಕು ಡೊಂಕುಗಳನ್ನು ದರ್ಪ ದಬ್ಬಾಳಿಕೆಗಳನ್ನು ಅಸಮತೆಯ ಆಷಾಢಭೂತಿತನಗಳನ್ನು ಕಂಡಾಗ, ಚಿತ್ರಿಸುವಾಗ ಅವರ ಶೈಲಿಗೆ ನೂರಾನೆಯ ಬಲ ಬರುತ್ತದೆ. ಪ್ರಗತಿಶೀಲತೆ ಕಾದಂಬರಿಯ ಉದ್ದಕ್ಕೂ ಆರ್ಭಟಿಸುವ ಆ ಶಕ್ತಿಯುತವಾದ ಗಂಡಶೈಲಿಯನ್ನು ಓದುವಾಗ ಎಂಥವರ ಮನದಲ್ಲೂ ಬೆಂಕಿಯ ಹೊಳೆ ಹರಿಯದಿರದು. ಸ್ವಾತಂತ್ರ್ಯ ಪ್ರೇಮದ ಉಜ್ವಲ ಅಧ್ಯಾಯಗಳನ್ನು ಅಧ್ಯಯನಿಸುವಾಗ ವೀರಾವೇಶದ ರಾಷ್ಟ್ರಪ್ರೇಮದ ಕುದಿರಕ್ತ ಧಮನಿಧಮನಿಗಳಲ್ಲಿ ಅತ್ಯಂತ ವೇಗವಾಗಿ ಧುಮುಕಿ ಹರಿಯತೊಡಗುತ್ತದೆ.

ಬಸವರಾಜ ಕಟ್ಟೀಮನಿಯವರನ್ನು ಕನ್ನಡ ಸಾಹಿತ್ಯ ಲೋಕ ಗುರುತಿಸಿರುವುದು ಒಬ್ಬ ಕಾದಂಬರಿಕಾರರೆಂದು. ಹೀಗೆ ಗುರುತಿಸುವಷ್ಟರ ಮಟ್ಟಿಗೆ ಅವರು ಕಾದಂಬರಿ ಕ್ಷೇತ್ರದಲ್ಲಿ ವಿಫುಲ ಕೃಷಿ ಮಾಡಿದ್ದಾರೆ. ೧೯೪೬ರಲ್ಲಿ ಪ್ರಕಟವಾದ ಅವರ ಸ್ವಾತಂತ್ರ್ಯದೆಡೆಗೆ ಕಾದಂಬರಿಯಿಂದ ಹಿಡಿದು ೧೯೮೬ರಲ್ಲಿ ಪ್ರಕಟವಾದ ಅವರ 'ಆಧುನಿಕ ಬಸವಣ್ಣ' ಕಾದಂಬರಿಯವರೆಗೆ ಒಟು ೪೦ ಕಾದಂಬರಿಗಳನ್ನು ರಚಿಸಿದ್ದಾರೆ. ಅಂದರೆ ೪೦ ವರ್ಷಗಳ ಅವಧಿಯಲ್ಲಿ ಅವರು ೪೦ ಕಾದಂಬರಿಗಳನ್ನು ಬರೆದಿದಾರೆ. ಆದರೆ ವರ್ಷಕ್ಕೊಂದರಂತೆ ಅಲ್ಲ. ಒಮ್ಮೆ ಅವು ಮಹಾಪೂರದಂತೆ ಬಂದಿದ್ದರೆ ಮತ್ತೊಮ್ಮೆ ಸಣ್ಣ ಹಳ್ಳದಂತೆ ಪ್ರಕಟವಾಗಿವೆ. ಸ್ವಾತಂತ್ರ್ಯದೆಡೆಗೆ, ಮಾಡಿಮಡಿದವರು, ನರಗುಂದ ಬಂಡಾಯ ಸಂಗೊಳ್ಳಿರಾಯನಾಯಕ, ಆಶ್ರಮವಾಸಿ, ಕತ್ತರಿ ಪ್ರಯೋಗ, ಖಾನಾವಳಿಯ ನೀಲಾ, ಗಿರಿಯ ನವಿಲು, ಜಲತರಂಗ, ಜ್ವಾಲಾಮುಖಿಯ ಮೇಲೆ,

ನಾನು ಪೋಲೀಸನಾಗಿದ್ದೆ, ಪೌರುಷ ಪರೀಕ್ಷೆ, ಬೀದಿಯಲ್ಲಿ ಬಿದ್ದವಳು, ಜರತಾರಿ ಜಗದ್ಗುರು, ಬಂಗಾರದ ಜಿಂಕೆಯ ಹಿಂದೆ, ಗಳೆಯನ ಮಡದಿ, ಪಾರತಗಿತ್ತಿ, ಬೆಂಗಳೂರಿಗೊಂದು ಟಿಕೇಟು, ದ್ರೋಹಿ, ಪ್ರಪಾತ ಹೀಗೆ ಕೆಲವನ್ನಿಲ್ಲಿ ಹೆಸರಿಸಲಾಗಿದೆ.

ಕಟ್ಟೀಮನಿಯವರ ೪೦ ಕಾದಂಬರಿಗಳನ್ನು ಸಾಂಪ್ರದಾಯಕ ರೀತಿಯಲ್ಲಿ ೧) ರಾಷ್ಟ್ರೀಯತೆಯ ಕಾದಂಬರಿಗಳು ೨) ಸಾಮಾಜಿಕ ಕಾದಂಬರಿಗಳು ೩) ರಾಜಕೀಯ ಕಾದಂಬರಿಗಳು ೪) ಐತಿಹಾಸಿಕ ಕಾದಂಬರಿಗಳು ಎಂದು ನಾಲ್ಕು ವಿಧದಲ್ಲಿ ವಿಂಗಡಿಸಬಹುದು. ಇದರಲ್ಲಿ ಸಾಮಾಜಿಕ ಕಾದಂಬರಿಗಳ ಸಂಖ್ಯೆಯೇ ಬಹುದೊಡ್ಡದು. "ಶ್ರೇಣೀಕೃತ ಸಮಾಜದಲ್ಲಿ ಅಸಂಖ್ಯ ಸಮಸ್ಯೆಗಳ ನಿರ್ಮಾಣಕ್ಕೆ ಕಾರಣವಾಗುವ ಮೇಲ್ವರ್ಗದವರ ಬಗೆಗೆ ಅವರಿಗೆ ಎಲ್ಲಿಲ್ಲದ ಸಿಟ್ಟು-ಕೋಪ. ಯಾವುದೇ ರೀತಿಯ ನಯ-ನವುರುಗಳಿಲ್ಲದೆ ನೇರವಾಗಿ ಹೊರಹಾಕುತ್ತಾರೆ. ಅದೇ ಕಟ್ಟೀಮನಿಯವರ ಪ್ರಮುಖ ವೈಶಿಷ್ಟ್ಯ ಹಾಗೂ ದೌರ್ಬಲ್ಯ. ಈ ಕಾರಣಕ್ಕಾಗಿಯೇ ಅವರ ಕಾದಂಬರಿಗಳು ಸಿಡಿಗುಂಡಿನಂತೆ ಕಾಣುತ್ತವೆ." (ಬಸವರಾಜ ಸಾದರ, ೧೯೯೯, ಪುಟ-೬೨.) ಇದಕ್ಕೆ ಹೊಂದಿಕೊಂಡಂತೆ ಅವರು ಶೋಷಿತರನ್ನು ಕುರಿತು ಬರೆಯತೊಡಗಿದ್ದನ್ನು ಕಾಣುತ್ತೇವೆ.

ಪ್ರಗತಿಶೀಲ ಅವಧಿಯ ಅತ್ಯುತ್ತಮ ಕಾದಂಬರಿಗಳನ್ನು ನೀಡಿದ ಕಟ್ಟೀಮನಿಯವರ ಒಂದು ಲಕ್ಷಣವೆಂದರೆ ಅವರ ಕಾದಂಬರಿಗಳಲ್ಲಿ ಸಂಪೂರ್ಣವಾದ ಕಲ್ಪನೆಯನ್ನು ಕಾಣಲು ಸಾಧ್ಯವಿಲ್ಲ. ಅವು ಹೆಚ್ಚಾಗಿ ಅನುಭವದ, ವಾಸ್ತವದ ಚಹರೆಗಳಲ್ಲೇ ಬರೆದಂತವಾಗಿವೆ. ಈ ದೃಷ್ಟಿಯಲ್ಲಿ ಕಟ್ಟೀಮನಿಯವರ ಕಾದಂಬರಿಯ ಲೋಕ ವಿಭಿನ್ನವೆನಿಸಿಕೊಳ್ಳುತ್ತದೆ. ಅದು ಮುಗ್ಧತೆ ಮತ್ತು ವಾಸ್ತವತೆಗಳ ನಡುವಿನ ಮುಖಾಮುಖಿಯ ಲೋಕ. ವಾಸ್ತವವನ್ನು ವಿರೂಪಗೊಳಿಸದೇ ಚಿತ್ರಿಸಬೇಕೆಂಬ ರೊಚ್ಚಿನ ಜೊತೆಜೊತೆಯಲ್ಲಿಯೇ ತನ್ನ ಕುಂದುಕೊರತೆಗಳ ಬಗ್ಗೆಯೂ ಸದಾ ಕೊರಗುವ ದೃಷ್ಟಿಕೋನಗಳು ಅವರ ಕಥೆ-ಕಾದಂಬರಿಗಳಲ್ಲಿ ವ್ಯಕ್ತವಾಗುತ್ತವೆ.

ಕಟ್ಟೀಮನಿಯವರ ಪ್ರಗತಿಶೀಲ ಧೋರಣೆಯನ್ನು ಕುರಿತು ಗೋಪಾಲಕೃಷ್ಣ ಅಡಿಗರು "ಜೀವನದ ನಾನಾ ಸಮಸ್ಯೆಗಳ ಮೂಲೆಮೂಲೆಗಳನ್ನು ಹುಡುಕಿ ನೋಡುವೆನೆಂಬ ಬುದ್ಧಿಯ ಎಚ್ಚರ, ಸತ್ಯದ ಹಂಬಲ ಉದ್ದಕ್ಕೂ ನನಗೆ ಕಂಡುಬಂದಿದೆ. ಯಾವ ತತ್ವಕ್ಕೇ ಆಗಲಿ, ವಾದಕ್ಕೇ ಆಗಲಿ, ಸಿದ್ಧಾಂತಕ್ಕೆ ಆಗಲಿ ಕಟ್ಟು ಬೀಳದೆ ತನ್ನ ಅನುಭವಕ್ಕೆ ಬಂದುದನ್ನು, ತನಗೆ ಸತ್ಯವೆಂದು ಕಂಡುದನ್ನು ಹೇಳುವ ಎದೆಗಾರಿಕೆ ಮತ್ತು ಸತ್ಯವನ್ನು ಹುಡುಕುವುದಕ್ಕೆ ಅತ್ಯವಶ್ಯವಾದ ತಾಳ್ಮೆ ಈ ಎರಡೂ ಉತ್ತಮಗುಣಗಳೂ ನಿಮ್ಮ ಕಾದಂಬರಿಯಲ್ಲಿವೆ"(ರಾಘವೇಂದ್ರರಾವ್.ಎಚ್. ಎಸ್, ೧೯೯೦, ಪುಟ-೭೯.) ಎಂದು ಶ್ಲಾಘಿಸಿರುವರು.

### ವಿ.ಎಂ. ಇನಾಂದಾರರ ಅವರ ಕಾದಂಬರಿಗಳು

ವೆಂಕಟೇಶ ಮಧ್ವರಾವ್ ಇನಾಂದಾರ್ ಅವರು 'ಯಾತ್ರಿಕರು', 'ಚಿತ್ರಲೇಖ, ಶಾಪ', 'ಮೂರಾಬಟ್ಟೆ' (೧೯೪೬) 'ವಿಜಯ ಯಾತ್ರೆ' (೧೯೪೮) ಎಂಬ ಕಾದಂಬರಿಗಳನ್ನು ರಚಿಸಿದ್ದಾರೆ. ಭಾರತ ಸ್ವಾತಂತ್ರ್ಯ ಪೂರ್ವದಲ್ಲಿ ಮೂಡಿಬಂದ 'ಮೂರಾಬಟ್ಟೆ' ಮತ್ತು ಸ್ವಾತಂತ್ರ್ಯ ನಂತರದ 'ವಿಜಯ ಯಾತ್ರೆ' ಎಂಬ ಕಾದಂಬರಿಗಳು ಪ್ರಗತಿಶೀಲ ಮನೋಧೋರಣೆಯ ಹಿನ್ನೆಲೆಯಲ್ಲಿ ಬರೆಯಲ್ಪಟ್ಟವಾಗಿವೆ. ಸ್ವಾತಂತ್ರ್ಯ ಹೋರಾಟ, ಚಳುವಳಿಯ ತಿಳಿವಿನ ಚಿತ್ರಣವೂ ಇವುಗಳಲ್ಲಿ ಕಾಣುತ್ತದೆ.

### ಶಿವರಾಮ ಕಾರಂತ ಅವರ ಕಾದಂಬರಿಗಳು

ಶಿವರಾಮ ಕಾರಂತರು ಸಾಹಿತ್ಯದ ಹೆಚ್ಚಿನ ಎಲ್ಲ ಪ್ರಕಾರಗಳಲ್ಲೂ ಕೆಲಸ ಮಾಡಿದವರು. ಆದರೂ ಅವರು ಕಾದಂಬರಿಕಾರರಾಗಿ ಮಹತ್ವ ಪಡೆದಿದ್ದಾರೆ. ವಿಚಿತ್ರಕೂಟ ಮತ್ತು ಭೂತ ಎಂಬ ಎರಡು ಪತ್ತೇದಾರಿ ಕಾದಂಬರಿಗಳ ಮೂಲಕ ಕಾದಂಬರಿ ಬರೆಯಲು ಪ್ರಾರಂಭಿಸಿದ ಶಿವರಾಮ ಕಾರಂತರು ಚೋಮನದುಡಿ, ಸರಸಮ್ಮನ ಸಮಾಧಿ, ಮರಳಿ ಮಣ್ಣಿಗೆ, ಔದಾರ್ಯದ ಉರುಳಲ್ಲಿ, ಬೆಟ್ಟದ ಜೀವ, ಕುಡಿಯರ ಕೂಸು, ಮೂಕಜ್ಜಿಯ ಕನಸುಗಳು, ಮೈ ಮನಗಳ ಸುಳಿಯಲ್ಲಿ, ಅಳಿದ ಮೇಲೆ, ಧರ್ಮರಾಯನ ಸಂಸಾರ, ಕರುಳಿನ ಕರೆ ಮೊದಲಾದ ೪೫ ಕಾದಂಬರಿಗಳನ್ನು ಬರೆದಿದ್ದಾರೆ.

ಗಟ್ಟಿಯಾದ ಅನುಭವ, ಪ್ರಬುದ್ಧ ಜೀವನದೃಷ್ಟಿ, ವಸ್ತುನಿಷ್ಠ ಪ್ರಾಮಾಣಿಕತೆ, ಪ್ರಖರ ಸಾಮಾಜಿಕತೆ ಹಾಗೂ ನಿರ್ಭೀತಿಯ ನಿಲುವುಗಳಿಂದಾಗಿ ಕಾರಂತರ ಕಾದಂಬರಿಗಳು ಆಧುನಿಕ ಕನ್ನಡ ಸಾಹಿತ್ಯದ ಶ್ರೇಷ್ಠ ಸಾಧನೆಯ ಅಂಗಗಳಾಗಿವೆ. ಅವರ ಕಾದಂಬರಿಗಳ ಶಕ್ತಿ, ದೌರ್ಬಲ್ಯಗಳನ್ನು ಕುರಿತು, ಇತಿಮಿತಿಗಳನ್ನು ಕುರಿತು ಅನೇಕ ವಿಮರ್ಶೆಗಳು, ಚರ್ಚೆಗಳು ನಡೆದಿವೆ.

### ವ್ಯಾಸರಾಯ ಬಲ್ಲಾಳ ಅವರ ಕಾದಂಬರಿಗಳು

'ಹೇಮಂತಗಾನ', 'ಕಾಡು ಮಲ್ಲಿಗೆ', 'ಬಂಡಾಯ', 'ಅನುರಕ್ತೆ', 'ಚಿರವಿರಹಿ', 'ವಾತ್ಸಲ್ಯಪಥ' ಇವು ಬಲ್ಲಾಳರ ಪ್ರಮುಖ ಪ್ರಗತಿಶೀಲ ಪಂಥದಲ್ಲಿ ಮೂಡಿಬಂದ ಪ್ರಮುಖ ಕಾದಂಬರಿಗಳು. ಇವರ ಕೃತಿಗಳಲ್ಲಿ ರಾಷ್ಟ್ರೀಯತೆ ಮತ್ತು ಸಮತಾವಾದಗಳ ನಡುವಿನ ದ್ವಂದ್ವವನ್ನು ಗುರುತಿಸಬಹುದು.

## ಚದುರಂಗ ಅವರ ಕಾದಂಬರಿಗಳು

ಚದುರಂಗರು ಬರಹಕ್ಕಿಂತ ಬದುಕು ದೊಡ್ಡದು ಎಂದು ನಂಬಿ ಬರೆದು, ಬರವಣಿಗೆಯಲ್ಲಿ ಆತ್ಮಸುಖವನ್ನು ಅನುಭವಿಸಿದವರು. ನವೋದಯದ ಉದಾರ ಮಾನವತಾವಾದಿ ಆದರ್ಶಗಳಿಂದ ಪ್ರೇರಿತವಾಗಿ ಬರಹ ಲೋಕ ಪ್ರವೇಶಿಸಿದರು. ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಂಡ ವಿಭಿನ್ನ ವೈಚಾರಿಕ, ಸಾಂಸ್ಕೃತಿಕ ಕಾಳಜಿಗಳನ್ನು ಸಮಚಿತ್ತದಿಂದ ಗ್ರಹಿಸಿದರು. ಪ್ರಗತಿಶೀಲ ಲೇಖಕರ ಸಾಮಾಜಿಕ ಕಾಳಜಿ ಮತ್ತು ಪ್ರಗತಿಪರ ಧೋರಣೆಗಳಿಗೆ ಆಕರ್ಷಿತರಾದರು. ಕಾದಂಬರಿ ಪ್ರಕಾರದಲ್ಲಿ ಉದಾರ ಮಾನವಾಸಕ್ತಿಗಳನ್ನು ಅರ್ಥಪೂರ್ಣವಾಗಿ ಅಭಿವ್ಯಕ್ತಿಸಿ ಸಾಹಿತ್ಯ ಲೋಕದಲ್ಲಿ ವಿಶಿಷ್ಟರೆನಿಸಿದರು. ಸ್ವಭಾವ ಸಹಜವಾಗಿದ್ದ ಕಥನಶಕ್ತಿಯಲ್ಲಿ ತಮ್ಮ ಜೀವಾನುಭವದ ಪಾಕವನ್ನು ಸಣ್ಣಕಥೆಗಳಲ್ಲಿ, ಕಾದಂಬರಿಗಳಲ್ಲಿ ಮೂಡಿಸಿದ್ದಾರೆ. ಮಾಸ್ತಿ ಕಥನ ಪರಂಪರೆ ಪ್ರಭಾವ ಚದುರಂಗರ ಆರಂಭಿಕ ಕಥೆಗಳಲ್ಲಲಿ ಸ್ಪಷ್ಟವಾಗಿದ್ದರೂ ಪ್ರಗತಿಶೀಲತೆಯ ಒಲವು ಅವರ ಒಟ್ಟು ಸಾಹಿತ್ಯದ ಕೇಂದ್ರ ಪ್ರಜ್ಞೆಯಾಗಿ ಅಭಿವ್ಯಕ್ತವಾಗಿದೆ.

ಬಹುಪಾಲು ಪ್ರಗತಿಶೀಲ ಸಾಹಿತಿಗಳ ಪ್ರಮುಖ ಅಭಿವ್ಯಕ್ತಿಯ ಪ್ರಕಾರ ಕಾದಂಬರಿ. ಭಾರತೀಯ ಸಮಾಜದ ಜಾತಿ–ಲಿಂಗ–ವರ್ಗ ಭೇದಗಳನ್ನು, ಅಜ್ಞಾನ, ಬಡತನ, ಅಸ್ಪೃಶ್ಯತೆಯನ್ನು ಮತ್ತು ಗ್ರಾಮೀಣ ದೇಶೀ ಸಂಸ್ಕೃತಿಯ ಒಳನೋಟಗಳನ್ನು ದಟ್ಟವಾಗಿ ಚಿತ್ರಿಸುವ ನಾಲ್ಕು ಕಾದಂಬರಿಗಳನ್ನು ರಚಿಸಿದ ಚದುರಂಗರು ಕನ್ನಡದ ಬಹುಮುಖ್ಯ ಗದ್ಯ ಲೇಖಕರಾಗಿ, ಕಾದಂಬರಿಕಾರರಾಗಿ ಅನನ್ಯರೆನಿಸಿದ್ದಾರೆ. 'ಸರ್ವಮಂಗಳ', 'ಉಯ್ಯಾಲೆ', 'ವೈಶಾಖ' ಮತ್ತು 'ಹೆಜ್ಜಾಲ' ಇವರ ಗ್ರಾಮೀಣ ಬದುಕಿನ ಗಾಢ ಅನುಸಂಧಾನದ ಫಲರೂಪಿ ರಚನೆಗಳು ಅಭಿವ್ಯಕ್ತಗೊಂಡಿವೆ.

ಬರವಣಿಗೆಯ ಮೇಲಿನ ಸಂಯಮದಿಂದಲೇ, ಅನ್ಯಮಾರ್ಗಗಳ ಪ್ರಭಾವವನ್ನು ಆರೋಗ್ಯಕರವಾಗಿ ಗ್ರಹಿಸುವ ರೀತಿಯಿಂದಲೇ ಚದುರಂಗರು ವಿಶಿಷ್ಟರಾದವರು. ವಿಭಿನ್ನ ಅನುಭವಗಳ ಸಂಗಡ ಆಗುವ ಮುಖಾಮುಖಿಯಲ್ಲಿಯೇ ತನ್ನ ಚಿಂತನಾಲೋಕವನ್ನು ವಿಸ್ತರಿಸುತ್ತಾ ಹೋಗುವ ಅಂಶಗಳು ಕಾದಂಬರಿಯಲ್ಲಿ ಅನುವುಮಾಡಿಕೊಂಡಿವೆ.

## ಶ್ರೀರಂಗ ಅವರ ಕಾದಂಬರಿಗಳು

"ಶ್ರೀರಂಗರದು ಕಾದಂಬರಿಯ ಕ್ಷೇತ್ರದಲ್ಲಿ ಒಂದು ಧೀರವಾದ ಪ್ರಯೋಗವೆನ್ನಬಹುದು. ಈ ಪ್ರಯೋಗದ ಗುಣ-ದೋಷಗಳೇ ಇದ್ದರೂ ಅವುಗಳ ಜವಾಬ್ದಾರಿಯನ್ನು ಹೊರುವಷ್ಟು ತ್ರಾಣ ಈ ಪ್ರಯೋಗದಲ್ಲಿದೆ. ನಾಟಕಗಳಲ್ಲಿ ಪಾತ್ರಗಳ ಹಿನ್ನೆಲೆಗೆ ಅವ್ಯಕ್ತವಾಗಿದ್ದ ಧೀಶಕ್ತಿ ಕಾದಂಬರಿಗಳಲ್ಲಿ ಹೆಚ್ಚಿನ ವಿಸ್ತಾರವನ್ನು ಪಡೆಯಿತು. ಈ ಪ್ರಯೋಗದಲ್ಲಿ ಕೊರತೆಗಳಿಲ್ಲದಿಲ್ಲ. ಮೊದಲನೆಯದಾಗಿ ಶ್ರೀರಂಗ ವೈಯಕ್ತಿಕತೆಯ ಬರವಣಿಗೆಗೆ ಸ್ವಾತಂತ್ರ್ಯವನ್ನೂ ಕೊಡುವದಿಲ್ಲ. ಅದರಿಂದಾಗಿ ಶ್ರೀರಂಗರ ಎಲ್ಲ ವಿಕ್ಷಿಪ್ತತೆಗಳನ್ನು ಓದುಗ ಅನುಭವಿಸಬೇಕಾಗುತ್ತದೆ. ಒಂದು ಸಾಹಿತ್ಯ ಕೃತಿ ಲೇಖಕ ಹಾಗೂ ಓದುಗರಿಬ್ಬರು ಸಾಮೂಹಿಕ ಆಸ್ತಿಯಾಗಿದೆ. ಲೇಖಕನ ಪೂರ್ವಪಕ್ಷವನ್ನು ಪರೀಕ್ಷಿಸಲು ಕೃತಿ ಓದುಗರಿಗೆ ಉತ್ತರಪಕ್ಷವಾಗುವಂತಿರಬೇಕು. ಆದರೆ ಶ್ರೀರಂಗರು ಈ ಸ್ಥಾನವನ್ನು ಸಂಪೂರ್ಣ ಆಕ್ರಮಿಸಿಬಿಡುತ್ತಾರೆ. ಆದ್ದರಿಂದ ಈ ಮಾದರಿಯ ಬರವಣಿಗೆ ತನ್ನ ಸಂಪ್ರದಾಯವನ್ನು ನಿರ್ಮಿಸಲಾರದು. ಕಾರಂತ, ಕೈಲಾಸಂ ಹಾಗೂ ಕು.ವೆಂ.ಪು. ಮೊದಲಾದ ಆತ್ಮನಿಷ್ಠ ಸಾಹಿತಿಗಳ ಸಾಲಿನಲ್ಲಿಯೇ ಶ್ರೀರಂಗರು ಸೇರುತ್ತಾರೆ"(ಕೀತಿನಾಥ ಕುರ್ತಕೋಟಿ, ಪುಟ-೨೨೪.) ಎಂದರೂ ಇವರು ಕಾದಂಬರಿಯನ್ನು ಬರೆದಿದ್ದು ಪ್ರಗತಿಶೀಲ ಪಂಥದ ಉತ್ಕೃಷ್ಟ ಕಾಲದಲ್ಲಿ. ಆ ಕಾಲಕ್ಕಾಗಲೇ ಅನೇಕ ಲೇಖಕರು ಪ್ರಗತಿಶೀಲ ಧೋರಣೆಗೆ, ಪ್ರಭಾವಕ್ಕೆ ಸಿಕ್ಕು ಕಥೆ-ಕಾದಂಬರಿಗಳನ್ನು ರಚಿಸಲು ಪ್ರಾರಂಭಿಸಿದ್ದರು. ಅದರ ಪ್ರಭಾವ ಶ್ರೀರಂಗರ ಕಾದಂಬರಿಗಳಲ್ಲೂ ಕಾಣಸಿಗುತ್ತದೆ.

ಶ್ರೀರಂಗರ ಪ್ರಮುಖ ಕಾರ್ಯಕ್ಷೇತ್ರ ರಂಗಭೂಮಿಯಗಿತ್ತು. ಆದರೂ 'ಪುರುಷಾರ್ಥ' ಮತ್ತು 'ವಿಷಚಕ್ರವ್ಯೂಹ', 'ಅನಾದಿ-ಅನಂತ' 'ಪ್ರಕೃತಿ-ಪುರುಷ', 'ಕುಮಾರ ಸಂಭವ', 'ವಿಶ್ವಾಮಿತ್ರನ ಸೃಷ್ಟಿ' ಮೊದಲಾದ ಕಾದಂಬರಿಗಳ ಮೂಲಕ ಕಾದಂಬರಿ ಕ್ಷೇತ್ರದಲ್ಲಿಯೂ ಮಹತ್ವದ ಹೆಜ್ಜೆ ಗುರುತು ಬಿಟ್ಟಿದ್ದಾರೆ.

## ೩.೭-ಪ್ರಗತಿಶೀಲ ಸಂವೇದನೆಯಲ್ಲಿ ಸ್ವಾತಂತ್ರ್ಯ ಹೋರಾಟ ಬೆಳೆದು ಬಂದ ಬಗೆ

ಪ್ರಾಚೀನ ಕಾಲದಲ್ಲಿ ನಮ್ಮ ಜನಗಳಿಗೆ ತಮ್ಮ ನೆಲ ಮತ್ತು ರಾಜರುಗಳ ಬಗ್ಗೆ ಅಭಿಮಾನ, ಭಕ್ತಿ ಇದ್ದುದು ಕಂಡುಬರುತ್ತದೆ. ಇಂಥದ್ದನ್ನು ರಾಷ್ಟ್ರೀಯತೆಯ ಕಕ್ಷೆಯಲ್ಲಿ ತರುವ ಚಿಂತನೆಗಳೂ ಉಂಟು. ಸಣ್ಣ ಸಣ್ಣ ನಾಡುಗಳನ್ನು ಗೆದ್ದು ಅದನ್ನಾಳುವ ದೊರೆಗಳು ಆ ಕಾಲದ ಸಂಸ್ಕೃತಿ ನಿರ್ಮಾಪಕರಾಗಿದ್ದರು. ನಾಡ ಜನರು ಆ ದೊರೆಗಳಲ್ಲಿಯೂ ಅವರ ಮೂಲಕ ಆಯಾ ನಾಡುಗಳಲ್ಲಿಯೂ ನಿಷ್ಠೆಯನ್ನು ತೋರುವುದು ಆಗಿನ ರಾಷ್ಟ್ರೀಯತೆಯ ರೀತಿಯಾಗಿತ್ತು.

ಮುಂದಿನ ಕಾಲದಲ್ಲಿ ಕೂಡ ಈ ವ್ಯಕ್ತಿಪೂಜೆ, ಸ್ವಾಮಿಭಕ್ತಿ, ಮರ್ಯಾದಿತ ದೇಶಪ್ರೇಮ ಮೊದಲಾದವು ಕನ್ನಡ ಜನಜೀವನದ ಸಾಮಾನ್ಯ ಲಕ್ಷಣಗಳಾಗಿವೆ.

ರಾಜಕೀಯ ದೃಷ್ಟಿಯಿಂದ ಹೇಳುವುದಾದರೆ ಸ್ವಾತಂತ್ರ್ಯ ಪೂರ್ವ ಭಾರತದ ಇತಿಹಾಸದಲ್ಲಿ ಈ ದೇಶದ ಜನಕ್ಕೆ ಪರಿಚಿತವಾದದ್ದು 'ರಾಜಭಕ್ತಿಯೇ' ಹೊರತು ರಾಷ್ಟ್ರೀಯತೆ ಅಲ್ಲ. ಅನೇಕ ರಾಜ ಮಹಾರಾಜರಿಂದ ಆಳಲ್ಪಡುತ್ತಿದ್ದ ದೇಶದ ಅನೇಕ ರಾಜ್ಯಗಳ ಜನ ಅಲ್ಲಲ್ಲಿನ ಪ್ರಭುಗಳ ಬಗ್ಗೆ ಇಟ್ಟುಕೊಂಡಿದ್ದ ನಿಷ್ಠೆ, ತೋರುತ್ತಿದ್ದ ಗೌರವ, ರಾಜಭಕ್ತಿ ಎಂದೆನಿಸಿಕೊಂಡಿತ್ತು ಹೊರತು 'ರಾಷ್ಟ್ರೀಯತೆ' ಎಂದು ಅನ್ನಿಸಿಕೊಳ್ಳಲು ಸಾಧ್ಯವಿರಲಿಲ್ಲ. ಹೀಗಾಗಿ ರಾಜಭಕ್ತಿ ಆಯಾ ರಾಜ್ಯದ ಜನಮನವನ್ನು ನಿಯಂತ್ರಿಸುವ ಶಕ್ತಿಯಾಗಿತ್ತು. ಯಾವಾಗ ಈ ರಾಜರುಗಳ ಮೂಲಕ ತಮ್ಮನ್ನಾಳುತ್ತಿದ್ದ ಪರಕೀಯ ಪ್ರಭುತ್ವವನ್ನು ಕಿತ್ತೊಗೆಯುವ ಸ್ವಾತಂತ್ರ್ಯ ಹೋರಾಟ ಮೊದಲಾಯಿತೋ ಆಗ ಅದು ರಾಷ್ಟ್ರೀಯ ಚಳವಳಿ ಎಂದು ಕರೆಸಿಕೊಂಡಿತು.

ಭಾರತದ ಮಟ್ಟಿಗೆ ಪಟ್ಟಣ-ರಾಜ್ಯ ಮತ್ತು ಸಾಮ್ರಾಜ್ಯಗಳನ್ನು ಬಹು ಹಿಂದಿನಿಂದ ಕಾಣುತ್ತಾ ಬಂದಿದ್ದೇವೆ. ಆಯಾ ರಾಜ್ಯವನ್ನು ಕುರಿತ ರಾಜಕೀಯ ಭಾವನೆಗಳು ಎಂದರೆ ಗೌರವ. ಆಧುನಿಕ ಭಾರತದ ಪರಿಸರದಲ್ಲಿ ಸ್ವಾತಂತ್ರ್ಯದ ಹೋರಾಟದ ಚಿತ್ರಣಗಳನ್ನು ಪ್ರಮುಖವಾದ ಎರಡು ಕಾಲಬಂಧಗಳನ್ನು ಇಟ್ಟುಕೊಂಡು ನೋಡಬಹುದು. ಸ್ವಾತಂತ್ರ್ಯ ಪೂರ್ವದ ಅವಧಿ ಎಂದರೆ ಸಾಮ್ರಾಜ್ಯಶಾಹಿ ದಬ್ಬಾಳಿಕೆಯ ಅಡಿಯಲ್ಲಿ ಭಾರತೀಯ ಸಂಸ್ಕೃತಿ, ಮನಸ್ಸು, ಸಮಾಜಗಳು ತಮ್ಮ ನೆಲೆ ಕಳೆದುಕೊಂಡು ಅಧೀರವಾಗಿದ್ದ ಕಾಲ. ರಾಜಕೀಯ ಪಾರತಂತ್ರ್ಯ ಕೇವಲ ರಾಜ್ಯ ವ್ಯವಸ್ಥೆ, ಅಭಿವ್ಯಕ್ತಿ ಸ್ವಾತಂತ್ರ್ಯಗಳಿಗೆ ಸೀಮಿತವಾಗಿರಲಿಲ್ಲ. ಅದು ನಮ್ಮ ಸಂವೇದನೆಯನ್ನೇ ನಿರ್ವೀರ್ಯಗೊಳಿಸುವಷ್ಟು ಪ್ರಬಲವಾಗಿತ್ತು. ಈ ಸ್ಥಿತಿಯಲ್ಲಿ ಆರಂಭವಾದ ಸ್ವಾತಂತ್ರ್ಯದ ಹೋರಾಟ ಹಲವಾರು ವಿರೋಧಾಭಾಸಗಳನ್ನು ತನ್ನ ಉಡಿಯಲ್ಲಿ ಕಟ್ಟಿಕೊಂಡಿತು.

"ಗಾಂಧೀಜಿ, ಅಹಿಂಸೆ, ಸತ್ಯಾಗ್ರಹಗಳಂಥ ಅಚ್ಚ ಭಾರತೀಯ ಸಾಧನಗಳ ಮೂಲಕ ಸ್ವಾತಂತ್ರ್ಯ ಹೋರಾಟದ ಭಾರತೀಯ ತಂತ್ರವನ್ನು ರೂಪಿಸಿದ್ದರೂ ಪರಕೀಯ ಆಳ್ವಿಕೆಯು ಇಡಿಯ ದೇಶದ ಮನಸ್ಸನ್ನು ಎಚ್ಚರಿಸಿದ್ದವು. ಸಾಮ್ರಾಜ್ಯವಾದೀ ಶಕ್ತಿ ತಾನು ಮಾಡಬಹುದಾದ ವಿನಾಶವನ್ನು ಆಗಲೇ ಮಾಡಿಬಿಟ್ಟಿತ್ತು. ಬ್ರಿಟಿಷರ ಆಳ್ವಿಕೆಯನ್ನು ರಾಜಕೀಯವಾಗಿ ವಿರೋಧಿಸಿದರೂ ಪಾಶ್ಚಾತ್ಯ ಸಂಸ್ಕೃತಿಯ ಶ್ರೇಷ್ಠತೆಯನ್ನು ನಾವಾಗಲೇ ಒಪ್ಪಿಕೊಂಡು ಆಗಿತ್ತು. ಪಾಶ್ಚಾತ್ಯ ಮೌಲ್ಯಗಳ ಬೆಳಕಿನಲ್ಲಿಯೇ ನಮ್ಮ ಸಂಸ್ಕೃತಿಯ ಮೌಲ್ಯಗಳನ್ನು ಬೆಲೆ ಕಟ್ಟುವ, ಪುನರುತ್ಥಾನಗೊಳಿಸುವ, ತಿರಸ್ಕರಿಸುವ ಕೆಲಸ ಭರದಿಂದ ನಡೆದಿತ್ತು." (ಸುರೇಶ ಪಾಟೀಲ,

೨೦೦೮, ಪುಟ-೬೪.) ಮುಖ್ಯವಾಗಿ ಬ್ರಿಟೀಷ್ ಪ್ರಭುತ್ವದ ವಿರುದ್ಧದ ಹೋರಾಟದ ಹಲವು ಸಾಧ್ಯತೆಗಳಾಗಿ ರಾಷ್ಟ್ರೀಯತೆ ಅಥವಾ ದೇಶಭಕ್ತಿಯು ಭಾರತೀಯರಲ್ಲಿ ಮೂಡಿತು ಎನ್ನಬಹುದು. ಕರ್ನಾಟಕಕ್ಕೆ ಸಂಬಂಧಿಸಿದಂತೆ ಇದು ಮೂರು ಆಯಾಮಗಳಲ್ಲಿ ಪ್ರಭಾವ ಬೀರಿತು. ೧. ವ್ಯಕ್ತಿಪರ ನೆಲೆ, ೨) ರಾಜ್ಯ ಅಥವಾ ಸಂಸ್ಥಾನಪರ ನೆಲೆ, ೩) ರಾಷ್ಟ್ರೀಯ ನೆಲೆಯಲ್ಲಿ ಈ ಮೂರೂ ನೆಲೆಗಳಲ್ಲಿ ಕನ್ನಡಿಗರಲ್ಲಿ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳನ್ನು ಕಾಣುತ್ತೇವೆ. ಬ್ರಿಟಿಷರ ವಿರುದ್ಧ ಆಂದೋಲನ ನಡೆಸುತ್ತಲೇ ಕರ್ನಾಟಕದ ಪುನರುಜ್ಜೀವನಕ್ಕಾಗಿ ಕೆಲಸ ಮಾಡುವುದು. ಈ ಕುರಿತು ಕೀರ್ತಿನಾಥ ಕುರ್ತಕೋಟಿ ಅವರು; "ರಾಷ್ಟ್ರೀಯ ಪ್ರಜ್ಞೆ ನಮ್ಮೆಲ್ಲರ ಸ್ವಪ್ರಜ್ಞೆಯ ಅಂಶವಾಗಿರುವುದು ಒಂದು ಮರೆಯಲಾಗದ ಸಂಗತಿಯಾಗಿದೆ. ಪ್ರಾಚೀನ ಕಾಲಕ್ಕೆ ಅದು ನಮ್ಮ ಅಜ್ಞಾತವಾದ ಸುಪ್ತ ಚೇತನಕ್ಕೆ ಸೇರಿದ್ದಾಗಿತ್ತು" (ಕೀತಿನಾಥ ಕುರ್ತಕೋಟಿ, ಪುಟ-೧೯೦.) ಎನ್ನುತ್ತಾರೆ.

ಒಟ್ಟಿನಲ್ಲಿ ಹೇಳುವುದಾದರೆ ಭಾರತದಲ್ಲಿ ಬೇರೂರಿದ ಬ್ರಿಟಿಷ್ ಆಡಳಿತ, ಪ್ರಥಮ ಜಾಗತಿಕ ಯುದ್ಧದ ಹಿನ್ನೆಲೆ, ಅದು ಉಂಟು ಮಾಡಿದ ಆರ್ಥಿಕ ಮುಗ್ಗಟ್ಟು ಔದ್ಯೋಗಿಕ ಕ್ರಾಂತಿಯಿಂದ ಇಂಬುಪಡೆದ ಸಾಮ್ರಾಜ್ಯಶಾಹಿ ಧೋರಣೆಯ ಬೆಳವಣಿಗೆ, ಆಕ್ರಮಣಶೀಲ ಪ್ರವೃತ್ತಿ ಇವೆಲ್ಲ ಸೇರಿ ಸ್ವಾತಂತ್ರ್ಯ ಹೋರಾಟಕ್ಕೆ ಚಾಲನೆಕೊಟ್ಟವು. ಇಂಥ ಕಾರಣಗಳ ಫಲವಾಗಿ ರೂಪು ಪಡೆದ ಸ್ವಾತಂತ್ರ್ಯ ಚಳುವಳಿ ಸಾಹಿತ್ಯವನ್ನು ಆಶ್ರಯಿಸಿಕೊಂಡಿದ್ದು ಐತಿಹಾಸಿಕ ಮಹತ್ವವನ್ನು ತಂದುಕೊಟ್ಟಿತು. ಈ ಹಿನ್ನೆಲೆಯಲ್ಲಿ ಕನ್ನಡ ಪ್ರಗತಿಶೀಲ ಕಾಲಘಟ್ಟದ ಲೇಖಕರನ್ನು ಸ್ವಾತಂತ್ರ್ಯ ಹೋರಾಟವು ಸೆಳೆಯಿತು. ಮತ್ತು ಅದು ಕಥೆ-ಕಾದಂಬರಿಗಳಲ್ಲಿ ಹೆಚ್ಚಾಗಿ ಅಭಿವ್ಯಕ್ತವಾಯಿತು.

ಸ್ವಾತಂತ್ರ್ಯದಾಹವನ್ನು ಹಾಗೂ ಹೋರಾಟವನ್ನು ಪ್ರಕಟಿಸುವ ಕಾದಂಬರಿಗಳ ಪಾತ್ರ ವಿಶೇಷವಾಗಿದೆ. ಕನ್ನಡ ಕಾದಂಬರಿಯ ಆರಂಭದ ದಿನಗಳಲ್ಲಿ ಬಂಗಾಳಿ ಮತ್ತು ಮರಾಠಿ ಕಾದಂಬರಿಗಳು, ಬಿ.ವೆಂಕಟಾಚಾರ್ಯ ಹಾಗೂ ಗಳಗನಾಥ ಅವರಿಂದ ಅನುವಾದಿತವಾದವು. ಗಳಗನಾಥರೂ ಸ್ವತಃ ಕೆಲವು ಕಾದಂಬರಿಗಳನ್ನು ಬರೆದಿದ್ದಾರೆ. ಈ ಅನುವಾದಿತ ಹಾಗೂ ಸ್ವತಂತ್ರ ಕಾದಂಬರಿಗಳು ಮುಕ್ಕಾಲು ಪಾಲು ಐತಿಹಾಸಿಕವಾದವು; ಅದರಲ್ಲೂ ಪರಧರ್ಮಿಯ ಹಾಗೂ ಇತರ ಪ್ರಭುತ್ವದ ವಿರುದ್ಧ ಹೋರಾಡಿದ ವೀರಜೀವನವನ್ನು ಕುರಿತದ್ದಾಗಿವೆ. ಆಗ ತಾನೇ ಮೊಳೆಯುತ್ತಿದ್ದ ದೇಶಾಭಿಮಾನ, ಸ್ವಾತಂತ್ರ್ಯದಾಹ ಇತ್ಯಾದಿಗಳಿಗೆ ನೀರೆರೆಯುವ ಕಾರ್ಯವನ್ನು ಸಾಕಷ್ಟು ಮಾಡಿವೆ.

"ಕನ್ನಡದಲ್ಲಿ ೧೯೪೦ರಿಂದ ಮೊದಲಾದ 'ಪ್ರಗತಿಶೀಲ ಚಳುವಳಿ' ಕೂಡಾ, ಸಾಮಾಜಿಕ ಅವ್ಯವಸ್ಥೆಯ ವಿರುದ್ಧ ಹಾಗೂ ದೇಶದ ಶೋಷಣೆಯ ವಿರುದ್ಧ ಹೋರಾಟವನ್ನು ಪ್ರಕಟಿಸಿತು. ಈ ಕಾಲದ ಕಾದಂಬರಿಕಾರರಲ್ಲಿ ಕೆಲವರು ಭಾರತೀಯ ಸ್ವಾತಂತ್ರ್ಯ ಚಳುವಳಿಯನ್ನೇ ಕುರಿತು ಕಾದಂಬರಿಯನ್ನು ರಚಿಸಿದ್ದಾರೆ." (ಶಿವರುದ್ರಪ್ಪ. ಜಿ.ಎಸ್., ೨೦೦೭, ಪುಟ-೧೩೮-೧೩೯.) ಇದಕ್ಕೆ ಹಿನ್ನೆಲೆಯ ಶಕ್ತಿಯಾಗಿ, ಪ್ರೇರಣೆಯಾಗಿ ಪ್ರಗತಿಶೀಲರಲ್ಲಿ ಸ್ವಾತಂತ್ರ್ಯ ಪ್ರೇಮವು ತಾಯ್ನಾಡಿನಿಂದ ಸಿಕ್ಕಿತು.

ಜಗತ್ತಿನ ಇತಿಹಾಸದಲ್ಲಿ ತತ್ವಜ್ಞಾನ ಮತ್ತು ತತ್ವಜ್ಞಾನಿಗಳ ಬಹುಮುಖ್ಯ ಕಾರಣದಿಂದಲೇ ಅನೇಕ ಕ್ರಾಂತಿಗಳು ಜರುಗಿವೆ. ಫ್ರಾನ್ಸ್, ಅಮೇರಿಕಾ, ರಷ್ಯಾ ಕ್ರಾಂತಿಗಳ ಸಂದರ್ಭಗಳು ಈ ಹಿನ್ನೆಲೆಯವು. ಪ್ರಗತಿಶೀಲ ಚಳವಳಿ ಕರ್ನಾಟಕದ ಸಂದರ್ಭಕ್ಕೆ ಸೀಮಿತವಾದುದಲ್ಲ. ಅದು ಯುರೋಪಿನಲ್ಲಿ ಆರಂಭವಾಗಿ ರಷ್ಯಾದಲ್ಲಿ ಹುಲುಸಾಗಿ ಬೆಳೆದು ಭಾರತಕ್ಕೆ ಕಾಲಿಟ್ಟಿತು. ಪ್ರಗತಿಶೀಲ ಚಳುವಳಿ ವಿಶ್ವ ಸಾಹಿತ್ಯದ ಸಂದರ್ಭದಲ್ಲೇ ವೈಚಾರಿಕ ಪ್ರಜ್ಞೆಯ ರಾಜಕೀಯ ಮತ್ತು ಆರ್ಥಿಕ ಸಮಾನತೆಯನ್ನು ಪ್ರತಿಪಾದಿಸಿತು.

'೧೯೩೫ ಪ್ರಗತಿಶೀಲ ಸಾಹಿತಿಗಳ ಕನಸಿನ ಕಾಲ'(ರಾಘವೇಂದ್ರರಾವ್.ಎಚ್.ಎಸ್. ೧೯೯೦, ಪುಟ-೪೭.) ಆಗಿನ್ನೂ ಭಾರತ ಬ್ರಿಟೀಷ್ ವಸಾಹತುವಾಗಿತ್ತು. ಪುರೋಹಿತಶಾಹಿ ಹಾಗೂ ಸಾಮ್ರಾಜ್ಯಶಾಹಿಗಳ ಹಿಡಿತದಲ್ಲಿ ಭಾರತ ನಲುಗಿತ್ತು. ಮಧ್ಯಮ, ಕೆಳವರ್ಗದ ಹಾಗೂ ತೀರಾ ಕೆಳ ಸಮುದಾಯಗಳು ದೀನಸ್ಥಿತಿಗೆ ತಳ್ಳಲ್ಪಟ್ಟಿದ್ದವು. ಇಂಥ ಉಸಿರುಗಟ್ಟಿಸುವ ವಾತಾವರಣದಿಂದ ದೇಶವನ್ನು ಬಿಡುಗಡೆಗೊಳಿಸುವ, ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆದುಕೊಳ್ಳುವ ತವಕ ಮಗುವಿನಿಂದ ಮುದುಕನವರೆಗೂ ಆವರಿಸಿತ್ತು. ಅದರಲ್ಲೂ ತರುಣರಲ್ಲಿ ಸ್ವಾತಂತ್ರ್ಯದ ಕಹಳೆ ಧುಮ್ಮಿಕ್ಕುವ ಸಂದರ್ಭ. ಗಾಂಧೀಜಿಯವರ ಭಾಷಣಗಳು, ಘೋಷಣೆಗಳು, ಚಳುವಳಿಗಳು ಭೋರ್ಗರೆಯುತ್ತಿದ್ದವು. ಇವುಗಳಿಗೆ ಸಹಜವಾಗಿ ಭಾರತವು ಮೈ ಕೊಡವಿ ಬ್ರಿಟೀಷರ ವಿರುದ್ಧ ಎದ್ದು ನಿಂತಿತ್ತು. ಇಂತಹ ವಾತಾವರಣದಿಂದ ದೇಶವನ್ನು ಬಿಡುಗಡೆಗೊಳಿಸುವ ಜರೂರತ್ತು ಪ್ರಗತಿಶೀಲ ಲೇಖರದಾಗಿತ್ತು.

ಭಾರತವು ಸ್ವಾತಂತ್ರ್ಯಕ್ಕಾಗಿ ತುದಿಗಾಲಲ್ಲಿ ಇರುವ ಹೊತ್ತಿಗೆ ಅಮೇರಿಕಾ ೧೭೭೬ರಲ್ಲಿ ಫ್ರಾನ್ಸ್ ೧೭೮೯ರಲ್ಲಿ ಮತ್ತು ರಷ್ಯಾ ೧೯೧೭ರಲ್ಲಿ ಚರ್ಚುಗಳ ಮತ್ತು ರಾಜಪ್ರಭುತ್ವಗಳ ಹಿಡಿತದಿಂದ ಹೊರಬಂದಿದ್ದವು. ಇವುಗಳ ಸ್ವಾತಂತ್ರ್ಯ ಹೋರಾಟದ ಇತಿಹಾಸವನ್ನು ಓದಿದ ಭಾರತೀಯ ವಿದ್ಯಾವಂತ ವಲಯವು ಅನಕ್ಷರಸ್ಥ ಭಾರತೀಯರನ್ನು ಒಂದುಗೂಡಿಸಲು

ಶ್ರಮವಹಿಸುತ್ತಿತ್ತು. ರಷ್ಯಾ, ಫ್ರಾನ್ಸ್, ಅಮೇರಿಕಾ ಕ್ರಾಂತಿಗಳ ದಟ್ಟ ಪ್ರಭಾವವು ಭಾರತದ ಮೇಲೂ ಬೀರಿತು. ಇವುಗಳಿಗೆ ಭಾರತೀಯ ಪ್ರಗತಿಶೀಲ ಲೇಖಕರು ಕೈ ಜೋಡಿಸಿದರು.

ಒಂದು ಕಡೆ ಗಾಂಧೀಜಿಯವರ ಅಹಿಂಸಾ ವಾದದ ಧೋರಣೆ ಪ್ರಗತಿಶೀಲರಿಗೆ ತೊಡಕಾದರೂ ಸಹ ತಮ್ಮದೇ ಆದ ವಲಯವನ್ನು ಪ್ರಗತಿಶೀಲರು ಸ್ವಾತಂತ್ರ್ಯ ಹೋರಾಟಕ್ಕೆ ರೂಪಿಸಿಕೊಳ್ಳಬೇಕಾಯಿತು. ಅದಕ್ಕಾಗಿ ಪ್ರಗತಿಶೀಲರು ಭಾರತದ ಪುರೋಹಿತಶಾಹಿ ಮತ್ತು ಫ್ಯೂಡಲಿಸಂ ವಿರುದ್ಧ ಹೋರಾಡಬೇಕಾಯಿತು. ರಾಜಕೀಯವಾಗಿ ಭಾರತದ ನೆಲ ಮಾರ್ಕ್ಸ್ ಸಿದ್ಧಾಂತವನ್ನು ಒಪ್ಪದೇ ಗಾಂಧೀ ಮಾದರಿಯನ್ನು ಅಪ್ಪಿದ್ದರಿಂದ ಪ್ರಗತಿಶೀಲ ಚಳುವಳಿ ಹೆಚ್ಚು ಪರಿಣಾಮಕಾರಿ ಎನಿಸಲಿಲ್ಲ.

ರಷ್ಯಾದ ಮ್ಯಾಕ್ಸಿಂಗಾರ್ಕಿಯ 'ಮದರ್' ಕಾದಂಬರಿ ಕಾರ್ಮಿಕ ವರ್ಗದ ಜನರ ನೋವು, ನಲಿವು, ಬದುಕಿನ ಭವಣೆಗಳನ್ನು ಜಗತ್ತಿಗೆ ಸಾರಿತು. ಆ ಕಾಲಕ್ಕಾಗಲೇ ಯುರೋಪಿನ ರಾಜಕೀಯ ಚಳುವಳಿಯಲ್ಲಿ ಮಾರ್ಕ್ಸ್ ಏಂಗಲ್ಸ್ ವಿಚಾರಗಳು ಪ್ರಮುಖ ಪಾತ್ರ ವಹಿಸಿದ್ದವು. ಮಾರ್ಕ್ಸ್‌ನ ಮುಂದಿನ ತಲೆಮಾರು ಸಹ ಕಾರ್ಮಿಕರ ಹಿತವನ್ನು ಕಾಯುವ ಕೆಲಸಕ್ಕೆ ಕೈಜೋಡಿಸಿತು. ಈ ನಿಟ್ಟಿನಲ್ಲಿ ಲೆನಿನ್ ರಷ್ಯಾದ ರಾಜಕೀಯ ಚರಿತ್ರೆಯನ್ನೇ ಅಲ್ಲದೆ ವಿಶ್ವದ ರಾಜಕೀಯ ಚರಿತ್ರೆಯನ್ನು ಮೀರುವ ಕ್ರಿಯೆಯಲ್ಲಿ ತೊಡಗಿದ್ದರು. ಈ ವಿಚಾರಧಾರೆಗಳು ಭಾರತೀಯ ಪ್ರಗತಿಶೀಲರ ಮೇಲೆ ದಟ್ಟ ಪ್ರಭಾವ ಬೀರಿದವು.

ಆರ್ಥಿಕ ಶೋಷಣೆ ಕಾರ್ಮಿಕ ಸಂಘಗಳ ಉದಯಕ್ಕೆ ಕಾರಣವಾಗಿ ವರ್ಗ ಸಂಘರ್ಷಕ್ಕೆ ಎಡೆಯಾಯಿತು. ಇದೇ ಕಾಲಕ್ಕೆ ಮಾರ್ಕ್ಸ್ ವೈಜ್ಞಾನಿಕ ಸಮಾಜವಾದವನ್ನು ಮಂಡಿಸಿ ಕಾರ್ಮಿಕ ಕ್ರಾಂತಿಗೆ ಬೆಂಗಾವಲಾಗಿ ನಿಂತನು. ಕಾರ್ಮಿಕ ರಾಜ್ಯದ ಕನಸನ್ನು ಕಟ್ಟಿದನು. ಮಾರ್ಕ್ಸ್ ಏಂಗೆಲ್ಸ್ ಬರೆದ 'ಕಮ್ಯುನಿಸ್ಟ್ ಮ್ಯಾನಿಫೆಸ್ಟೊ' ಕೃತಿ ದುಡಿಯುವ ವರ್ಗದ ಜನತೆಯ ಕೈಪಿಡಿಯಾಗಿ ಪರಿಣಮಿಸಿತು. ಹೀಗೆ ಕಮ್ಯುನಿಸ್ಟ್‌ರು ತಮ್ಮ ಬರವಣಿಗೆಯ ಮೂಲಕ ದುಡಿಯುವ ವರ್ಗವನ್ನು ಹೋರಾಟಕ್ಕೆ ಸಿದ್ಧಗೊಳಿಸತೊಡಗಿತು. ಇದರ ಪರಿಣಾಮವಾಗಿ ೧೯೧೭ರ ಅಕ್ಟೋಬರ್ ಕ್ರಾಂತಿಗೆ ಜಯ ಲಭಿಸಿತು. ಇದನ್ನು ಮನಗಂಡ ಭಾರತೀಯ ಲೇಖಕರು ಅದರಲ್ಲಿಯೂ ಪ್ರಗತಿಶೀಲ ಮನೋಧೋರಣೆಯುಳ್ಳ ಲೇಖಕರು ತಮ್ಮ ಲೇಖನಗಳನ್ನು ಹೋರಾಟದ ಕ್ರಾಂತಿಗಳಿಗೆ ಮೀಸಲಿಟ್ಟರು.

"ಪ್ರಗತಿಶೀಲ ಚಳವಳಿಯು ತನಗೆ ರಕ್ತದಾನ ಮಾಡಬಲ್ಲ ಸಾಮಾಜಿಕ, ರಾಜಕೀಯ ಚಳುವಳಿಗಳ ಸಾಂಗತ್ಯವನ್ನು ಪಡೆದಿರಲಿಲ್ಲ. ಹೀಗಾಗಲು ಸಮುದಾಯದ ಒಟ್ಟು ಚೈತನ್ಯದ ಒಂದು ಭಾಗ ಸ್ವಾತಂತ್ರ್ಯ ಚಳುವಳಿಯಲ್ಲಿ ತೊಡಗಿಸಿಕೊಂಡಿದ್ದು ಕೂಡ ಕಾರಣವಾಗಿರಬಹುದು.

ಪ್ರಗತಿಶೀಲ ಚಳವಳಿಯ ಕಾಳಜಿಯ ಕೇಂದ್ರ ಶ್ರಮಿಕವರ್ಗ ಹಾಗೂ ಕೃಷಿಕ ವರ್ಗಗಳೇ ಆದರೂ ಅದರಲ್ಲಿ ತೊಡಗಿಸಿಕೊಂಡ ಲೇಖಕರು ಮಧ್ಯಮ ವರ್ಗದಿಂದ ಬಂದವರೇ ಅಗಿದ್ದರು. ಕಟ್ಟೀಮನಿ ಅವರನ್ನು ಬಿಟ್ಟರೆ ಅದರ ಮುಖ್ಯ ಲೇಖಕರು ಮೇಲುಜಾತಿಗೆ ಸೇರಿದವರಾಗಿದ್ದರಿಂದ ತಾವು ಚಿತ್ರಿಸುವ ಜೀವನ ಕ್ರಮದ ಸರಿಯಾದ ಗ್ರಹಿಕೆ ಅವರಿಗಿರಲಿಲ್ಲ. ಒಟ್ಟು ಚಳುವಳಿಯ ಬೌದ್ಧಿಕತೆಗಿಂತ ಹೆಚ್ಚಾಗಿ, ಭಾವುಕತೆಯಿಂದ ನಿಯಂತ್ರಿತವಾಗಿತ್ತು." (ರಾಘವೇಂದ್ರರಾವ್.ಎಚ್.ಎಸ್., ೧೯೯೦, ಪುಟ-೩೦) ಸಾಮ್ಯವಾದ, ಸಮಾಜವಾದ, ಗಾಂಧೀವಾದಗಳಂಥ ವಿಭಿನ್ನ ನಿಲುವುಗಳ ಸಹಚರ್ಯವು ಸ್ವಾತಂತ್ರ್ಯ ಹೋರಾಟಕ್ಕೆ ಪ್ರಗತಿಶೀಲರಿಗೆ ಪ್ರೇರಣೆಯಾದವು.

ಪ್ರಗತಿಶೀಲ ಲೇಖಕರು ಕಥೆ ಕಾದಂಬರಿಗಳಿಗೆ ಸ್ವಾತಂತ್ರ್ಯ ಹೋರಾಟವನ್ನೇ ವಸ್ತುವಾಗಿಸಿಕೊಂಡು ಬರೆದರು. ವಸಾಹತುವಿನಿಂದ ವಿಮೋಚನೆ ಹೊಂದುವುದು ಮಾರ್ಕ್ಸ್‌ವಾದ ಭಾಗವೇ ಆಗಿದ್ದರಿಂದ ಪ್ರಗತಿಶೀಲರು ಸ್ವಾತಂತ್ರ್ಯ ಚಳುವಳಿಯಲ್ಲಿ ತೊಡಗಿಸಿಕೊಂಡರು. ಆದರೆ ರಾಜಕೀಯ ಕ್ಷೇತ್ರ ಪ್ರಗತಿಶೀಲರ ಪ್ರಭಾವದಿಂದಾಚೆಗೆ ಉಳಿಯಿತು. ಬೂರ್ಜ್ವಾ ಸಮಾಜವಾದಿಗಳು ಸ್ವಾತಂತ್ರ್ಯ ಚಳುವಳಿಯ ನಾಯಕತ್ವವನ್ನು ವಹಿಸಿದರು. ರೈತರು, ಕಾರ್ಮಿಕರು, ಸಣ್ಣಪುಟ್ಟ ವ್ಯಾಪಾರಸ್ಥರು, ವಿದ್ಯಾರ್ಥಿಗಳು, ಸಾಹಿತಿಗಳು ಮುಂತಾದ ವರ್ಗ ಸ್ವಾತಂತ್ರ್ಯ ಚಳುವಳಿಯ ಸೈನಿಕರಾಗಿ ಮಾತ್ರ ಉಳಿದರು. ಇದರ ಫಲವಾಗಿಯೇ ೧೯೪೭ರಲ್ಲಿ ಭಾರತ ಪ್ರಜಾಸತ್ತಾತ್ಮಕ ರಾಷ್ಟ್ರವಾಗಿ ಹೊರಹೊಮ್ಮಿತು ಎನ್ನಬಹುದು.

ಪ್ರಗತಿಶೀಲರಿಗೂ ಸ್ವಾತಂತ್ರ್ಯ ಹೋರಾಟಕ್ಕೂ ಸಾಹಿತ್ಯಿಕವಾಗಿ ಹತ್ತಿರದ ಸಂಬಂಧವನ್ನು ಕಾಣುತ್ತೇವೆ. ಪ್ರಗತಿಶೀಲರು ಸಾಹಿತ್ಯ ಚಳುವಳಿಗೆ ಧುಮಿಕಿದಾಗ ಅವರ ಗುರಿಗಳಲ್ಲಿ ಸ್ವಾತಂತ್ರ್ಯದ ತುಡಿತವು ಒಂದಾಗಿತ್ತು. ಆ ಸ್ವಾತಂತ್ರ್ಯ ಸ್ವರೂಪವು ಕೇವಲ ಬ್ರಿಟೀಷರಿಂದ ಮುಕ್ತ ಭಾರತ ಮಾಡುವ ಸ್ವಾತಂತ್ರ್ಯವಾಗಿರಲಿಲ್ಲ. ಅದು ಮಣ್ಣಿನ ಮಕ್ಕಳ ದುಃಖ ದುಮ್ಮಾನಗಳಿಗೆ ಸ್ಪಂದಿಸುವಂತಹ ಮತ್ತು ಸಾವುಕಾರರು ಬಡವರನ್ನು ಶೋಷಿಸುವದರಿಂದ ಬಿಡುಗಡೆಗೊಳಿಸವ ಸ್ವಾತಂತ್ರ್ಯವಾಗಿತ್ತು. ವಾಸ್ತವ ಜಗತ್ತಿನೊಂದಿಗೆ ಸಂಬಂಧ ಹೊಂದಿ ಜವಾಬ್ದಾರಿಯುತವಾಗಿ ತಮ್ಮ ಬರವಣಿಗೆಯನ್ನು ಹೊಂದಬೇಕೆಂಬ ಆಶಯಕ್ಕೆ ಅಂದಿನ ಭಾರತದ ವಾತಾವರಣವು ಸಿದ್ಧಗೊಂಡಂತಿತ್ತು. ಸಾಹಿತ್ಯ ಸುತ್ತಮುತ್ತಲಿನ ಪ್ರಪಂಚದಲ್ಲಿ ಜರುಗುವ ಘಟನೆಗಳನ್ನು ಚಿತ್ರಿಸಬೇಕು ಎನ್ನುವವರಿಗೆ ಸ್ವಾತಂತ್ರ್ಯ ಚಳುವಳಿಗಳು, ಹರತಾಳಗಳು, ಹುತಾತ್ಮರ ಚಿತ್ರಣಗಳು ಪ್ರಗತಿಶೀಲರನ್ನು ಸೆಳೆದಷ್ಟು ಬೇರೆ ಸಾಹಿತ್ಯಿಕ ಪಂಥಗಳಲ್ಲಿ ಕಾಣುವುದಿಲ್ಲ.

"ಯಾವಾಗ ಮಹಾತ್ಮಾಗಾಂಧಿಯವರ ಉಜ್ವಲ ವ್ಯಕ್ತಿತ್ವ ಈ ರಾಷ್ಟ್ರದ ಜನತೆಯ ಹೃದಯದಲ್ಲಿ ಸ್ವಾತಂತ್ರ್ಯದ ಕಿಚ್ಚನ್ನು ಹತ್ತಿಸಿತೋ ಆಗ, ಆಯಾ ರಾಜ್ಯದ ಜನತೆಯ ರಾಜಭಕ್ತಿ, ಮೊಟ್ಟಮೊದಲಿಗೆ ನಿಜವಾದ ಅರ್ಥದಲ್ಲಿ ರಾಷ್ಟ್ರಪ್ರೇಮವಾಗಿ ಪರಿವರ್ತಿತವಾಯಿತು." (ಶಿವರುದ್ರಪ್ಪ, ಜಿ.ಎಸ್೨೦೦೭, ಪುಟ-೧೩೪.) ಮಹಾತ್ಮಾ ಗಾಂಧೀಜಿಯವರ ನೇತೃತ್ವದಲ್ಲಿ ದೇಶದ ತುಂಬಾ ಸ್ವಾತಂತ್ರ್ಯದ ಹಂಬಲವು ಮಣ್ಣಿನ ಕಣಕಣದಲ್ಲೂ ಸಿಡಿಲಾಗಿ, ಹುಲ್ಲುಕಡ್ಡಿಯೂ ಬ್ರಹ್ಮಾಸ್ತ್ರವಾಗಿ ನಿಂತಿತು. ಅದುವರೆಗೂ ಪರಕೀಯ ಪ್ರಭುತ್ವದಲ್ಲಿ ಸಿಕ್ಕಿ ನಲುಗಿದ ಭಾರತಕ್ಕೆ ರೋಮಾಂಚನಕಾರಿಯಾದ ಸ್ವಾತಂತ್ರ್ಯ ಹೋರಾಟದ ಲೇಖನಗಳು ಸ್ಫೂರ್ತಿಯ ಸೆಲೆಯಾದವು.

ಅಲ್ಲದೆ, ಆಯಾ ರಾಜ್ಯದ ಆಳರಸರು ಬ್ರಿಟಿಷ್ ಪ್ರಭುತ್ವದ ನಿಯಂತ್ರಣ ಮಾಧ್ಯಮಗಳಾಗಿ ಕಂಡ ಕಾರಣದಿಂದ ಮತ್ತು ಜನತೆಯನ್ನು ಪಾರತಂತ್ರ್ಯದಲ್ಲಿರಿಸಲು ಪ್ರಯತ್ನಿಸಿದ ಕಾರಣದಿಂದ, ಅದುವರೆಗೂ ಅಲ್ಲಲ್ಲಿನ ಜನತೆಗೆ ಆಯಾ ರಾಜ್ಯದ ರಾಜರುಗಳ ಬಗೆಗಿದ್ದ ರಾಜಭಕ್ತಿ ಛಿದ್ರವಾಗಿ ಅಲ್ಲಿ ರಾಷ್ಟ್ರಭಕ್ತಿ, ರಾಷ್ಟ್ರಪ್ರೇಮ ನೆಲೆಯೂರಿತು. ಈ ಅವಕಾಶವನ್ನು ಭಾರತೀಯ ಎಲ್ಲ ಭಾಷೆಯ ಸಾಹಿತ್ಯವು ಅದರಲ್ಲೂ ಪ್ರಗತಿಶೀಲ ಸಾಹಿತಿಗಳು, ತಮ್ಮ ಸಾಹಿತ್ಯದ ಮೂಲಕ ಅದರಲ್ಲೂ ಕಥೆ, ಕಾದಂಬರಿಗಳ ಮೂಲಕ ಜನತೆಯನ್ನು ಸಂಘಟಿಸಿ ಸ್ವಾತಂತ್ರ್ಯ ಸಂಗ್ರಾಮಕ್ಕೆ ಮತ್ತಷ್ಟು ಪ್ರೋತ್ಸಾಹಿಸಿದವು. ಅಂತಹ ಕೆಲವು ಕೃತಿಗಳನ್ನು ಇಲ್ಲಿ ಉಲ್ಲೇಖಿಸಬಹುದು.

ಪ್ರಗತಿಶೀಲರು ಸ್ವಾತಂತ್ರ್ಯ ಚಳುವಳಿಗೆ ಶಕ್ತಿ ತುಂಬಿ ದೇಶವನ್ನು ಸಾಮ್ರಾಜ್ಯಶಾಹಿಗಳಿಂದ, ಅಧಿಕಾರಶಾಹಿಗಳಿಂದ ಬಿಡುಗಡೆಗೆ ಮಾಡಬೇಕೆಂಬ ಮನೋಧೋರಣೆಯನ್ನು ಬಿತ್ತುವ ಕಥೆ, ಕಾದಂಬರಿಗಳನ್ನು ರಚಿಸತೊಡಗಿದರು. ಇದರ ಫಲವಾಗಿಯೇ ಬಸವರಾಜ ಕಟ್ಟೀಮನಿಯವರಿಂದ ಸ್ವಾತಂತ್ರ್ಯದೆಡೆಗೆ (೧೯೪೬), ಮಾಡಿಮಡಿದವರು (೧೯೫೦), ನರಗುಂದ ಬಂಡಾಯ (೧೯೫೬), ಸಂಗೋಳ್ಳಿರಾಯಣ್ಣ ನಾಯಕ (೧೯೬೮). ನಿರಂಜನ ಅವರಿಂದ ಕಲ್ಯಾಣಸ್ವಾಮಿ (೧೯೫೬), ಸ್ವಾಮಿ ಅಪರಾಂಪರ (೧೯೬೭), ವಿಮೋಚನೆ (೧೯೫೩), ಚಿರಸ್ಮರಣೆ (೧೯೫೫), ಮೃತ್ಯುಂಜಯ (೧೯೭೬), ತರಾಸು ಅವರಿಂದ ರಕ್ತತರ್ಪಣ (೧೯೪೬), ಜೀವನಯಾತ್ರೆ, ಅನಕೃ ಅವರ ಅಮರ ಅಗಸ್ಟ್, ಹೇಗಾದರೂ ಬದುಕೋಣ, ವಿ.ಎಂ. ಇನಾಂದಾರರ 'ಮೂರಾಬಟ್ಟೆ' (೧೯೪೬) 'ವಿಜಯ ಯಾತ್ರೆ' (೧೯೪೮), ತ.ರಾ.ಸು ಅವರ 'ರಕ್ತ ತರ್ಪಣ' (೧೯೪೬), ಶಿವರಾಮ ಕಾರಂತರ 'ಔದಾರ್ಯದ ಉರುಳಲ್ಲಿ' (೧೯೪೭), ವ್ಯಾಸರಾಯ ಬಲ್ಲಾಳರ 'ಹೇಮಂತಗಾನ' ಮತ್ತು ಚದುರಂಗರ 'ಸರ್ವಮಂಗಳ' ಮೊದಲಾದ ಕಾದಂಬರಿಗಳು ಸ್ವಾತಂತ್ರ್ಯ ಹೋರಾಟದ ನೆಲೆಯಲ್ಲಿ ಪ್ರಮುಖವೆನಿಸಿವೆ.

ಇವುಗಳ ಮೂಲಕ ಓದುಗರಲ್ಲಿ ಸ್ವಾತಂತ್ರ್ಯ ಪ್ರೇಮ, ದೇಶಭಕ್ತಿ, ತ್ಯಾಗ, ಬಲಿದಾನಗಳನ್ನು, ಧಾರ್ಮಿಕ ಮೌಢ್ಯಗಳ ವಿರುದ್ಧದ ಯುದ್ಧ ಸಾರಿ ವೈಚಾರಿಕ ನಿಲುವುಗಳನ್ನು ಪ್ರಕಟಿಸಿದರು. ಪ್ರಸ್ತುತ ಈ ಮೇಲೆ ಹೆಸರಿಸಲಾದ ಕಾದಂಬರಿಗಳನ್ನು ಮಹಾಪ್ರಬಂಧದ ಅಧ್ಯಯನಕ್ಕೆ ಒಳಪಡಿಸಿ ಅವುಗಳಲ್ಲಿನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳನ್ನು ವಿಶ್ಲೇಷಿಸುವದೇ ಆಗಿದೆ.

# ಅಧ್ಯಾಯ ೪

## ಪ್ರಗತಿಶೀಲ ಕಥಾ ಸಾಹಿತ್ಯದಲ್ಲಿ ಸ್ವಾತಂತ್ರ್ಯ ಹೋರಾಟದ ನೆಲೆಗಳು

ಕಥೆಗಳು ನಮ್ಮ ನೆಲದ ಪರಂಪರೆ. ಕಥೆ ಹೇಳುವುದು-ಕೇಳುವುದು ಬದುಕಿನ ಒಂದು ಭಾಗವಾಗಿದೆ. ಆರಂಭದಲ್ಲಿ ಮೌಖಿಕವಾಗಿ ತನ್ನ ವಿಸ್ತಾರವನ್ನು ಪಡೆದುಕೊಂಡ ಕಥೆಗಳು ಔಚಿತ್ಯಪೂರ್ಣ ವಸ್ತುವನ್ನು ಒಳಗೊಂಡು ಸಾಹಿತ್ಯ ಪ್ರವೇಶ ಪಡೆದುಕೊಂಡವು.

ವಡ್ಡಾರಾಧನೆ ಪಂಚತಂತ್ರ ಕಥೆಯಂತಹ ಕಥಾಕೋಶಗಳು ಕನ್ನಡ ಸಾಹಿತ್ಯದಲ್ಲಿ ಕಥಾ ವಿನ್ಯಾಸಗಳಿಗೆ ದಿಕ್ಸೂಚಿಯಾದವು. ನವೋದಯ ಸಂದರ್ಭದ ಕಥೆಗಳು ಸಾಮಾಜಿಕ ಸಾಂಸ್ಕೃತಿಕ ವಿನ್ಯಾಸದ ಸಂಘರ್ಷದೊಳಗೆ ಮೈಬಿಚ್ಚಿ ಕೊಂಡರೆ ಇಂಗ್ಲಿಷನ ಶಾರ್ಟ್‌ಸ್ಟೋರಿ ಪ್ರಭಾವದಿಂದ ಇನ್ನಷ್ಟು ಗಾಢಗೊಂಡ ಕನ್ನಡ ಕಥಾ ಪ್ರಪಂಚ ತನ್ನೊಳಗೆ ಅನೇಕ ಆಶಯಗಳನ್ನು ಆಲಂಗಿಸಿಕೊಂಡು ಮೈಮನಸ್ಸುಗಳಲ್ಲಿ ಹೊಸತನದ ಗಾಳಿಯನ್ನು ತಂದುಕೊಂಡಿತು.

ಆಧುನಿಕ ಸಂದರ್ಭದಲ್ಲಿ ಕಡಿಮೆ ಅವಧಿಯಲ್ಲಿ ಹೆಚ್ಚು ಪಡೆಯಬೇಕೆಂಬ ಹಂಬಲ ನೂರು ಪುಟಗಳಲ್ಲಿರುವ ಕಾದಂಬರಿಗಳನ್ನು ಓದುವ ವ್ಯವಧಾನವಿಲ್ಲ. ಇಂತಹ ಸ್ಥಿತಿಯಲ್ಲಿ ಸಣ್ಣ ಕಥೆಗಳು ಹೆಚ್ಚು ಪ್ರಾಮುಖ್ಯತೆ ಪಡೆದುಕೊಂಡವು. ನವೋದಯ ಸಂದರ್ಭದಲ್ಲಿ ಮಾಸ್ತಿ ಮೊದಲಾದ ಸಾಹಿತಿಗಳು ಸಾಮಾಜಿಕ ಸಾಂಸ್ಕೃತಿಕ ಸಂಘರ್ಷಗಳನ್ನು ತೆರೆದಿಡುವ ಪ್ರಾಮಾಣಿಕ ಪ್ರಯತ್ನ ನಡೆಸಿದರು. ಕನ್ನಡದಲ್ಲಿ ಸಣ್ಣ ಕಥಾ ಪ್ರಕಾರವನ್ನು ತಮ್ಮ ಅಭಿವ್ಯಕ್ತಿ ಮಾಧ್ಯಮವಾಗಿ ಮಾಡಿಕೊಂಡ ಮಾಸ್ತಿಯವರು ತಲೆಮಾರುಗಳ ಕೇಳುವಿಕೆ ಮಾನಸಿಕ ತಳಮಳಗಳನ್ನು ತಿಳಿಸುವುದರೊಂದಿಗೆ ಸಾಮಾಜಿಕ ಕಳಕಳಿಯತ್ತ ಹೆಚ್ಚು ಗಮನವಿರಿಸಿಕೊಂಡು ಬರೆದರು. ಈ ಸಂದರ್ಭದಲ್ಲಿ ಬಹುತೇಕ ಕಥೆಗಳು ಬದುಕಿನ ಇತಿಹಾಸಗಳೇ ಕಥೆಗಳ ಹಂದರವಾಗಿದ್ದವು.

ಪ್ರಗತಿಶೀಲ ಕಥಾ ಸಾಹಿತ್ಯಕ್ಕೆ ಕಾಲಿಡುವಷ್ಟೊತ್ತಿಗೆ ಸಾಹಿತ್ಯಿಕವಾಗಿ ಸಾಮಾಜಿಕವಾಗಿ ಅನೇಕ ಬದಲಾವಣೆಗಳು ಹತ್ತಿರವಾಗಿದ್ದವು. ಇಷ್ಟೊತ್ತಿಗಾಗಲೇ ಲೆನಿನ್, ಮಾರ್ಕ್ಸ್, ಬಸವಣ್ಣನವರ ಸಂದೇಶಗಳು ಗಾಂಧೀಜಿಯವರ ಪರಿಕಲ್ಪನೆ ಹೆಚ್ಚು ಹೆಚ್ಚು ಪ್ರಚಲಿತವಾಗುತ್ತಿದ್ದವು. ಸ್ತ್ರೀಯರ ಶೋಷಣೆ, ಕಾರ್ಮಿಕರ ಸ್ಥಿತಿಗತಿ ಶ್ರೀಮಂತರ ದಬ್ಬಾಳಿಕೆ ಮೊದಲಾದ ಸಂಗತಿಗಳು ಪ್ರಗತಿಶೀಲರಿಗೆ ಹೊಸತನದ ತುಡಿತಗಳನ್ನು ತಂದೊಡ್ಡಿದವು. ಸಣ್ಣ ಕಥೆಗಳು, ಸಾಮಾಜಿಕ ಸಂಘರ್ಷಗಳಿಗೆ ಬೇಸತ್ತ ಪ್ರಗತಿಶೀಲ ಲೇಖಕರು ಹೊಸ ಚರಿತ್ರೆಯತ್ತ ಮುಖ ಮಾಡಿದರು. ಈ

ಮಧ್ಯೆ ದೇಶ ಪರಕೀಯರ ತೆಕ್ಕೆಗೆ ಸಿಕ್ಕು ನರಳುತ್ತ ಚಡಪಡಿಸುತ್ತಿರುವುದು ಇವರಿಗೆ ಸಹಿಸಿಕೊಳ್ಳಲಾಗಲಿಲ್ಲ. ದೇಶದ ಸಂಪನ್ಮೂಲಗಳನ್ನೆಲ್ಲ ಕೊಳ್ಳೆ ಹೊಡೆಯುತ್ತಿರುವ ದುಷ್ಟ ವ್ಯವಸ್ಥೆಯ ಬಗ್ಗೆ ಒಳಗೊಳಗೆ ಕುದಿಯಲಾರಂಭಿಸಿದರು. ಪ್ರಗತಿಶೀಲರಿಗೆ ಸಹಜವಾಗಿ ದೇಶದ ಸ್ವಾತಂತ್ರ್ಯ ಮತ್ತು ಬ್ರಿಟೀಷರ ವಿರುದ್ಧ ನಡೆಸುವ ಹೋರಾಟಗಳು ಮುಖ್ಯವೆನಿಸಿದವು. ಹದಗೊಂಡ ನೆಲದಲ್ಲಿ ಬೀಜ ಬಿತ್ತುವಂತೆ ಗಾಂಧೀಜಿಯವರ ಸ್ವದೇಶಿ ಚಳುವಳಿ, ಸತ್ಯಾಗ್ರಹ ಮೊದಲಾದ ಸಂಗತಿಗಳು ಜನರಲ್ಲಿ ದೊಡ್ಡ ಪ್ರಮಾಣದ ಪ್ರಭಾವ ಬೀರಿದವು. ನವೋದಯ ಕಥೆಗಳಲ್ಲಿ ಕೇವಲ ಸಂಸ್ಕೃತಿ ಸಾಮಾಜಿಕ ವ್ಯವಸ್ಥೆ ಮುಖ್ಯವೆನಿಸಿದರೆ ಪ್ರಗತಿಶೀಲರು ಆ ಸೀಮಿತ ಪರೀಧಿಯಿಂದ ಹೊರಬಂದು ಸ್ವಾತಂತ್ರ್ಯ ಪಡೆಯುವ ಹಂಬಲಕ್ಕೊಳಗಾಗಿ ಚಳುವಳಿ, ಪಿಕೆಟಿಂಗ, ದಂಗೆ ಮೊದಲಾದ ಮಾರ್ಗಗಳಲ್ಲಿ ಹೋರಾಟದ ಸ್ವರೂಪ ವಿಸ್ತರಿಸಿಕೊಂಡರು. ಸಾಂಸ್ಕೃತಿಕ, ಪ್ರಾದೇಶಿಕ, ದೇಶವ್ಯಾಪಿ ನಡೆಯುವ ಸ್ವಾತಂತ್ರ್ಯ ಹೋರಾಟಗಳಿಗೆ ಪ್ರಗತಿಶೀಲ ಲೇಖಕರು ಅನೇಕ ಕಥೆಗಳ ಮೂಲಕ ಆ ಸಂದರ್ಭವನ್ನು ಅರ್ಥಪೂರ್ಣವಾಗಿ ಅಭಿವ್ಯಕ್ತಿಸಿರುವುದುಂಟು. ೮-೧೦ ಪುಟಗಳಲ್ಲಿ ಸ್ವಾತಂತ್ರ್ಯ ಹೋರಾಟದ ಸ್ವರೂಪ, ಪ್ರಭಾವ, ಅದರ ಗಾಢತೆ, ಪರಿಣಾಮ ಹಾಗೂ ಅದರ ಪ್ರತಿಫಲಗಳನ್ನು ನಮ್ಮೆದುರು ನಿಲ್ಲಿಸುವ ಪ್ರಗತಿಶೀಲರ ಕಥೆಗಳು ಕನ್ನಡ ಸಾಹಿತ್ಯಕ್ಕೆ ಹೊಸಗನ್ನಡಕ್ಕೆ ಶಕ್ತಿವರ್ಧಕವಾದವು. ೧೯೪೦ ರಿಂದ ೧೯೫೦ರ ದಶಕದ ಅವಧಿಯಲ್ಲಿ ಪ್ರಗತಿಶೀಲಯುಗ ಕನ್ನಡದ ವಿಶಿಷ್ಟಪೂರ್ಣ ಸಾಹಿತ್ಯ ಪ್ರವಾಹವಾಯಿತು. ಈ ಯುಗವನ್ನು ಹೆಚ್ಚಾಗಿ ಕಥೆ, ಕಾದಂಬರಿಗಳ ಯುಗವೆಂದು ಕಾವ್ಯಕ್ಕಿಂತಲೂ ಹೆಚ್ಚು ಸಶಕ್ತವಾಗಿ ಸ್ವಾತಂತ್ರ್ಯ ಹೋರಾಟವನ್ನು ಕಟ್ಟಿಕೊಟ್ಟ ಸಂದರ್ಭವಿದು. ಲೇಖಕರು. ದೇಶದ ಸ್ವಾತಂತ್ರ್ಯ ಹೋರಾಟವನ್ನು ತಮ್ಮ ಕಥೆಗಳಲ್ಲಿ ಅಭಿವ್ಯಕ್ತಗೊಳಿಸಿದರು.

ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿದ ಸ್ವಾತಂತ್ರ್ಯ ಹೋರಾಟದ ಕಥೆಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗುವುದು. ನಿರಂಜನ, ಬಸವರಾಜ ಕಟ್ಟೀಮನಿ, ಚದುರಂಗ, ಅನಕೃ ಮೊದಲಾದ ಪ್ರಗತಿಶೀಲ ಪ್ರಮುಖ ಲೇಖಕರ ಕಥೆಗಳನ್ನು ಕೇಂದ್ರೀಕರಿಸಿ ಅಧ್ಯಯನ ಕೈಗೊಳ್ಳಲಾಗಿದೆ. ನಮ್ಮ ದೇಶದ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯಾನಂತರ ಪ್ರೇರಣೆಗೆ ಒಳಗಾಗಿ ರಚಿಸಿದ ಕಥೆಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಿ ಅಧ್ಯಯನ ಕೈಗೊಳ್ಳಲಾಗಿದೆ. ದೇಶಾಭಿಮಾನ, ರಾಷ್ಟ್ರಭಕ್ತಿಗಳು ಕೇವಲ ನೆನಪಾಗಿ ಉಳಿಯಬಾರದು. ಅವುಗಳು ನಮ್ಮ ಜೀವನಾಡಿಗಳಾಗಿ, ನರ ನರಗಳಲ್ಲಿ ಬೆಸೆದುಕೊಂಡಿರಬೇಕು ಎಂಬಂತಹ ಆಶಯಗಳನ್ನು ಇಟ್ಟುಕೊಂಡು ರಚಿಸಿದ ಪ್ರಗತಿಶೀಲ ಲೇಖಕರುಗಳ ಕಥೆಗಳನ್ನು ಪ್ರಮುಖವಾಗಿ ಆಯ್ದುಕೊಳ್ಳಲಾಗಿದೆ.

## ೪.೧. ಬಸವರಾಜ ಕಟ್ಟೀಮನಿ ಅವರ ಕಥೆಗಳಲ್ಲಿನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು

ಪ್ರಗತಿಶೀಲರ ಕಥೆಗಾರರಲ್ಲಿ ಪ್ರಮುಖವಾಗಿ ಕೇಳಿ ಬರುವ ಹೆಸರು ಕಟ್ಟೀಮನಿಯವರದು. ಪ್ರಗತಿಶೀಲರ ಕಥೆಗಾರರಲ್ಲಿ ಪ್ರಮುಖವಾದ ಹೆಸರು ಕಟ್ಟೀಮನಿಯವರದು. ಇವರು ಒಟ್ಟು ಹತ್ತು ಕಥಾ ಸಂಕಲನಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ. ಕಾರವಾನ್ (೧೯೪೫), ಗುಲಾಬಿ ಹೂ ಮತ್ತು ಇತರ ಕತೆಗಳು (೧೯೪೬), ಅಗಸ್ಟ ಒಂಬತ್ತು ಮತ್ತು ಇತರ ಕತೆಗಳು (೧೯೪೭), ಸೆರೆಯಿಂದ ಹೊರಗೆ (೧೯೪೯), ಜೋಳದ ಬೆಳೆಯ ನಡುವೆ (೧೯೫೩), ಸುಂಟರಗಾಳಿ (೧೯೫೭), ಜೀವನ ಕಲೆ, ಹುಲಿಯಣ್ಣನ ಮಗಳು, ಸೈನಿಕನ ಹೆಂಡತಿ ಮತ್ತು ಗರಡಿಯಾಳು ಎಂಬ ಕಥಾ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಸುಮಾರು ಅರುವತ್ತೈದು ಕತೆಗಳು ಕಟ್ಟೀಮನಿಯವರ ಸಮೃದ್ಧ ಲೇಖನಿಯಿಂದ ಮೂಡಿಬಂದಿವೆ. ಇವುಗಳಲ್ಲಿ ಪ್ರಸ್ತುತ ಅಧ್ಯಯನದ ದೃಷ್ಟಿಯಿಂದ ಸ್ವಾತಂತ್ರ್ಯದ ಮನೋಧೋರಣೆಯನ್ನು ವ್ಯಕ್ತಪಡಿಸುವ, ಸ್ವಾತಂತ್ರ್ಯ ಮೌಲ್ಯಗಳನ್ನು ಎತ್ತಿಹಿಡಿಯುವ ಕಥೆಗಳನ್ನು ಆಯ್ದುಕೊಂಡು ಅವುಗಳನ್ನು ಮಾತ್ರ ಇಲ್ಲಿ ವಿಶ್ಲೇಷಿಸಲಾಗಿದೆ.

"ಕಟ್ಟೀಮನಿಯವರ ಎಲ್ಲ ಕಥೆಗಳ ಮೂಲದ್ರವ್ಯ ಸಾಂದ್ರವಾದ ವೈವಿಧ್ಯಮುಖಿಯಾದ ಅದ್ಭುತ ಜೀವನಾನುಭವ; ತೀಕ್ಷ್ಣವಾದ ಅಂತಃಕರಣ ಪೂರ್ವವಾದ ಒಳನೋಟ; ಕೊಳೆತ ಸಂಪ್ರದಾಯಕ್ಕೆ ಸಲಾಮುಹಾಕದ, ಹಳತನ್ನು ತ್ಯಜಿಸಿ ಹೊಸದನ್ನು ಸೃಜಿಸುವ, ಅವ್ಯವಸ್ಥೆಯನ್ನು ಅಳಿಸುವ ಆವೇಶಪೂರ್ಣವಾದ ಆದರೆ ಪ್ರಾಮಾಣಿಕವಾದ ಸುಧಾರಣೆಯ ಧೀರಮನೋಭಾವ; ತೀವ್ರವಾದ ಸಮಕಾಲೀನ ಪ್ರಜ್ಞೆ" (ದೇಜಗೌ ಮತ್ತು ಸಿ.ಪಿ.ಕೆ. ೧೯೬೯, ಪು-೧೧೨.) ಹರಳುಗಟ್ಟಿದೆ. ಇವರ ದೇಶಪ್ರೇಮದ, ಸ್ವಾತಂತ್ರ್ಯ ತುಡಿದ ಕಥೆಗಳು ಸ್ವತಃ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ಅನುಭವ, ಅದರ ಸಿಹಿಕಹಿಗಳು ಮೈವೆತ್ತಿ ನಿಂತಿವೆ. ಸ್ವಾತಂತ್ರ್ಯ ಚಳುವಳಿಯಲ್ಲಿ ಪ್ರಾಣಾರ್ಪಣೆ ಮಾಡಿದ ಪುಣ್ಯಾತ್ಮರ ಸ್ಮರಣೆ ಇಂದಿಗೂ ಹಸಿಹಸಿಯಾದ ಅನುಭವವನ್ನು ಓದುಗರಿಗೆ ಮುಟ್ಟಿಸುತ್ತವೆ.

ಕನ್ನಡ ಸಣ್ಣ ಕಥೆಯ ತಂತ್ರವೈವಿಧ್ಯಕ್ಕೂ ಕಟ್ಟೀಮನಿಯವರ ಕಾಣಿಕೆ ಕಡಿಮೆ ಪ್ರಮಾಣದ್ದಲ್ಲ. ಅವರ ಹಲವು ಕಥೆಗಳು, ಅವರ ಪ್ರಯೋಗ ಶೀಲತೆಗೆ ತಾಂತ್ರಿಕ ದೃಷ್ಟಿಗೆ ನಿದರ್ಶನವಾಗಿವೆ. ಅಷ್ಟೇ ಅಲ್ಲ ತಂತ್ರಕ್ಕೂ ವಸ್ತುವಿಗೂ ಅಭಿನ್ನವಾದ ರಕ್ತಮಾಂಸ ಸಂಬಂಧವನ್ನೂ ಕಲ್ಪಿಸುವುದರಲ್ಲೂ ಅವರ ಬಹುಮಟ್ಟಿಗೆ ಯಶಸ್ವಿಯಾಗಿದ್ದಾರೆ. Imagination is an ability to name a cat' ಎಂಬ ಉಕ್ತಿಯಂತೆ ಕಥೆಗೆ ಹೆಸರಿಡುವುದರಲ್ಲೂ ಅವರ ಅಸಾಧಾರಣ ಚಾತುರ್ಯವನ್ನು ಕಲೆಗಾರಿಕೆಯನ್ನು ಮೆರೆದಿದ್ದಾರೆ.

(ದೇಜಗೌ, ಸಿಪಿಕೆ. ೧೯೬೯, ಕಟ್ಟೀಮನಿ ಬದುಕು ಬರಹ, ಪು.೧೪೨). ಮೊದಲನೇ ಸಂಕಲನದ ಮೊದಲ ಹೆಸರೇ 'ಕಾರವಾನ್'.

**ಕಾರವಾನ್: ೧೯೪೫**

ಇದು ಕಟ್ಟೀಮನಿಯವರ ಮೊದಲ ಕಥಾ ಸಂಕಲನವಾಗಿದ್ದು, ೧೯೪೫ರಲ್ಲಿ ಪ್ರಕಟವಾಯಿತು. ಈ ಸಂಕಲನದಲ್ಲಿ 'ಕಾರವಾನ್', 'ಪರಾಜಿತೆ!', 'ಗೆಳೆಯರು', 'ಬರದ ದೇವಿ', 'ಹೊಸವರ್ಷದ ಹಳೆಯರಾತ್ರಿ', 'ಮೀಸಲು ಹೂ', 'ದೀಪಾವಳಿಯ ಕತ್ತಲೆ!' ಎಂಬ ಏಳು ಕಥೆಗಳಿವೆ. ಇದರಲ್ಲಿ 'ಕಾರವಾನ' ಕಥೆಯು ಪ್ರಸ್ತುತ ಅಧ್ಯಯನದ ದೃಷ್ಟಿಯಿಂದ ಪ್ರಮುಖವಾದುದು. ಅವರ ಮೊದಲ ಕಥೆಯಲ್ಲಿಯೇ ಸ್ವಾತಂತ್ರ್ಯದ ಛಾಯೆಯು ಪ್ರಖರವಾಗಿ ಮೂಡಿಬಂದಿರುವುದನ್ನು ಗಮನಿಸಿದರೆ ಅವರಿಗಿದ್ದ ದೇಶಪ್ರೇಮ, ದೇಶಾಭಿಮಾನ ಗುರುತಿಸಬಹುದು.

'ಕಾರವಾನ್' ಕಥೆಯು ಭಾರತ ಸ್ವಾತಂತ್ರ್ಯ ಪೂರ್ವದಲ್ಲಿ ಅಂದಿನ ಹಳ್ಳಿ ಹಳ್ಳಿಗಳಲ್ಲಿನ ಸಾಮಾನ್ಯರ ಬದುಕನ್ನು ಅವನ ದೀನತೆಯನ್ನು ಚಿತ್ರಿಸುತ್ತದೆ. ಇಲ್ಲಿ ಒಬ್ಬ ಸಾಮಾನ್ಯ ಮನುಷ್ಯನ ಕಿರು ಪರಿಚಯದೊಂದಿಗೆ ಲೇಖಕರು ಕಥೆಯನ್ನು ಪ್ರವೇಶಿಸುತ್ತಾರೆ. ರೈಲಿನ ಪ್ರಯಾಣದಲ್ಲಿ ಕಂಡ ಒಂದು ದೃಶ್ಯವನ್ನು "ದಾರಿದ್ರ್ಯದಿಂದ ಕುಸಿದು ಕುಗ್ಗಿರುವ ಬಡ ಭಾರತವೇ ಆ ಸಂಸಾರದ ರೂಪ ತಳೆದು ಬಂದ ಹಾಗೆ ಕಾಣಿಸಿತು ನನಗೆ"(ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೨.) ಎಂದು ಹೇಳುವಲ್ಲಿ ಲೇಖಕರು ಅಂದಿನ ಭಾರತದ ಹಳ್ಳಿಯೊಂದರ ಜನ ಗುಳೆ ಹೊರಟ ಚಿತ್ರಣವನ್ನು ದೈನಂದಿನ ಬದುಕಿನ ಹೋರಾಟವನ್ನು ಸೂಚಿಸುತ್ತದೆ.

ಬದುಕಿನಲ್ಲಿ ಬಡತನವನ್ನು ಬೆನ್ನಿಗೆ ಕಟ್ಟಿಕೊಂಡು ಬೆಳೆದುಬಂದ ಬಸವರಾಜ ಕಟ್ಟೀಮನಿಯವರು ಸಂದರ್ಭ ಬಂದಾಗಲೆಲ್ಲ ಅದನ್ನು ತಾವು ಬರೆಯುವ ಕಥೆ-ಕಾದಂಬರಿಗಳಲ್ಲಿ ಅಭಿವ್ಯಕ್ತಿಗೊಳಿಸಿರುವುದರಿಂದ ಉತ್ತರ ಕರ್ನಾಟಕದ ಬಹುತೇಕ ಕಡೆ ಹೊಟ್ಟೆಪಾಡಿಗಾಗಿ ಗುಳೆ ಹೋಗುವದು ಸಹಜ: ಅದರಲ್ಲಿಯೂ ಗೇಣು ಹೊಲವಿಲ್ಲದ ಬಡವರು, ಕಾರ್ಮಿಕರು, ಕೆಳವರ್ಗದವರು ತಮ್ಮ ಮಕ್ಕಳು ಮರಿಗಳೊಂದಿಗೆ ಗುಳೆ ಹೋಗುವುದು ಇಲ್ಲಿನ ವಾಡಿಕೆ.ಶ್ರೀಮಂತರ ತೋಟ, ಹೊಲಗದ್ದೆಗಳಲ್ಲಿ ತಮ್ಮ ಬೆವರು ಹರಿಸಿ, ದುಡಿದು ತಮ್ಮ ತುತ್ತಿನ ಚೀಲ ತುಂಬಿಸಿಕೊಳ್ಳುವುದು ಸಾಮಾನ್ಯ ದೃಶ್ಯ ಇಂಥಹದೊಂದು ಸಾಮಾನ್ಯ ದೃಶ್ಯವನ್ನು ಲೇಖಕರು ಕಾಣುವ ದೃಷ್ಟಿ ಕರುಳು ಕಿತ್ತು ಬರುವಂತೆ ಅಭಿವ್ಯಕ್ತಿಪಡೆದಿದೆ.

ಕಥೆಯಲ್ಲಿನ ಭಾಷೆ ಮತ್ತು ಕಥೆ ಹೇಳುವ ಶೈಲಿಯು ಲೇಖಕರ ಬದುಕಿನತ್ತಲೇ ಹೆಣೆದುಕೊಂಡಂತಿದೆ. ಅಂದರೆ ಲೇಖಕರೆ ಎಲ್ಲ ಪಾತ್ರಗಳ ಮೂಲಕ ಮಾತನಾಡುತ್ತಾರೆ. ಐದು ಮಕ್ಕಳ ಹೆತ್ತ ತಾಯಿ ಒಂದು ಕಡೆ ಮತ್ತು ಕ್ಷಯರೋಗಕ್ಕೆ ಒಳಗಾದ ಕೃಶದೇಹಿ ಆಕೆಯ ಗಂಡ ಇನ್ನೊಂದು ಕಡೆ. ಇವರ ಧ್ವನಿಗಳನ್ನು ಲೇಖಕರೇ ವಿವರಿಸುತ್ತಾರೆ. ಕಥೆಯಲ್ಲಿ ಬರುವ ಸ್ತ್ರೀಯ ಗೋಳು: "ಬೆಳಗಾಗೋದೆ ತಡ! ಸುರುವಾಯಿತೇ ನಿನ್ನ ಕಾಟ! ತಿನ್ನೋಕೆ ರೊಟ್ಟೀನೇ ಇಲ್ಲದಿದ್ದರೆ ಮೊಲೆಯಲ್ಲಿ ಹಾಲಾದರೂ ಎಲ್ಲಿ ಬಂದೀತು? ನಿಮ್ಮನ್ನ ಮಣ್ಣಲ್ಲಿ ಹಾಕಲಿ! ನಿಮ್ಮ ರುಂಡಾ ಚಿವುಟಲಿ! ಸತ್ತಾದರೂ ಸಾಯಬಾರದೇ! ಪೀಡೆ ಹೋದಿ!"(ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೫.) ಎಂದು ಗೋಳಿಡುವ ದೃಶ್ಯವು ಮಾನವೀಯತೆಯನ್ನು ಕಲಕುತ್ತದೆ. ಅವಳು ಬೇರೆ ಯಾರೂ ಅಲ್ಲ ಎಂದು ಲೇಖಕರಿಗೆ ಅದೃಶ್ಯವಾಣಿಯೊಂದು "ಯಾರು ಅಂತ ತಿಳಿದಿದೀಯಾ ಈ ಹೆಂಗಸು? ತಾಯಿ ಭರತ ಮಾತೆ! ಇವಳೇ ಭರತಮಾತೆ!..."(ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೬.) ಎನ್ನುವಲ್ಲಿ ಭಾರತದ ಹಳ್ಳಿಗಳು ಅಂದು ಎದುರಿಸಿದ ದಾರುಣತೆಗೂ ಅನ್ವಯಿಸುತ್ತದೆ. ಇಲ್ಲಿ ಕೇವಲ ಒಂದು 'ಗುಳೇಕಾರ ಸಂಸಾರ' ಮಾತ್ರವಲ್ಲ ಅದು ಇಡಿ ಭಾರತವನ್ನೇ ಪ್ರತಿನಿಧಿಸುತ್ತದೆ ಎಂಬ ತುಡಿತ ಲೇಖಕರ ಮಾತುಗಳಲ್ಲಡಗಿದೆ.

ಇಲ್ಲಿ ಬರುವ ೩-೪ ವರ್ಷದ ಮಗುವನ್ನು ತಾಯಿ ಬೇಕಾಬಿಟ್ಟಿ ಹೊಡೆಯುವುದು, ಅದಕ್ಕೆ ಬೈಯ್ಯುವುದು, ಪದೆ ಪದೆ ನಡೆದಿದ್ದರು ಅದಕ್ಕೆ ಮಗುವಿನಿಂದ ಯಾವುದೇ ಪ್ರತಿಕ್ರಿಯೆ ಇಲ್ಲ. ಇದು ಭಾರತದ ಬಡ ಸಮುದಾಯದ ದೈನೀಯತೆಯನ್ನು ಸಾಂಕೇತಿಕವಾಗಿ ಚಿತ್ರಿಸಿದಂತಿದೆ. ತಾಯಿ 'ಭಾರತ' ಮಾತೆಯಾಗಿ ಮಗು 'ಬಡಸಮುದಾಯ'ವಾಗಿ ಇಡೀ ಕಥೆಯಲ್ಲಿ ಒಳಗೊಳಗೆ ನುಸುಳಿಕೊಂಡಂತೆ ಭಾಸವಾಗುತ್ತದೆ. "ಅಂತಿಂಥ ದೆವ್ವ ಅಲ್ಲ ಅದು ಅಮ್ಮಾ! ಅದು ಹಸಿವೆಯ ದೆವ್ವ! ಅನ್ನ ದೆವ್ವ!..."(ಬಸವರಾಜ ಕಟ್ಟೀಮನಿ, ೨೦೧೪, ಪುಟ-೨೦.) ಎಂದು ಕೈಲಾಗದ ಗಂಡ ತನ್ನ ಸಂಸಾರದ ಗೋಳನ್ನು ಲೇಖಕರಿಗೆ ತೋಡಿಕೊಳ್ಳುವುದು; ಒಂದು ರೀತಿಯಲ್ಲಿ ಆ ಸಂದರ್ಭದ ದೇಶದ ದಾರಿದ್ರ್ಯವನ್ನು ಸುಮ್ಮನೆ ಕುಳಿತು ನೋಡುವ ಮತ್ತೊಂದು ಜನಸಮುದಾಯವನ್ನು ಇಲ್ಲಿ ಲೇಖಕರು 'ಕ್ಷಯರೋಗಿ ಗಂಡ'ನ ಮೂಲಕ ಸಾಂಕೇತಿಸುತ್ತಾರೆ.

ಕಥೆಯ ಕೊನೆಯಲ್ಲಿ ದಾರುಣತೆಯೊಂದು ಮೂಡಿಬಂದಿದೆ: ತಾಯಿ ತಾನು ಹೆತ್ತ ಕಂದನನ್ನೇ ಹಠಾತ್ತಾಗಿ ಹಾಸುಗೆಯಲ್ಲಿದ್ದ ಮಗುವನ್ನೆತ್ತಿ ಕಲ್ಲೆಸೆಯುವಂತೆ ಹೊರಗೆ ಎಸೆಯುತ್ತಾಳೆ. "ಕಲ್ಲಿನ ಏಟು ಬಿದ್ದು ಕಣ್ಣು ಗೊಂಬೆಗಳೆರಡೂ ಕಿತ್ತು ಹೊರಕ್ಕೆ ಬಂದಿವೆ... ಮೂಗು, ಬಾಯಿ, ಕಿವಿ, ಕೆನ್ನೆ, ಹಣೆ ಎಲ್ಲ ಒಡೆದು ಹೋಗಿದೆ... ರಕ್ತ ಧಾರೆಧಾರೆಯಾಗಿ ಚಿಮ್ಮುತ್ತಿದೆ... ಆಗತಾನೆ ಕಟ್ಟಿದ ಪಟ್ಟಿಗಳೆಲ್ಲ ಬಿಚ್ಚಿ ಹೋಗಿವೆ... ಆ ಗಾಯಗಳಿಂದಲೂ ಮತ್ತೆ ಬಿಸಿ ನೆತ್ತರು ಚಿಮ್ಮುತ್ತಿದೆ... !"(ಬಸವರಾಜ ಕಟ್ಟೀಮನಿ, ೨೦೧೪, ಪುಟ-೨೩.) ಎನ್ನುವಾಗ; ಎಲ್ಲವೂ

ಕಣ್ಣೆದುರಿಗೆ ನಡೆದರೂ ತಡೆಯುವ ಕೈಗಳಿದ್ದರೂ ಏನನ್ನೂ ಮಾಡದ ಸ್ಥಿತಿಯನ್ನು ಕಥೆ ವ್ಯಕ್ತಪಡಿಸುತ್ತದೆ.

"...ಪೋಲೀಸರು ಬಂದು ಬಂಧಿಸಿದಾಗ ಎಂಥ ಕಳೆ ಬಂದಿತ್ತು ಆ ಸ್ತ್ರೀಯ ಮುಖದಲ್ಲಿ! ಆ ಕಣ್ಣುಗಳಲ್ಲಿ ಜೀವದ ಛಾಯೆ ಎಷ್ಟು ಮಾತ್ರಕ್ಕೂ ಕಾಣಿಸುತ್ತಿರಲಿಲ್ಲ. ಮೂಕವಾಗಿ ನೀರವವಾಗಿ ನಿಂತಿದ್ದಳಾಕೆ ಶವದ ಹಾಗೆ-ಹೌದು-ಶವದ ಹಾಗೆ!..." (ಬಸವರಾಜ ಕಟ್ಟೀಮನಿ, ೨೦೧೪, ಪುಟ-೨೩.) ಎಂದು ಹೇಳುವಾಗ ಲೇಖಕರಲ್ಲಿ ಇಡೀ ಭಾರತದ ಬಂಧನ, ಧಾರುಣತೆಯನ್ನು ಆಕೆ ಪ್ರತಿನಿಧಿಸಿದಂತೆ ಚಿತ್ರಿಸುತ್ತಾರೆ. ಅವರೇ ಕೊನೆ ಕೊನೆಗೆ ಕಾಲುದಾರಿಯತ್ತ ಗುಳೇಕಾರ ಸಂಸಾರವನ್ನು ನೋಡುತ್ತಾ "ಭಾರತ ದಾರಿದ್ರ್ಯ-ದುರ್ಗತಿಗಳೇ ಮೈವೆತ್ತ ಬರುವಂತಿದ್ದ ಆ ಸಂಸಾರದ ಸಾಲು ದೃಷ್ಟಿಯಿಂದ ಮರೆಯಾಗುತ್ತಿದ್ದ ಹಾಗೆ..."(ಬಸವರಾಜ ಕಟ್ಟೀಮನಿ, ೨೦೧೪, ಪುಟ-೨೪.) ಇಂದು ಇಲ್ಲಿ ನಾಳೆ ಅಲ್ಲಿ ಕಾರವಾನ್ ಸಾಗಿದೆ ಎಂದು ಕಥೆಗೆ ತೆರೆ ಎಳೆಯುತ್ತಾರೆ.

೧೯೪೩ರ ಸಮಯದಲ್ಲಿ ರಚಿತಗೊಂಡ 'ಕಾರವಾನ್' ಕಥೆ ಅಂದಿನ ಒಟ್ಟು ಸ್ವಾತಂತ್ರ್ಯ ಪೂರ್ವ ಭಾರತದ ದೈನಂದಿನ ಕೆಳವರ್ಗದ ಸಮುದಾಯವನ್ನು ಕ್ಷಯರೋಗದ ಗಂಡಸು (ಗಂಡ)-ಕೋಪಿಷ್ಟ ಕರುಣೆ ಇಲ್ಲದ ಹೆಂಗಸು (ತಾಯಿ)-ಮತ್ತೊಂದು ಎದುರಾಡದ ಮೂಖ ಮುಗ್ದ ಮಕ್ಕಳೊಂದಿಗೆ ಸಂವಾದಿಸುತ್ತಾ ಲೇಖಕರು ತಮ್ಮ ಅನುಭವದ ನೆಲೆಯಲ್ಲಿ ಚಿತ್ರಿಸಿದಂತೆ ತೋರುತ್ತದೆ. ಒಂದು 'ಗುಳೇಕಾರ ಕಟುಂಬ' ಇಡೀ ಭಾರತವನ್ನು ಸಾಂಕೇತಿಸುತ್ತದೆ. ರೈಲಿನ ಪ್ರಯಾಣದಲ್ಲಿದ್ದ ಲೇಖಕರ ದೃಷ್ಟಿ ಆ 'ಗುಳೇಕಾರ ಸಂಸಾರ'ದತ್ತ ಬಿದ್ದು ಅಲ್ಲಿಂದ ಕಥೆ ಕಟ್ಟಿಕೊಳ್ಳುತ್ತಾ ಹೋಗುತ್ತದೆ. ಅವರ ಸಂಸಾರದ ಬಗ್ಗೆ ಎಳ್ಳಷ್ಟು ಗೊತ್ತಿಲ್ಲದ ಲೇಖಕರಿಗೆ ಅದನ್ನು ತಿಳಿದುಕೊಳ್ಳುವ ಕೂತುಹಲವಿಲ್ಲದಿದ್ದರೂ ಅದು ಇವರನ್ನು ಎಳೆದುಕೊಂಡುಬಿಡುತ್ತದೆ. ಅವರ ಬಡತನ, ಗಂಜಿಗಾಗಿ ಪರದಾಟ, ಎಲ್ಲರ ಭಾರವನ್ನು ಹೊತ್ತವಳು ತಾನು ಎಂದು ಗೋಳಿಡುವ ಗಂಡನನ್ನೇ ಸಾವಿನ ದವಡೆಗೆ ದೂಡುವ ದೃಷ್ಟಿಯಾಗಿ ಕಾಣುವ ಹೆಂಗಸು 'ಭಾರತ ಮಾತೆ' ಎಂದು ಅಶರೀರವಾಣಿಯಿಂದ ಲೇಖಕರು ತಿಳಿದುಕೊಳ್ಳುತ್ತಾರೆ. ಕೊನೆಗೆ ಈ ಹೆಂಗಸು ತಾನು ಹೆತ್ತ ಕೂಸನ್ನೇ ತನ್ನ ಕೈಯಾರೆ ಕಲ್ಲಿನಂತೆ ಎಸೆದು ಕೊಂದು ಜೈಲು ಸೇರುತ್ತಾಳೆ. 'ಅವಳ ಮುಖದಲ್ಲಿ ಎಂಥ ಕಳೆ ಬಂದಿತ್ತು' ಎನ್ನುವಲ್ಲಿ ಆ 'ಕಳೆ' ಯಾವುದು? ಎಂಬ ದ್ವಂದ್ವವೂ ಇಲ್ಲಿ ಚಿತ್ರಿತವಾಗಿದೆ. ಅವಳಿಗೆ ತನ್ನ ದರಿದ್ರ ಬದುಕಿನಿಂದ, ಕೆಟ್ಟ ಸಂಸಾರದಿಂದ ಮುಕ್ತಿ ದೊರೆಯಿತೆನ್ನುವ ಕಳೆಯೋ? ಅಥವಾ ಜೀವನದ ಜಂಜಾಟಗಳನ್ನು ಎದುರಿಸಲಾಗದೆ ಶವದಂತೆ ಬದುಕುವುದನ್ನು ಜೈಲಿನಲ್ಲಿ ಕಳೆಯಬಹುದೆಂದೋ? ಹೀಗೆ ಯಾವುದೋ ಸಾಧಿಸಿದ ಅರ್ಥವಿಲ್ಲದ ಕಳೆ ಬಂದಿತ್ತು 'ಶವದ ಹಾಗೆ-ಹೌದು-ಶವದ ಹಾಗೆ!'. ಕೊಲ್ಲುವಾಗ ಲೇಖಕರು ಅಲ್ಲೇ ಇದ್ದರೂ ಏನನ್ನೂ ಮಾಡದ ಪರಿಸ್ಥಿತಿ ಅವರದಾಗಿತ್ತು? ಅವರ ಸ್ಥಿತಿಯೂ 'ಶವದ

ಹಾಗೆಯೇ' ನಿಂತು ನೋಡುತ್ತಿತ್ತು. ಕಾರವಾನ್ ಗೀತೆಯೊಂದು ಮಾತ್ರ ಧುಮುಧುಮಿಸುತ್ತಿತ್ತು. ಕಾರವಾನ್ ಔಚಿತ್ಯಪೂರ್ಣವಾದ ಶೀರ್ಷಿಕೆ. ಕಾರವಾನ್ ಮರಭೂಮಿಯಲ್ಲಿ ಅಂದರೆ ಹಸಿರು-ಗಿಡಮರಗಳಿಲ್ಲದ ಧರೆಯ ಮೇಲೆ ಬೆನ್ನ ಮೂಟೆ ಹೊತ್ತು ಭಾರವಾದ ಹೆಜ್ಜೆಗಳನ್ನಿಟ್ಟು ಉಸುಕಿನಲ್ಲಿ ಸಾಗುವ ಮಾನವ ಪ್ರಾಣಿ.ತಿನ್ನಲೂ ಆಹಾರ, ಕುಡಿಯಲು ನೀರಿಲ್ಲದಿದ್ದರೂ 'ಕಾರವಾನ್'ಆಶಯಗಳಿಲ್ಲದ, ಆಸರೆಗಳಿಲ್ಲದ ಹೆಜ್ಜೆಗಳನ್ನಿಟ್ಟು ಸಾಗುತ್ತಲೇ ಇರುವ ಗುಂಪು. ಪ್ರಸ್ತುತ ಕಥೆಯಲ್ಲಿ ಭಾರತದ ದಾರಿದ್ರ್ಯವನ್ನೇ ಮುಖ್ಯವಾಗಿಟ್ಟಕೊಂಡಿರುವ ಲೇಖಕರು ನೇರವಾಗಿ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳನ್ನು ನೀಡುವುದಿಲ್ಲ: ಅಂದರೆ ಬಡತನದಿಂದ ಮುಕ್ತವಾಗಲು ಬಯಸಿದ ತಾಯಿಯಂತೆ, ಭಾರತ ಏಕಕಾಲಕ್ಕೆ ಅನ್ಯರ ಹಿಡಿತದಿಂದ ಹಾಗೂ ದಾರಿದ್ರ್ಯದಿಂದ ಮುಕ್ತವಾಗಬೇಕೆಂಬ ಹಂಬಲ-ತುಡಿತಗಳು ಕಥೆಯ ಅಂತರಾಳದಲ್ಲಿ ಅವಿತುಕೊಂಡಂತೆ. ಲೇಖಕರು ಕಥೆಯನ್ನು ಹೆಣೆದಿರುವುದು ಕಂಡು ಬರುತ್ತದೆ.

**ಅಗಸ್ಟ ಒಂಭತ್ತು ಮತ್ತು ಇತರ ಕಥೆಗಳು: ೧೯೪೭**

೧೯೪೭ರಲ್ಲಿ ಪ್ರಕಟವಾದ 'ಅಗಸ್ಟ್ ಒಂಭತ್ತು ಮತ್ತು ಇತರ ಕಥೆಗಳು' ಕಥಾ ಸಂಕಲನವು 'ರಕ್ತ-ಧ್ವಜ', 'ಹುತಾತ್ಮ', 'ಜನವರಿ ಇಪ್ಪತ್ತಾರು', 'ಸತ್ಯವಾನ ಮರಳಲಿಲ್ಲ', 'ಬಲಿ', 'ಅಜ್ಞಾತವಾಸಿ' ಮತ್ತು 'ಅಗಸ್ಟ್ ಒಂಭತ್ತು' ಎಂಬ ಏಳು ಕಥೆಗಳನ್ನು ಒಳಗೊಂಡಿದೆ. ೧೯೪೨ರ ಅಗಸ್ಟ್ ಚಳುವಳಿಯ ರೋಮಾಂಚನಕಾರಿ ಹಿನ್ನೆಲೆಯನ್ನು ಪಡೆದಂತಹ ಈ ಎಲ್ಲ ಕಥೆಗಳಲ್ಲಿ ದೇಶಪ್ರೇಮವು ಉಕ್ಕಿ ಹರಿದಿದೆ. "ಒಂದೊಂದೂ ಸ್ವತಂತ್ರ ಪರಿಣಾಮವನ್ನುಳ್ಳ ವಿಶಿಷ್ಟ ಚಿತ್ರಗಳು. ಜೀವಂತಿಕೆ, ಉತ್ಕಟತೆ, ಸಚಿತ್ರತೆ, ಉತ್ಸಾಹ ಮತ್ತು ಕಾವು ಇವುಗಳ ಜೀವಾಳ" (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು-೧೧೩) ಎಂಬುದು ಓದುಗನಿಗೆ ಅನ್ನಿಸದೇ ಇರಲಾರದು.

ಈ ಸಂಕಲದ ಮುನ್ನುಡಿಯಲ್ಲಿ ಬಸವರಾಜ ಕಟ್ಟಿಮನಿಯವರು: 'ಈ ಕಥೆಗಳಿಗೆಲ್ಲಾ ಸಾಮಾನ್ಯವಾಗಿ ೧೯೪೨ರ ಅಗಸ್ಟ್ ಚಳುವಳಿಯದೇ ಹಿನ್ನೆಲೆ. ನಡೆದ ಘಟನೆಗಳನ್ನೇ ಬಳಸಿಕೊಂಡು ನಾನು ಇವುಗಳನ್ನು ರಚಿಸಿದೆ. ತಮ್ಮ ನೆತ್ತರಿನಿಂದ ನಮ್ಮ ಬಾವುಟಕ್ಕೆ ಬಣ್ಣ ಬಳಿದರು. ಅವರ ತ್ಯಾಗದಿಂದ ಬಲಿದಾನದಿಂದ ನಮ್ಮ ನಾಡಿಗೆ ಸ್ವಾತಂತ್ರ್ಯ ಬಂತು. ಸ್ವಾತಂತ್ರ್ಯಕ್ಕಾಗಿ ಪ್ರಾಣಾರ್ಪಣೆ ಮಾಡಿದ ಆ ಪುಣ್ಯಾತ್ಮರನ್ನು ಮರೆತೆ ನಾವು ಕೃತಘ್ನರಾದೆವು. ಎಂತಲೇ, ಆ ವೀರಜೀವಗಳನ್ನು ಸಾಹಿತ್ಯದಲ್ಲಾದರೂ ಸಾಧ್ಯವಾದ ಮಟ್ಟಿಗೆ ಶಾಶ್ವತಗೊಳಿಸಲು ನಾನು ಪ್ರಯತ್ನಿಸಿದುದರ ಫಲವೇ ಈ ಕಥಾಸಂಗ್ರಹ' (ಬಸವರಾಜ ಕಟ್ಟೀಮನಿ, ೨೦೧೪, ಮುನ್ನುಡಿ) ಎನ್ನುವ ಅವರ ಮಾತುಗಳಲ್ಲಿ ಅವರ ಸ್ವಾತಂತ್ರ್ಯ ತುಡಿತ-ಮಿಡಿತ ದೇಶಾಭಿಮಾನ, ಸಾಹಿತ್ಯಾಭಿಮಾನ, ಸ್ವಾಭಿಮಾನಗಳು ನಮಗೆ ಗೊತ್ತಾಗದಿರದು..

## ಅಗಸ್ಟ ಒಂಭತ್ತು: ೧೯೪೫

ಅಗಸ್ಟ್ ೪೨ ರಿಂದ ಅಗಸ್ಟ್ ೪೫ರ ವರೆಗೆ ದೇಶಪ್ರೇಮಿಯೊಬ್ಬನ ಕುಟುಂಬವು ಎದುರಿಸಿದ ೩ವರ್ಷಗಳ ಭವಣೆಯನ್ನು ಪ್ರಸ್ತುತ ಕಥೆಯು ಬಿಚ್ಚಿಡುತ್ತಾ ಹೋಗುತ್ತದೆ. 'ಜಯಾ' ಕಥೆಯ ನಾಯಕಿ. ತನ್ನ ಗಂಡ ಚಳುವಳಿಗೆ ಧುಮುಕುವ ಮೊದಲು ಸುಖದ ಸುಪ್ಪತ್ತಿನಲ್ಲಿದ್ದ ಇವಳಿಗೆ ಮೂರು ವರ್ಷಗಳಲ್ಲಿ "ತನ್ನ ಸೀರೆಗಳೂ ಚೂರು ಚೂರಾದವು. ತನ್ನ ಸಂಪಾದನೆ ಹೊಟ್ಟೆಗೂ ಸಾಲದು. ಬಟ್ಟೆಗೋ ವಿಪರೀತ ಬೆಲೆ. ಉಳಿದಿರುವ ಎರಡು ಸೀರೆಗಳಲ್ಲೆ ಸಾಗಿಸಬೇಕಾಗಿದೆ... ಹೊಲಿದುಕೊಂಡು... ಹಚ್ಚಿಕೊಂಡು.." (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೬.) ಎಂಬ ಮಾತುಗಳು ಅಂದಿನ ಈಡಿ ಭಾರತೀಯ ನಾರಿಯ ಆರ್ಥಿಕ ಸ್ಥಿತ್ಯಂತರವನ್ನು ಸೆರೆಹಿಡಿದಿಡುತ್ತವೆ.

"ಕೊಂಚ ಹೊತ್ತು ಕೈ ಹಾಗೆಯೇ ಇರಿಸಿದ್ದಳು ಮಗನ ಎದೆಯ ಮೇಲೆ. ಬೆರಳುಗಳಿಗೆ ಹತ್ತಿಕೊಳ್ಳುತ್ತಿದ್ದ ಆ ಮೂಳೆ ಮೂಳೆ. ಪತಿ ಇದ್ದಾಗ ರಕ್ತ ಮಾಂಸ ತುಂಬಿಕೊಂಡು ನುಣುಪಾಗಿದ್ದ ಆ ಎದೆ ಇಂದು ಮೂಳೆ ಮೂಳೆ" (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭-೧೯೮) ಎಂದು ಮಲಗಿದ್ದ ಮಗನ ದಾರುಣ ಸ್ಥಿತಿ ಭಾರತೀಯ ಎಲ್ಲ ಮಕ್ಕಳನ್ನು ಸಂಕೇತಿಸುತ್ತದೆ. ಒಂದು ಕಡೆ ಹಸಿವು ಮೊತ್ತೊಂದುಕಡೆ ಸ್ವಾತಂತ್ರ್ಯದ ತುಡಿತ. ಮಧ್ಯ ಕಾಮುಕ ಮಾಸ್ತರನ 'ಮದುರಾಯ' ವಕ್ರದೃಷ್ಟಿ. ಇವುಗಳನ್ನೆಲ್ಲಾ ಎದುರಿಸಿ ದಿಟ್ಟತನವನ್ನು ತೋರಿದ. 'ಜಯಾ ಟೀಚರ್' ಅಂದಿನ ಭಾರತದ ಗಟ್ಟಿಗಿತ್ತಿಯರಲ್ಲಿ ಒಬ್ಬಳು. ಎಲ್ಲಾ ಸ್ತ್ರೀಯರಲ್ಲಿ ಇಂತಹ ಮನೋಸ್ಥಿತಿಯನ್ನು ಅಂದಿನ ಅಗಸ್ಟ್ ೪೨-೪೫ರ ಅವಧಿಯಲ್ಲಿ ತಂದೊಡ್ಡಿತ್ತು ಬ್ರಿಟೀಷ್ ದಬ್ಬಾಳಿಕೆ ಎಂಬುದನ್ನು ಕಟ್ಟೀಮನಿಯವರ ಅಗಸ್ಟ್ ಒಂಭತ್ತು ಬಿಚ್ಚಿಡುತ್ತದೆ.\\

"ಪತಿ ಸ್ವಾತಂತ್ರ್ಯ ಸಮರಾಂಗಣಕ್ಕೆ ತೆರಳಿ ಕಾರಾಗಾರದಲ್ಲಿ ಬಂಧಿತನಾಗಿದ್ದ ವೇಳೆ ವಿರಹವೇದನೆ, ಏಕಾಂಗಿತನ, ಕಿತ್ತು ತಿನ್ನುವ ದಾರಿದ್ರ್ಯ, ಅಸಹಾಯಕತೆ, ಕಾಮುಕರ ಕ್ರೂರನೋಟಗಳಿಂದ ನೊಂದು ಬೆಂದು ಬವಣೆಪಟ್ಟರೂ ತನ್ನ ಶೀಲವನ್ನು ಬಲಿಗೊಡದೆ. ಪತಿಯ ಪವಿತ್ರ ದೇಶಪ್ರೇಮದ ಹಾಗೂ ತನ್ನ ಕರುಳಿನ ಕುಡಿಯ ಎಳೆಯ ಹೃದಯದಲ್ಲೂ ಹೊತ್ತಿ ಉರಿಯುತ್ತಿದ್ದ ಸ್ವಾಭಿಮಾನ ಸ್ವಾತಂತ್ರ್ಯಾಕಾಂಕ್ಷೆಗಳ ಪ್ರಭಾವದಿಂದ ಶುದ್ಧ ಭಾರತನಾರಿಯಾಗಿಯೇ ಉಳಿದ ಸಾಧ್ವಿಯೊಬ್ಬಳ ಕರುಳು ಮಿಡಿಯುವ ಕಥೆ 'ಅಗಸ್ಟ್ ಒಂಭತ್ತು"(ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪುಟ-೧೧೩-೧೧೪.) ಕಥೆಯಲ್ಲಿ ಅಡಗಿದೆ.\\"ತಗೋ. ಈ ಖಾಲೀದೋಸೆ ತಿನ್ನು ಅಮ್ಮ. ನನಗೆ ಗೊತ್ತು. ಮನೇಲಿ ಏನೂ ಇಲ್ಲ. ಅದಕ್ಕಾಗಿಯೇ ಇಂದಿನಿಂದ ನಾನು ಕೆಲಸಕ್ಕೆ ಹೋಗುತ್ತಿದ್ದೇನೆ. ಸಂಜೆಯಲ್ಲಿ ದಿನಪತ್ರಿಕೆ ಮಾರಿದರೆ ನಾಲ್ಕೈದಾಣೆ ಸಿಕ್ಕುತ್ತಮ್ಮಾ ಇನ್ನು

ಮೇಲೆ ನೀನು ಶಾಲೆಗೆ ಹೋಗುವುದೂ ಬೇಡ. ಬಿಟ್ಟು ಬಿಡು. ನಾನು ದೊಡ್ಡವನಾಗಲಿಲ್ಲವೇ? ಅಪ್ಪ ಬರುವವರೆಗೂ ನಾನೇ ದುಡಿದುಕೊಂಡು ಬರುತ್ತೇನೆ. ಬೇಕಾದರೆ ಶಾಲೆಯನ್ನು ಬಿಟ್ಟುಬಿಡುತ್ತೇನೆ"(ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಎಂಬಂತಹ ಮಾತುಗಳು; ಭವ್ಯ ಭಾರತದ ಮುಂದಿನ ಭವಿಷ್ಯದ ಕನಸನ್ನು ಮಗ 'ಚಂದ್ರ'ನಿಂದ ಹೇಳಿಸುತ್ತಾರೆ ಲೇಖಕರು. ಶಾಲೆಗೆ ಹೋಗುವ ಹುಡುಗನೊಬ್ಬ ತನ್ನ ಶಿಕ್ಷಕಿಯನ್ನು ಶಾಲೆ ಬಿಟ್ಟು ಬಿಡು. ತಾನೂ ಶಾಲೆಗೆ ಹೋಗದೆ ಸ್ವಾಭಿಮಾನಿಯಾಗಿ ದುಡಿದು ಸಾಕುತ್ತೇನೆ ನಿನ್ನನ್ನು ಎನ್ನುವುದು ಅಂದಿನ ಸ್ವಾತಂತ್ರ್ಯದ ಚಳುವಳಿಯ ಪರಿಣಾಮವೇ ಆಗಿದೆ.

> "ಬೀಳಲಿ ಮೈ ನೆತ್ತರು ಕಾರಿ
> ಹೋದರೆ ಹೋಗಲಿ ತಲೆ ಹಾರಿ
> ತಾಯ್ನಾಡಿನ ಮೇಲ್ಮೆಗೆ ಹೋರಿ
> ಸ್ವಾತಂತ್ರ್ಯದ ಸ್ವರ್ಗಕೆ ಏರಿ!
> (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.)

-ಎಂದು ಸ್ವಾಂತತ್ರ್ಯ ಚಳುವಳಿಯಲ್ಲಿ ಶಾಲೆಯ ಬಾಲಕರಿಂದ ಹಿಡಿದು ಸ್ತ್ರೀ-ಪುರುಷರೆನ್ನದೆ ವಯೋವೃದ್ಧರ ವರೆಗೂ ಧುಮ್ಮಿಕ್ಕಿ 'ಅಗಸ್ಟ ಒಂಭತ್ತು' ಬಂದಿತು. ತಾಯಿ-ಮಗನಿಗೆ ಅಸ್ತಿರತೆಯ ಬದುಕಿನಿಂದ ಮುಕ್ತಿಯ ಭರವಸೆಯನ್ನು ಹೊತ್ತು ತಂದಿತು.

ಒಂದುಕಡೆ ಹಸಿವು ಮತ್ತೊಂದು ಕಡೆ ಸ್ವಾತಂತ್ರ್ಯ ಮಧ್ಯ ಕಾಮುಕ ಮಾಸ್ತರ ಮದುರಾಯ. 'ಜಯಾ ಟೀಚರ್'ಗೆ ಮಗನನ್ನು ಕಂಡಾಗ ಹಸಿವು ನೆನಪಾಗುತ್ತೆ. ಗಂಡನನ್ನು ನೆನೆದಾಗ ಸ್ವಾತಂತ್ರ್ಯವು ಹುಚ್ಚೆದ್ದು ಕುಣಿಯುತ್ತದೆ. ಕಾಮುಕ ಮಾಸ್ತರನನ್ನು ಕಂಡಾಗ ಅಬಲತೆ, ಅಸ್ಥಿರತೆ ಹೆಚ್ಚಿ ಸಂರಕ್ಷಣೆ ಬಯಸುತ್ತದೆ. ಇದು ಕಟ್ಟೀಮನಿಯವರ 'ಅಗಸ್ಟ ಒಂಭತ್ತು' ಕಥೆ ದೇಶಾಭಿಮಾನಿಯೊಬ್ಬಳ ಪ್ರಗತಿಶೀಲ ದನಿಯೊಂದಿಗೆ ಮುಗಿಯುತ್ತದೆ.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಗಾಂಧೀಜಿಯವರ ಬದುಕು ಸಂದೇಶಗಳ ಪರಿಣಾಮ ಬಹುತೇಕ ಅನೇಕರು ಗಾಂಧೀಜಿಯವರ ಸಂದೇಶದ ದನಿ ಕೇಳಿ ಕೂತಲ್ಲಿಂದಲೇ ಎದ್ದು ನಿಲ್ಲುತ್ತಿದ್ದರು.ಅನೇಕರು ಶಾಲಾ, ಕಾಲೇಜುಗಳಿಂದ ತೆರಳಿದರು.ಇಲ್ಲಿ ಚಂದ್ರ ಗಾಂಧೀಜಿಯವರ ಪ್ರಭಾವಕ್ಕೆ ನೇರವಾಗಿ ಒಳಗಾಗದಿದ್ದರೂ ಅಮ್ಮನಲ್ಲಿ ... ದುಡಿಯ ಸೇರುವ ಪಣತೊಡುವ ನಿಟ್ಟನಲ್ಲಿ ಭಾರತ ಸ್ವಾತಂತ್ರ್ಯಕ್ಕಾಗಿ ಅಮ್ಮನಲ್ಲಿ ಹುದುಗಿದ ಭಾವನೆಗಳಿಗೆ ಬೆಚ್ಚನೆಯ ಕಾವು ಕೊಡುತ್ತಾನೆ. ಕಥೆ ಸಾರ್ಥಕತೆಯನ್ನು ಪಡೆಯುವುದೇ ಈ ಸಂದರ್ಭದಲ್ಲಿ ಗಂಡನ ಹೋರಾಟಕ್ಕೆ ಹೆಗಲು ಕೊಟ್ಟ ಜಯಾಗಂಡನ ಅನುಪಸ್ಥಿತಿಯಲ್ಲಿಯೇ ಹೋರಾಟದ ಕಿಚ್ಚಿನಿಂದ

ಹೊರಬಂದಿಲ್ಲ.ದೇಶದ ಸ್ವಾತಂತ್ರ್ಯದ ಪಣತೆಗೆ ತಮ್ಮ ಸಾಧ್ಯವಿದ್ದಷ್ಟು ತೈಲವನ್ನೆರೆಯಬೇಕೆಂಬ ಜಯಾಳ ಅಭಿಪ್ಸೆ ಕಥೆಗೆ ಮತ್ತಷ್ಟು ಶಕ್ತಿ ತುಂಬಿದೆ.

ಹೋರಾದ ದಟ್ಟವಾದ ಪ್ರಭಾವಲಯದಲ್ಲಿ ಮೂಡಿಬಂದು ಈ ಕಥೆ ಹೋರಾಟದಲ್ಲಿ ಹಾಡುವ ಕ್ರಾಂತಿ ಗೀತೆಗಳು, ಆ ಸಂದರ್ಭದಲ್ಲಿ ಸ್ವಾತಂತ್ರ್ಯತೆ ಭಾರತೀಯರಿಗೆ ಸ್ವರ್ಗ ಸಮಾನವಾಗಿತ್ತೆಂದು ಗೋಚರಿಸುತ್ತದೆ. ಆದರೆ "ಯಾರಿಗೆ ಬಂತು? ಎಲ್ಲಿಗೆ ಬಂತು ೪೭ರ ಸ್ವಾತಂತ್ರ್ಯ"ವೆಂಬ ಸಿದ್ದಲಿಂಗಯ್ಯನವರ ಮಾತುಗಳಲ್ಲಿ ಗಳಿಸಿದ ಸ್ವಾತಂತ್ರ್ಯದ ವಿಪರ್ಯಾಸವನ್ನು ಕಾಣಬಹುದಷ್ಟೇ ಅದೇನೇ ಇರಲಿ ಈ ಕಥೆಯಂತೂ ಮೈ ನವಿರೇಳಿಸಬಲ್ಲ ಅನೇಕ ಹೋರಾಟದ ದೃಶ್ಯಗಳನ್ನು ತಂದಿದ್ದಂತೂ ಸತ್ಯ.

ಸಾಮಾನ್ಯವಾಗಿ ಕಥೆ-ಕಾದಂಬರಿಗಳಲ್ಲಿ ಹೋರಾಟ ಆರಂಭವಾಗುವುದೇ ಗಾಂಧೀಜಿ ಸಂದೇಶದಂತೆ. ಆದರೆ ಅಂತ್ಯ ಹಿಂಸಾತ್ಮಕವಾಗಿ ಕಾಣುತ್ತದೆ. ಹೀಗಾಗಿ ಗಾಂಧೀಜಿಯವರ ಸಂದೇಶದ ಸಫಲತೆ-ವಿಫಲತೆಗಳ ಬಗ್ಗೆ ಸ್ಪಷ್ಟವಾದ ಅಧ್ಯಯನ ಕೈಗೊಳ್ಳಬಹುದಾದ ಸಾಧ್ಯತೆಗಳಿವೆ.

**ರಕ್ತಧ್ವಜ**

"ಹತ್ತು ವರ್ಷದ ಹಸುಳೆಯೊಬ್ಬ ಕೋರ್ಟಿನ ಗೋಪುರದ ಮೇಲೆ ತ್ರಿವರ್ಣ ಧ್ವಜಾರೋಹಣ ಮಾಡಲು ಹೋಗಿ ನಿರ್ಭೀತಿಯಿಂದ ಪೋಲೀಸರ ಗುಂಡಿಗೆ ಗುಂಡಿಗೆಯೊಡ್ಡಿದ ವೀರ ವೃತ್ತಾಂತ ಇದರ ವಸ್ತು." (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು-೧೧೩-೧೧೪.) "ಯಾಕೋ ಕಾಣೆ. ನನಗೆ ಹೇಗೆ ಹೇಗೋ ಅನ್ನಿಸ್ತಾ ಇದೆ ಮಗೂ. ಹುಷಾರಾಗಿರು ಕಿಸನ್. ಪೋಲೀಸರು ಬಂದುಬಿಟ್ಟರೆ..." (ಬಸವರಾಜ ಕಟ್ಟೀಮನಿ , ೨೦೧೪, ಪುಟ-೧೯೭.) ಎನ್ನುವ ಮುದುಕ 'ರಾಮಸಿಂಗ'ನ ಧ್ವನಿಯಲ್ಲೇ ಮಗನ ವೀರ ಮರಣ ಅಡಗಿದೆ. ಗೊತ್ತಿದ್ದು ಮಗನನ್ನು ಒಬ್ಬನೇ ಮಗನನ್ನು ಬ್ರಿಟೀಷ್ ಗುಂಡಿನ ಬಾಯಿಗೆ ತಾನೇ ತಳ್ಳಿದ್ದೆ ಎಂಬ ಕೊರಗು ಕೊನೆಯಲ್ಲಿ 'ರಾಮಸಿಂಗ'ನಿಗೆ ಮೂಡದೇ ಇರಲಾರದು. ಇಲ್ಲಿ ತಂದೆ-ಮಗನ ರಕ್ತ ಸಂಬಂಧಕ್ಕಿಂತ ದಾಸ್ಯದಿಂದ ಮುಕ್ತಿ, ಸ್ವಾತಂತ್ರ್ಯದ ಹಂಬಲಗಳು ಹೆಚ್ಚಾಗಿ ತೋರುತ್ತವೆ.

"ಗುಂಡುಮದ್ದು ಅಂತ ಯಾರಿಗೆ ಹೆದರಿಸ್ತೀಯೋ ನೀನು? ನಿಮ್ಮ ಗುಂಡುಗಳಿಗೆ ಇಂದು ಯಾರೂ ಅಂಜೋದಿಲ್ಲ. ಆ ಕಾಲ ಹೋಯಿತು. ಇಂದು ನಾವು ಸ್ವತಂತ್ರರಾಗಿದ್ದೇವೆ. ನೆನಪಿನಲ್ಲಿಡು. ಹಮ್ ಕರೇಂಗೆ, ಯಾ, ಮರೇಂಗೆ! – ಅಲ್ಲಿದ್ದಾರೆ ನೋಡು ನಮ್ಮ ಸೇನಾಪತಿ. ಅವರ ಆಜ್ಞೆ ಕೊಟ್ಟದ್ದರಿಂದ ನಾನು ಧ್ವಜ ಕಟ್ಟುತ್ತಿದ್ದೇನೆ. ಅವರು ಹೇಳಿದರೆ ಮಾತ್ರ ಹಾಗೇ

ಇಳಿದೇನು. ಬೇರೆ ಯಾರಪ್ಪ ಹೇಳಿದರೂ ಇಳಿಯೋಣಲ್ಲ..." (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭-೨೧೦.) ಎಂಬಂತ ಮಾತುಗಳು ವೀರಯೋಧನೊಬ್ಬನ ಮಾತುಗಳಲ್ಲ ಅವು ಇಡಿ ಭಾರತೀಯ ಯುವ ಪೀಳಿಗೆಗಳ ಸ್ವಾತಂತ್ರ್ಯದ ಕಾತುರತೆಯನ್ನು, ಪ್ರಾಣಾರ್ಪಣೆಯನ್ನು ತೋರಿಸುವ ಸಂಕೇತಗಳಾಗಿವೆ. 'ಇಳಿ! ಇಳಿ! ಇಲ್ಲಾಂದ್ರೆ ಸುಟ್ಟು ಬಿಡ್ತೇನೆ!' ಎನ್ನುವ ಮಾತುಗಳಿಗೆ ಅಂಜದೆ, ಧ್ವಜವನ್ನು ಹಾರಿಸುತ್ತಾನೆ. ಅವನ ಧೈರ್ಯ ಸಾಹಸಗಳನ್ನು ಲೇಖಕರು 'ಆಧುನಿಕ ಅಭಿಮನ್ಯು' ಎಂದು ಕರೆದಿರುವುದು ಸಹಜವೆನಿಸತ್ತದೆ. 'ಬೆಂಕಿಯ ಕಿಡಿ ಕಾರುತ್ತ ಹಾರಿತು ಗುಂಡು; ಧ್ವಜವನ್ನಪ್ಪಿಕೊಂಡು ನಿಂತಿದ್ದ ಆ ಆಧುನಿಕ ಅಭಿಮನ್ಯುವಿನ ಹೊಟ್ಟೆಯನ್ನು ಭೇದಿಸಿಕೊಂಡು', 'ಮುಗಿಲಿನಿಂದ ಉರುಳುವ ಚಿಕ್ಕೆಯಂತೆ ಗೋಪುರದಿಂದ ಕೆಳಕ್ಕುರುಳಿತು ಆ ಎಳೆ ಶರೀರ' ಎನ್ನುವ ಮಾತುಗಳು ಕರುಣೆಯ ಕರುಳಿಗೆ ಕಿಚ್ಚು ಹಚ್ಚುತ್ತದೆ. ಇದು ಲೇಖಕರಲ್ಲಿ "ಅತ್ಯಂತ ಚಿಕ್ಕ ಪರಿಮಿತಿಯಲ್ಲಿ ಅದ್ಭುತ ಅನುಭವವೊಂದನ್ನು ತಂದುಕೊಡುವ ಮೈನವಿರೇಳಿಸುವ ಸತ್ವಶಾಲಿ"(ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು-೧೧೩-೧೧೪.) ಬರಹ ಎದ್ದು ತೋರುತ್ತದೆ.

"ಬಾಲವೀರ ಕಿಸನ್ನನ ಅಪ್ರತಿಮ ಧೈರ್ಯ, ಉತ್ಸಾಹ, ನಿಷ್ಠೆಯ ನುಡಿಗಳ ಚಿತ್ರಣ ಮರೆಯಲಾರದಂಥದ್ದು. ಕಿಸನ್ನನ ವೃದ್ಧ ತಂದೆಯ ಪಿತೃವಾತ್ಸಲ್ಯ ಮತ್ತು ದೇಶ ಪ್ರೇಮಗಳ ನಡುವಣ ಮನಸೆಳೆಯುವ ಘರ್ಷಣೆ ಕೆಲವೇ ಮಾತುಗಳಲ್ಲಿ ತುಂಬ ಸಾರ್ಥಕವಾಗಿ ಪ್ರತಿಬಿಂಬಿತವಾಗಿದೆ" (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು-೧೧೩-೧೧೫.) ಎಂಬಂತಹ ವಿಮರ್ಶೆಗಳು ಸ್ವಾಗತಾರ್ಹವಾದವು. ಭಾರತ ಸ್ವಾತಂತ್ರ್ಯಕ್ಕೆ ಒಂದೇ ಒಂದು ವರ್ಷ ಪೂರ್ವದಲ್ಲಿ ಉತ್ತರ ಭಾರತದಲ್ಲಿ ನಡೆದ ಸಹಜ ಘಟನೆಯೊಂದು ಕಟ್ಟೀಮನಿಯವರಲ್ಲಿ ಕಥೆಯಾಗಿ ಮೂಡಿದ್ದು ಅವರಲ್ಲಿ ಪ್ರಗತಿಶೀಲತೆ ಧೋರಣೆಯನ್ನು ಮಡುಗಟ್ಟಿಸುತ್ತದೆ.

ಸ್ವಾತಂತ್ರ್ಯ ಪಡೆಯುವ ಹೊಸ್ತಿಲಲ್ಲಿ ಹುಟ್ಟಿದ ಕಥೆಯಿದು. ಇದು ಗಾಂಧೀಜಿಯವರ "ಮಾಡು ಇಲ್ಲವೇ ಮಡಿ" ಸಂದೇಶದ ಪ್ರತಿಫಲದ ಕಥೆ. ೧೯೪೨-೪೩ರ ಅವಧಿಯಲ್ಲಿ ಸ್ವಾತಂತ್ರ್ಯ ಹೋರಾಟದ ದಿಕ್ಕು ದೆಸೆಗಳು ಬದಲಾದವು. ದೇಶದೆಲ್ಲೆಡೆ ಚಳುವಳಿಯ ಸ್ವರೂಪ ಹೆಚ್ಚೆಚ್ಚು ಉಗ್ರವಾಗುತ್ತ ಹೋಯಿತು. ತಮ್ಮ ಪ್ರಾಣವನ್ನು ಕಳೆದುಕೊಳ್ಳಲು ಹೋರಾಟಗಾರರು ಹಿಂದೆ-ಮುಂದೆ ನೋಡುತ್ತಿರಲಿಲ್ಲ. ಅನೇಕರು ಮನೆ-ಮಠಗಳನ್ನು ಬಿಟ್ಟು ಗುಡ್ಡ -ಬೆಟ್ಟಗಳಲ್ಲಿ ಅವಿತುಕೊಂಡು ಬ್ರಿಟೀಷರ ವಿರುದ್ಧ ತೊಡೆತಟ್ಟಿ ನಿಂತರು. ದೊಡ್ಡವರಷ್ಟೇ ಅಲ್ಲ ಕಿಸನ್‌ನಂತಹ ವೀರಬಾಲಕರೂ ಕೂಡ ತಮ್ಮೆದೆಯ ರಕ್ತ ಹರಿಸಿ ಭಾರತಾಂಬೆಗೆ ಅಭಿಷೇಕ ಮಾಡಿ ಅವಳನ್ನು ಬಂಧ ಮುಕ್ತಳಾಗಿಸಿಕೊಳ್ಳಬೇಕೆಂಬುದು ಈ ಕಥೆಯ ತಿರುಳು ಕಥೆಯ ಶೀರ್ಷಿಕೆ ಹೇಳುವಂತೆ ನಾವಿಂದು ಹಾರಿಸುವ ಧ್ವಜ ಇಂಥಹ ಅನೇಕರ ರಕ್ತಾಭಿಷೇಕದಿಂದಲೇ ಆಕಾಶದಲ್ಲಿ

ಹಾರಾಡುತ್ತಿದೆ. ಅದರಲ್ಲಿಂದ ಉದರುವ ಹೂಗಳು ಕಿಸನ್‌ನಂತಹ ವೀರಬಾಲಕರು, ಹೋರಾಟಗಾರರು ಪ್ರಾಣ ತ್ಯಾಗ ಮಾಡಿ: ಅವರ ಆತ್ಮಗಳಿಂದ ಹೂಗಳಾಗಿ ಅರಳಿ, ಆ ಹೂಗಳೇ ನಾವಿಂದು ಆಚರಿಸುವ ಸ್ವಾತಂತ್ರ್ಯೋತ್ಸವದ ದಿನದಂದು ಧ್ವಜಾರೋಹಣ ಮಾಡಿದಾಗ ನಮ್ಮ ತಲೆಮೇಲೆ ಬೀಳುವ ಹೂಗಳು ಉದರುವುದನ್ನು ಅರಿಯಬೇಕಾದ ಅಗತ್ಯವಿದೆ. ಈ ನಿಟ್ಟಿನಿಲ್ಲಿ ಕಥೆ ಅರ್ಥಪೂರ್ಣವೂ, ಔಚಿತ್ಯಪೂರ್ಣವೂ, ಭಾವಪೂರ್ಣವೂ ಆಗಿ ಮೂಡಿಬಂದಿದೆ,

ಹೋರಾಟಕ್ಕಾಗಿ ಮನೆ–ಮಠ ಬಿಟ್ಟು, ಹೆಂಡತಿ–ಮಕ್ಕಳ ತೊರೆದು ಹೋದವರಷ್ಟೇ ಅಲ್ಲ. ಬ್ರಹ್ಮಚಾರಿಗಳಾಗಿಯೇ ಚಳುವಳಿಗಳಲ್ಲಿ ಭಾಗವಹಿಸಿದ ಅನೇಕ ಯುವಕರು ಪ್ರಗತಿಶೀಲ ಕಥನ ಸಾಹಿತ್ಯದಲ್ಲಿ ಕಾಣುತ್ತಾರೆ. ಅನೇಕ ಬಾಲಕರು ಕೂಡ ಪ್ರಾಣ ತ್ಯಾಗ ಮಾಡಿದ ಉದಾಹರಣೆಗಳಿವೆ. ಇದು ಪ್ರತ್ಯೇಕವಾದ ಅಧ್ಯಯನವಾಗಬಲ್ಲ ಸಾಧ್ಯತೆ ಹೆಚ್ಚಾಗಿದೆ.

**ಹುತಾತ್ಮ**

ಹಸಿವಿನಿಂದ ಬಳಲುವ ಭಾರತಕ್ಕೆ ಬ್ರಿಟೀಷರು ನೀಡಿದ್ದು ವಿಷವನ್ನು. ಅನ್ನವೆಂಬ ಹೆಸರಿನಲ್ಲಿ ತಿನ್ನಲುಬಾರದ ಅನ್ನವನ್ನು ಸೆರೆಮನೆಯಲ್ಲಿ ನೀಡಿದ್ದು ಅನೇಕರ ಸಾಮೂಹಿಕ ಸಾವಿಗೆ ಬ್ರಿಟೀಷ್ ದಬ್ಬಾಳಿಕೆಗೆ ಈ ಕಥೆ ಸಾಕ್ಷಿಯಾಗಿದೆ. "ಬೆಳಗಾವಿ ಜಿಲ್ಲೆಯ ಕ್ರಾಂತಿವೀರನೊಬ್ಬನ ಕತೆ 'ಹುತಾತ್ಮ'. ಬ್ರಿಟೀಷರ ನರಕ ಸದೃಶವಾದ ಸೆರೆಮನೆಗಳಲ್ಲಿ ಕೊಳೆತು ನಾಯಿ ಕಾಗೆಗಳೂ ತಿನ್ನಲಾರದ–ತಿನ್ನಬಾರದ ಅನಾರೋಗ್ಯಕರವಾದ ಆಹಾರವನ್ನು ತಿಂದು ರೋಗಗ್ರಸ್ತನಾಗಿ ಹಾಸಿಗೆ ಹಿಡಿದು ಹೆತ್ತ ತಾಯಿಯನ್ನೂ ಕಳೆದುಕೊಂಡು ಆಸ್ತಿಪಾಸ್ತಿಯನ್ನೂ ಮಾರಿಕೊಡು ತಿನ್ನಲು ಅನ್ನವಿಲ್ಲದೆ ಕುಡಿಯಲು ನೀರಿಲ್ಲದೆ ಕಂಗೆಟ್ಟು ಬಗೆಗೆಟ್ಟು ನಿಸ್ಸಹಾಯಕನಾಗಿ ಭಾರತ ಮಾತೆಯ ಸ್ಮರಣೆಯಲ್ಲೇ ಸಾವನ್ನಪ್ಪಿದ ಕ್ರಾಂತಿಪುರುಷನೊಬ್ಬನ ಹೃದಯವಿದ್ರಾವಕ ಕಥೆಯಿದು." (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು–೧೧೩.)

ಇಲ್ಲಿ ಪ್ರಗತಿಶೀಲ ಲೇಖಕನ ಚಾರ್ವಾಕ ನಡೆಯನ್ನು ಹೀಗೆ ಬಿಂಬಿಸುತ್ತಾರೆ: "ಬರೀ ಒಂದು ಭ್ರಮೆ. ಏನೋ ಮಾಯಾಜಾಲ. ದೇವರು... ಪರಮಾತ್ಮ... ಶಂಕರ... ನಾರಾಯಣ... ಎಲ್ಲರನ್ನೂ ಕಾಪಾಡುವ ಭಗವಂತ.... ಸುಳ್ಳು... ಸುಳ್ಳು... ಎಲ್ಲಾ ಸುಳ್ಳು ಎಲ್ಲಾ ಸುಳ್ಳು ಅಪ್ಪಟ ಸುಳ್ಳು... ಶುದ್ಧ ಡಾಂಭಿಕತನ... ಎಲ್ಲರನ್ನು ಕಾಪಾಡುವ ಆ ದೇವರು ಎಲ್ಲಿ ಓಡಿಹೋಗಿದ್ದಾನೆ ಈಗ? ಹೇಳು. ಉತ್ತರಕೊಡು. ಎಲ್ಲಿ ಅಡಗಿಕೊಂಡಿದ್ದಾನೆ ಆ ಸರ್ವರಕ್ಷಕ ಭಗವಂತ? ಕುರುಡಾಗಿವೆಯೇನೇ ಅವನ ಕಣ್ಣು? ಕಿವುಡಾಗಿವೆಯೇನೇ ಅವನ ಕಿವಿ? ಕಲ್ಲಾಗಿದೆಯೇನೇ ಅವನ ಹೃದಯ?" (ಬಸವರಾಜ ಕಟ್ಟೀಮನಿ, ೨೦೧೪, ಪುಟ–೯೭.) ಇಂಥ ಮಾತುಗಳಲ್ಲಿ ಹುಂಬತನವಿದ್ದರೂ

ಅದು ಸತ್ಯವನ್ನು ಹೇಳುತ್ತದೆ. ಎಲ್ಲವೂ ಸಾಮಾನ್ಯರಾದ ನಮ್ಮ ಕಣ್ಣಿಗೆ ಕಾಣಿಸುತ್ತಿದೆ. "ಕೋಟಿ ಕೋಟಿ ಜನರ ನರಳಾಟ, ಚೀರಾಟ, ಹಸಿವೆಯ ಸಂಕಟ, ಸಾವಿನ ನರ್ತನ, ಈ ಯುದ್ಧ, ಈ ರಕ್ತಪಾತ, ಅಟಂಬಾಂಬ್, ನಾಗಾಸಾಕಿ, ಹಿರೋಶಿಮಾ, ಅಲ್ಲಿ ನಡೆದ ಪಿಶಾಚ ಹಿಂಸೆ, ನಮ್ಮ ದೇಶದಲ್ಲೇ ಭಾರಿದುರಂತ, ಬಂಗಾಲ, ಬಿಜಾಪುರ, ಕೇರಳ, ಈಗ ಇಡೀ ಹಿಂದುಸ್ಥಾನ... ಎಲ್ಲಿದ್ದಾನೆ ಆ ದೇವರು?" (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಎಂದು ತುಂಬಾ ಗಂಭೀರವಾದ ಆರೋಪವನ್ನು ದೇವರಿಗೆ ಹೇರಿರುವುದು, ಮೂಢ ನಂಬಿಕೆ, ಆಚರಣೆಗಳ ಬಗೆಗೆ ಪ್ರಗತಿಶೀಲರ ಪ್ರಶ್ನೆಗೆ ಇಂದಿಗೂ ಉತ್ತರವನ್ನು ದೇವರಿಂದ ಕೊಡಲಾಗಿಲ್ಲ.

"ಆದಿಯಿಂದ ಅಂತ್ಯದವರೆಗೂ ಕರುಳು ಹಿಂಡುವ ಕರುಣ ರಸ ಹರಿಯುತ್ತಿದೆ. ಕಥಾ ನಾಯಕನ ಚಂಚಲವಾದ ರಾಷ್ಟ್ರನಿಷ್ಠೆ, ಸ್ವಾತಂತ್ರ್ಯ ಪ್ರೇಮ, ಬಾಪೂಭಕ್ತಿ ಅನನ್ಯ ಅಭಿವ್ಯಕ್ತಿಯನ್ನು ಪಡೆದುಕೊಂಡಿದೆ." (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು-೧೧೩.) ಎಂಬ ವಿಮರ್ಶೆಯನ್ನು ಮತ್ತಷ್ಟು ಒರೆಹಚ್ಚಿ ನೋಡಿದಾಗ; ಕಥಾ ನಾಯಕನು "ಎಂದು ಬರುತ್ತದೆಯೇ ಅಮ್ಮ, ಅಂಥ ರಾಜ್ಯ? ಎಲ್ಲರೂ ಯಾವ ಭೇದವೂ ಇಲ್ಲದೆ ಸುಖಸಂತೋಷದಿಂದಿರುವ ರಾಜ್ಯ? ಬಡವರು, ಶ್ರೀಮಂತರು ಎನ್ನುವ ಭೇದ ತೊಲಗಿಹೋಗಿ ಎಲ್ಲರೂ ಸ್ವತಂತ್ರವಾಗಿ, ಸಮಾನರಾಗಿ ಇರುವ ರಾಜ್ಯ? ಅಲ್ಲ ತಾಯಿ ರಾಮರಾಜ್ಯದ ಮಾತು ಹೇಳಬೇಡಮ್ಮ. ನಮಗೆ ಬೇಕಾದದ್ದು ನಮ್ಮ ರಾಜ್ಯ. ಸಮತಾರಾಜ್ಯ." (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಎಂದು ಒಕ್ಕೊರಲಿನಿಂದ ಭಾರತಾಂಬೆಯನ್ನು ಬೇಡುವ ಅವನ ದೈನೀಯತೆಯ ಆಕ್ರಂದನದಲ್ಲಿ ಕಟ್ಟೀಮನಿಯವರ ರಾಜಕೀಯ ಜೀವನದ ಅನುಭವವು ಸೇರಿಕೊಂಡಿದೆ.

ಪ್ರಗತಿಶೀಲ ಲೇಖಕರಾದ ಬಸವರಾಜ ಕಟ್ಟೀಮನಿಯವರು ಅನೇಕ ಬದುಕಿನ ಅನುಭವಗಳು ಅವರನ್ನು ಗಟ್ಟಿಗೊಳಿಸಿವೆ. ಸಮಾನತೆ ಅವರ ಕನಸು ನಮಗೆ ರಾಮ ರಾಜ್ಯ ಬೇಡ ಸಮತಾ ರಾಜ್ಯ ಬೇಕೆಂದು ತಮ್ಮ ಹಂಬಲವನ್ನು ಅಭಿವ್ಯಕ್ತಿಸುತ್ತಾರೆ. ಅಂಥಾ ಸಮಾನತೆ ರಾಜು ಬಯಸುವುದಾದರೂ ಯಾವಾಗ? ಎನ್ನುವಲ್ಲಿ ಅವರಲ್ಲಿ ಕಾಯುವ ಇಚ್ಛೆಯೂ ಇದೆ. ಸ್ವಾತಂತ್ರ್ಯ ಸಿಕ್ಕರೆ ಇದೆಲ್ಲ ಸಾಧ್ಯವೆಂಬ ಆಶಯವೂ ಅವರಲ್ಲಿಲ್ಲ.ಅದಕ್ಕಾಗಿ ಕಾಯುವ ಜಾತಕ ಪಕ್ಷಿಯಂತೆ ಕಾಯುವ ಕಥೆಗಾರರು ತಮ್ಮ ರಾಜಕೀಯ ಅನುಭವಗಳಿಂದ ಬೇಸತ್ತು ಬರೆದ ಕಥೆಯಂತೆ ಇಲ್ಲಿ ಮೂಡಿ ಬಂದಿದೆ.

**ಜನವರಿ ಇಪ್ಪತ್ತಾರು**

ಮಲ್ಲೇಶಿ ಹಳ್ಳಿಯ ಮುಗ್ಧ. ಅವನಿಗೆ ಒದಗಿಬಂದಿದ್ದ ಸೆರೆಮನೆ ವಾಸವನ್ನು ಮನಃಪೂರ್ವಕವಾಗಿ ಸ್ವಾಗತಿಸಿದವನು. ಸೆರೆಮನೆಯಲ್ಲಿದ್ದರು ಅವನಿಗೆ ಜನವರಿಯ

ತಂಪುಗಾಳಿಯು ಅಂತರ್ದೃಷ್ಟಿಯಲ್ಲಿ ಹೊಸ ಕಲ್ಪನಾಲೋಕವನ್ನು ಹುಟ್ಟುಹಾಕಿದ್ದವು. ಇದರಾಚೆಗೂ ಅವನು "ಸುಳ್ಳು, ತಾನು ಸೆರೆಮನೆಯಲ್ಲಿರುವುದು ಬರೀ ಸುಳ್ಳು. ಇಷ್ಟು ಸುಂದರ ನಿಸರ್ಗ, ಇಂಥ ಮೋಹಕ ಚಂದ್ರಮ, ಈ ಆಕಾಶ, ಈ ಮೋಡದ ಮರಿ, ಈ ತಂಪುಗಾಳಿ ಯಾರಾದರೂ ಬಂಧಿಸಿಡಲು ಸಾಧ್ಯವೇ ಇವನ್ನು? ತನ್ನ ಶರೀರವೇನೋ ಇಲ್ಲಿ ಸೆರೆಯಲ್ಲಿದೆ. ಆದರೆ ತನ್ನ ಮನಸ್ಸು...?"(ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಎಂಬಂತಹ ಮಾತುಗಳು ದೇಶ ಸೇವಕರು ಕೂಡಲ್ಪಟ್ಟದ್ದ ಜೈಲುಗಳಲ್ಲಿನ ದುಸ್ಥಿತಿ, ಅಧಿಕಾರಿಗಳ ಅಮಾನುಷ ಕ್ರೌರ್ಯ ಮುಂತಾದವುಗಳ ಜೊತೆ ಜೊತೆಗೆ ಲೇಖಕರು ಮಲ್ಲೇಶಿಯಂತಹ ಮುಗ್ಧನ ಕಲ್ಪನಾ ಲಹರಿಗೂ ಆಸ್ಪದ ಕೊಟ್ಟಿದ್ದಾರೆ.

ಜೈಲಿನಲ್ಲಿನ ಬಂಧನದ ಭೀತಿಯು ತನ್ನ ಸುತ್ತಲಿನ ಪ್ರಕೃತಿಗೆ ಇಲ್ಲ. ಹಾಗಾದರೆ ತಾನು ಪ್ರಕೃತಿಯ ಒಂದು ಅಂಶವಲ್ಲವೇ ತನಗೇಕೆ ಪಾರತಂತ್ರ್ಯ, ಗುಲಾಮಗಿರಿಯ ನರಕದ ಭಯ? ಪೋಲೀಸರ, ಅವರ ಲಾಠಿಗಳ, ಮ್ಯಾಜಿಸ್ಟ್ರೇಟರ್‌ಗಳ, ಜೇಲರುಗಳ, ಸೂಪರಿಂಟೆಂಡೆಂಟರ, ವಿಚಿತ್ರ ವೇಷಧಾರಿ ವಾರ್ಡನ್‌ಗಳ ಯಾವ ಭಯವನ್ನು ಈ ಸುಂದರವಾದ ಗಾಳಿ, ಬೆಳಕು, ಆಕಾಶ, ನಿಸರ್ಗಕ್ಕೆ ಇಲ್ಲ. ಅದರಂತೆ ನನಗೂ ಇವುಗಳ ಭಯವಿಲ್ಲ ಎನ್ನುವ ಮಲ್ಲೇಶಿಯ ವಿಶಿಷ್ಟ್ಯವಾದ ಪ್ರತಿಭಟನೆಯನ್ನು ಲೇಖಕರು ಚಿತ್ರಿಸಿದ್ದಾರೆ. ಇಲ್ಲಿ ಮಲ್ಲೇಶಿಯ ಕಾಲ್ಪನಿಕತೆಯಲ್ಲಿ ವೈಶಿಷ್ಟ್ಯವಿದ್ದು. ಲೇಖಕರ ಪ್ರಗತಿಶೀಲ ಧೋರಣೆಯನ್ನು ಎತ್ತಿಹಿಡಿಯುತ್ತದೆ.

ಮಲ್ಲೇಶಿಗೆ ತನ್ನ ತಾಯಿ ಸತ್ತು ಐದು ತಿಂಗಳಾದ ಬಗ್ಗೆ ಚಿಂತೆ, ವೇದನೆ, ಕಣ್ಣೀರು ಇದ್ದರೆ; ಅದೇ ಸೆರೆವಾಸದಲ್ಲಿದ್ದ 'ಶಿವೂ' "ಐದು ತಿಂಗಳಾಗಲಿಲ್ಲ ಮಲ್ಲೇಶಿ, ನೂರಾ ಐವತ್ತು ವರ್ಷ ಆಯ್ತು. ಬರೀ ನಿನ್ನ ತಾಯಿ ಮಾತ್ರವಲ್ಲ – ನನ್ನ ತಾಯಿಯೂ ಸತ್ತುಹೋಗಿದ್ದಾಳೆ. ನಾವು ನಲವತ್ತು ಕೋಟಿ–ನಮ್ಮೆಲ್ಲರ ತಾಯಿಯೂ ಸತ್ತುಹೋಗಿದ್ದಾಳೆ..." (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಎಂದು ಹೇಳುತ್ತಾನೆ. ಈ ಮಾತುಗಳಲ್ಲಿ ಲೇಖಕರು ಇಡೀ ಕಥೆಗೊಂದು ಅರ್ಥವಂತಿಕೆಯನ್ನು ಕೊಟ್ಟರೆನ್ನಬಹುದು. ಏಕ ಮುಖವಾಗಿ ಹೊರಟಿದ್ದ ಕಥೆಯು ಒಮ್ಮೆಲೆ ಸಮಗ್ರ ಭಾರತವನ್ನೇ ಪ್ರತಿನಿಧಿಸಿದಂತೆ ತೋರುತ್ತದೆ. ಜೈಲಿನಲ್ಲಿದ್ದು 'ಜನವರಿ ಇಪ್ಪತ್ತಾರು' ಆಚರಿಸುವುದು ಮಲ್ಲೇಶಿ ಮತ್ತು ಶಿವು ಇವರಲ್ಲಿ ಸ್ವಾಭಿಮಾನದ ಪ್ರತೀಕವಾಗಿ ಕಾಣುತ್ತದೆ.

ಜೈಲಿನಲ್ಲಿದ್ದರೂ ಸ್ವಾತಂತ್ರ್ಯ ಪಡೆಯುವ ಹಂಬಲದ ಹೋರಾಟಗಾರರು "ನಲವತ್ತು ಕೋಟಿ ಭಾರತೀಯರ ತಾಯಿ ಸತ್ತು ಹೋಗಿದ್ದಾಳೆ" ಎಂಬ ಶಿವು ಹೇಳುವ ಮಾತುಗಳು ದ.ರಾ.ಬೇಂದ್ರೆಯವರ "ಮೂವತ್ಮೂರು ಕೋಟಿ, ಮೂವತ್ಮೂರು ಕೋಟಿ" ಪದ್ಯವನ್ನು

ನೆನಪಿಸತ್ತದೆಯಲ್ಲದೆ, ಹೋರಾಟಗಾರರಲ್ಲಿ ತುಂಬಿತುಳುಕುತ್ತಿದ್ದ ಕೆಚ್ಚದೆಯ .ಹೋರಾಟದ ಹಂಬಲದ ಜೊತೆಗೆ, ಬ್ರಿಟೀಷರ ಜೈಲುಗಳಲ್ಲಿರುವ ಅವ್ಯವಸ್ಥೆಯಲ್ಲಿಯೇ ವ್ಯವಸ್ಥೆಯನ್ನು ಕಾಣುವ ಹಂಬಲದ ಆಶಯಗಳನ್ನು ಈ ಕಥೆ ಅಭಿವ್ಯಕ್ತಿಸುತ್ತದೆ. ಅದರೊಂದಿಗೆ ಕಥೆ ಔಚಿತ್ಯಪೂರ್ಣವಾಗಿ ಮೂಡಿ ಬಂದಿದೆ.

## ಸತ್ಯವಾನ ಮರಳಲಿಲ್ಲ

"ತೆಳ್ಳಗೆ, ಬೆಳ್ಳಗೆ ಮಲ್ಲಿಗೆ ಬಳ್ಳಿಯ ಹಾಗಿದ್ದ ಆ ಚೆಂದಗಿನ ಹುಡುಗ ಸತ್ಯಪ್ಪ! ಹೋ! ಜ್ಞಾಪಕ ಬಂತು. ಒಂದು ಸಲ 'ಸಾವಿತ್ರಿ ಸತ್ಯವಾನ್' ಬಯಲಾಟದಲ್ಲಿ ಸತ್ಯವಾನನ ಪಾತ್ರ ವಹಿಸಿದ ಹುಡುಗ ಅಲ್ಲವೇ ಆವ? ಅಂದಿನಿಂದ ಹಳ್ಳಿಯವರೆಲ್ಲ ಅವನನ್ನು 'ಸತ್ಯವಾನ' ಎಂದೇ ಕರೆಯತೊಡಗಿದ್ದರು...." (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಸತ್ಯಪ್ಪ 'ಸತ್ಯವಾನ' ಆದ ಬಗೆ ಒಂದು ಮರೆಯದ ಪ್ರಸಂಗ. ಇದನ್ನು ಕಥೆಯ ಪ್ರಮುಖ ಪಾತ್ರಧಾರಿಗಳಾದ ಭಾಗಿರಥಿ ಮತ್ತು ಸಾವಿತ್ರಿ ನೆನೆದುಕೊಳ್ಳುತ್ತಾರೆ. ಸತ್ಯಪ್ಪ ಸುಂದರನಾದ, ಚಿಗುರುಮೀಸೆಯ ಯುವಕನಾಗಿ ಸಾವಿತ್ರಿಯನ್ನು ಸೆಳೆದಿದ್ದ. ಅವನು "ಮೂರು ವರ್ಷದ ಕೆಳಗ ಕಾಂಗ್ರೆಸ್ ಚಳುವಳಿ ನಡೀತಲ್ಲ ಭಯಂಕರ ದೊಡ್ಡ ಚಳುವಳಿ... ಗಾಂಧಿ, ಜವಹಾರಲಾಲ ಎಲ್ಲರನ್ನೂ ಹಿಡಿದು ಹಾಕಿತ್ತಲ್ಲ ಸರ್ಕಾರ... ಆಗ..." ( ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಅದರೊಳಗ ಸತ್ಯಪ್ಪ ದುಮುಕಿದ್ದ. ಸತ್ಯಪ್ಪನ ಕುರಿತು ಗೆಳೆತಿಯರಿಬ್ಬರೂ ಹೆಚ್ಚೆಚ್ಚು ಮಾತನಾಡುತ್ತಾರೆ. ಅವನ ಧೈರ್ಯ, ಸಾಹಸ, ಸೌಂದರ್ಯ, ಯೌವ್ವನ ಎಲ್ಲವನ್ನು ಇಲ್ಲಿ ಲೇಖಕರು ಪ್ರೇಮಕತೆಯ ಮೂಲಕ ಸ್ವಾತಂತ್ರ್ಯ ವೀರನೊಬ್ಬನ ಪ್ರಾಣಾರ್ಪಣೆಯನ್ನು ಹೇಳಿಸುತ್ತಾ ಹೋಗುತ್ತಾರೆ.

"ಅದ! ಅಗಸ್ಟ ಚಳವಳಿ. ಸರ್ಕಾರವನ್ನು ಓಡಿಸಿ ಬಿಡಬೇಕು ಇಲ್ಲಾ ಸಾಯಬೇಕು ಅಂತ ಅಪ್ಪಣೆ ಕೊಟ್ಟಿದ್ದ ಗಾಂಧೀ ಮಹಾತ್ಮ. ನಿನಗೂ ಗೊತ್ತೈತೆಲ್ಲ. ನಮ್ಮೂರಿಗೆ ಚಳುವಳಿ ಅಂದರೆ ಏನೂ ಹೊಸದಲ್ಲ. ಕಾಂಗ್ರೆಸ್ ಅಂದರೆ ಪಂಚಪ್ರಾಣ ಹಳ್ಳಿಯವರಿಗೆಲ್ಲಾ. ಇಲ್ಲೂ ಮಂದಿ ತಯಾರಾದರು. ಮೂರು ದಿನದೊಳಗ ಬೆಳಗಾವಿ ರಸ್ತೇಮ್ಯಾಲಿನ ತಾರ ತಂತಿ, ಕಂಬ ಎಲ್ಲಾ ಕಡಿದು ಸುಟ್ಟು ಬಿಟ್ಟರು. ಹಳ್ಳಿಯೊಳಗ ದಿನಾಗಲೂ ಮೆರವಣಿಗೇನು, ಸಭಾ ಏನು, ಹುರುಪೇನು ಎಲ್ಲಾ ಜೋರಾಗಿ ನಡೀತಿತ್ತು. ಈ ಕೆಲಸಕ್ಕೆಲ್ಲಾ ಯಾರು ಮುಂದಾಗಿದ್ದರು ಗೊತ್ತೇನು ನಿನಗೆ?" (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಅವನೇ ಸತ್ಯವಾನ ಎಂಬ ಹೆಮ್ಮೆಯನ್ನು ಸಾವಿತ್ರಿ ತೋರ್ಪಡಿಸುತ್ತಾಳೆ. ಅವನ ಚಾಲಾಕತನ, ಹುರುಪು ಹೇಳುತ್ತಾ ಹೋಗುತ್ತಾಳೆ.

ಇಲ್ಲಿ ವ್ಯಕ್ತವಾದುದು ಕೇವಲ ಒಂದು ಹಳ್ಳಿಯ ಒಬ್ಬನ ಸಾಹಸ, ಧೈರ್ಯ ಮಾತ್ರವಲ್ಲ. ಇಡೀ ಭಾರತದ ಹಳ್ಳಿಗಳಲ್ಲಿ ಯುವ ಸಮುದಾಯವು 'ಗಾಂಧೀ ಮಹಾತ್ಮ'ನ 'ಮಾಡು ಇಲ್ಲವೆ ಮಡಿ' ಎಂಬ ಒಂದೇ ಮಾತಿಗೆ ಭಾರತಕ್ಕೆ ಭಾರತವೇ ಎದ್ದು ನಿಂತಿತ್ತು. ಸತ್ಯವಾನ್‌ನು ಈ ಕಥೆಯಲ್ಲಿ ಭಾರತದ ಯುವ ಸಮುದಾಯವನ್ನು ಪ್ರತಿನಿಧಿಸುತ್ತಾನೆ. ಹೀಗೆ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದ ಎಷ್ಟೋ ಯುವಕರು ತಮ್ಮ ತವರಿಗೆ ಮರಳಿದ್ದು ಕಡಿಮೆಯೇ. ಹಳ್ಳಿ ಹಳ್ಳಿಗಳಲ್ಲಿ ಇಂಥ ಯುವಕರ ಕ್ಷೇಮ ಬರುವಿಕೆಗಾಗಿ ಅನೇಕ ಹರಕೆಗಳನ್ನು, ವ್ರತಗಳನ್ನು ಹೊತ್ತುಕೊಂಡ ಅಕ್ಕ, ತಂಗಿ, ತಾಯಿ, ಹೆಂಡತಿ, ಪ್ರೇಯಸಿಯರು ಕಡಿಮೆ ಇರಲಿಲ್ಲ. ಇಲ್ಲಿಯೂ ಸಾವಿತ್ರಿ ಸತ್ಯವಾನನ ಸಲುವಾಗಿ "ನನ್ನ ರಕ್ತ ಎಲಾ ಕುಡಿ ದೇವರ. ಆದರ ನನ್ನ ಸತ್ಯವಾನನ ರಕ್ತಾ ಉಳಿಸು" (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಅಂತ ಬೋರಾಡಿ ಅಂಗಲಾಚಿ ಬೇಡಿಕೊಳ್ಳುವುದು ಕರುಣಾಮಯವಾಗಿದೆ. ಅಳುವ ಸಾವಿತ್ರಿಯಲ್ಲಿ ಸಾವಿನ ಧಾರುಣತೆಯನ್ನು ಕಣ್ಣಾರೆ ಕಂಡಂತೆ ಲೇಖಕರು ಬಿತ್ತುತ್ತಾರೆ.

ಪ್ರಗತಿಶೀಲ ವಿಚಾರಧಾರೆಗಳನ್ನು ಲೇಖಕರು ಭಾಗಿರಥಿಯ ಮೂಲಕ; "ನಿನ್ನೆ ರಾತ್ರಿ ಒಂದು ಕನಸು ಬಿದ್ದಿತ್ತು ಸಾವೂ. ಕನಸಿನಾಗ ಯಮಧರ್ಮರಾಜ ಬಂದಿದ್ದ. ಸಾವಿತ್ರಿಯ ಸತ್ಯವಾನ ನನ್ನ ನಿನ್ನ ಹೊಟ್ಟೆಯೊಳಗ ಹಾಕಿದ್ದೇನೆ. ಅವಳ ಸತ್ಯವಾನ ಅವ. ನೆನಪಿರಲಿ ಅಂತ ಹೇಳಿಹೋದ.." (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭-೨೪೯.) ಎಂದು ಹೇಳಿಸುತ್ತಾರೆ. ಐದು ತಿಂಗಳಲ್ಲಿ ತನ್ನ ಸತ್ಯವಾನ ಕೂಸಾಗಿ ಮತ್ತೆ ತನ್ನ ಗೆಳತಿಯ ಹೊಟ್ಟೆಯಲ್ಲಿ ಹುಟ್ಟಿ ಬರುವನೆಂಬ ಭರವಸೆಯಲ್ಲಿ ಮತ್ತಷ್ಟು ಕಾತುರಳಾಗಿ ಕಾಯುತ್ತಾಳೆ. ಆದರೆ ಭಾಗಿರಥಿಯ ಹೊಟ್ಟೆ ಇಳಿದ ಸುದ್ದಿ ಕೇಳುತ್ತಿದ್ದಂತೆ "ಹೊಟ್ಟೆ ಇಳೀತು? ಇನ್ನು ನನ್ನ ಸತ್ಯವಾನ್ ಬರೂದಿಲ್ಲ ಹಾಂಗಾದರ?" (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಎಂದವಳು ಸತ್ಯವಾನನನ್ನು ಹಿಂಬಾಲಿಸಿಕೊಂಡು ಹೋಗಿದ್ದಳು. ಒಂದು ಕಡೆ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಮಡಿದ ಸತ್ಯವಾನನ ಚಿತ್ರಣವಿದ್ದರೆ ಮತ್ತೊಂದು ಕಡೆ ಅದೇ ಸತ್ಯವಾನನ ನೆನಪಿನಲ್ಲಿ ಮನೋವೇದನಗೆ ಬಲಿಯಾಗಿ ಹೋದವಳು ಸಾವಿತ್ರಿ.

ಕಥೆ ಕಟ್ಟುವ ಕಲೆ ಕಟ್ಟೀಮನಿಯವರಿಗೆ ಕರಗತವಾಗಿದೆ, ಅವರು ಹೆಣ್ಣುಮಕ್ಕಳ ಕೈ ಕಸೂತಿಯಂತೆ ಕಥೆ ಹಣೆಯುತ್ತಾರೆ. ಪ್ರಸ್ತುತ ಕಥೆಯ ಭಾಷೆ-ಶೈಲಿ -ತಂತ್ರಗಳನ್ನು ಗಮನಿಸಿದರೆ ಸಮೃದ್ಧವಾಗಿ ಬೆಳೆದ ಹತ್ತಿಯನ್ನು ಬಿಡಿಸುವಂತೆ ನಮಗರಿವಾಗುತ್ತದೆ. ಈ ಕಥೆಯ ಶಂಕರ ಕಥೆಗಾರರ ಅಚ್ಚುಮೆಚ್ಚಿನ ಪಾತ್ರ. ಆ ಪಾತ್ರದ ಮೂಲಕ ಇಡಿ ಕಥೆಗೆ ಕಥೆಯಲ್ಲಿನ ಹೋರಾಟದ ಭಾವಕ್ಕೆ ಜೀವ ತೇಯುತ್ತಾರೆ. ಕಟ್ಟಿಮನಿಯವರ ಜಾಯಮಾನಕ್ಕೆ ತುಸು ಒಗ್ಗುವಂಥದ್ದು. ಅವರ

ಬದುಕಿನ ಹೋರಾಟಗಾರರು ಹಾಗೂ ಕಥೆಯಲ್ಲಿನ ಅನೇಕ ಪಾತ್ರಗಳು ಕಟ್ಟಿಮನಿಯವರ ವ್ಯಕ್ತಿತ್ವಕ್ಕೆ ತುಸು ಸಾಮ್ಯ ಕಾಣುತ್ತದೆ.

ಪ್ರಗತಿಶೀಲ ಕಥೆಗಳು ಬಡತನ, ಹಸಿವು, ವೇಶ್ಯಾವಾಟಿಕೆ, ಕೂಲಿ ಕಾರ್ಮಿಕರ ಶೋಷಣೆ ಸೇರಿದಂತೆ ಮೊದಲಾದ ಸಾಮಾಜಿಕ ಸಮಸ್ಯೆಗಳ ಬಗ್ಗೆ ಹೆಚ್ಚಿನ ಅಭಿವ್ಯಕ್ತಿ ನೀಡಿರುವುದರಿಂದ ಇದರ ಬಗ್ಗೆ ಪ್ರತ್ಯೇಕವಾದ ಅಧ್ಯಯನ ಮಾಡಬಹುದಾದ ಸಾಧ್ಯತೆ ಇದೆ. ಬಹುತೇಕ ಕಥೆಗಳಲ್ಲೂ ಹೆಚ್ಚಾಗಿ ಮೇಲ್ವರ್ಗದವರ ಪ್ರೇರಕರಾಗಿ ಭಾಷಣ–ಮಾರ್ಗದರ್ಶನದ ಮೂಲಕ ರೂಪರೇಷೆಗಳನ್ನು ಹಾಕಿಕೊಟ್ಟರೆ, ಹೋರಾಟದ ಅಖಾಡಕ್ಕೆ ಇಳಿದವರಲ್ಲಿ ಕೃಷಿಕರು, ಮಹಿಳೆಯರು, ಕೆಳವರ್ಗದವರೇ ಹೆಚ್ಚಾಗಿದ್ದಾರೆ. ಈ ಹಿನ್ನೆಲೆಯಲ್ಲಿ ಅಧ್ಯಯನ ನಡೆಸಬಹುದಾಗಿದೆ.

### ಬಲಿ: ೧೯೪೨

೧೯೪೨ ಅಗಸ್ಟ ೧೧ ರಿಂದ ಆರಂಭವಾದ ಕಥೆ ದಿನಚರಿಯಂತೆ ಮುಂದುವರೆಯುತ್ತದೆ. ಅಗಸ್ಟ ೯ರ ಘಟನೆ ಮತ್ತೆ ಇಲ್ಲಿ ನೆನಪಿಸುತ್ತಾರೆ. ಇಲ್ಲಿಯೂ ಮಾಡಿರಿ ಮಡಿಯಿರಿ, ಬಲಿದಾನ, ತೊಲಗಿರಿ, ಸಂಗ್ರಾಮ ಪದಗಳೇ ರಿಂಗಣಿಸುತ್ತವೆ. "ಸ್ವಾತಂತ್ರ್ಯಕ್ಕಾಗಿ ಸಂತೋಷದಿಂದ ಪ್ರಾಣಾರ್ಪಣ ಮಾಡಿದ ವೀರಾಧಿವೀರರ ನಾಡಿನಲ್ಲಿ ನಾವು ಹುಟ್ಟಿದ್ದೇವೆ. ಈಗ ನಾವು ಹೇಡಿಗಳಾಗಬಾರದು. ನಮ್ಮ ಪೂರ್ವಜರ ಉಜ್ವಲ ಇತಿಹಾಸಕ್ಕೆ, ಅವರ ಸ್ಮರಣೆಗೆ ಕಳಂಕ ಹಚ್ಚಬಾರದು" (ಬಸವರಾಜ ಕಟ್ಟೀಮನಿ, ೨೦೧೪, ಪುಟ–೧೯೭.) ಹೊಸ ತಲೆಮಾರಿನ ಯುವ ಸಮುದಾಯದ ಸ್ವಾತಂತ್ರ್ಯ ಜ್ವಾಲೆಯನ್ನು ಕಟ್ಟೀಮನಿಯವರು 'ಶಂಕರನ' ಮೂಲಕ ಹೊರಹಾಕಿದ್ದಾರೆ. ಅವರ ಸಮರ್ಥ ಲೇಖನಿಯಲ್ಲಿ ಮೂಡಿ ಬಂದ ಅನೇಕ ಕಥೆಗಳಲ್ಲಿ ಇದು ಅತ್ಯಂತ ಹೃದಯ ಸ್ಪರ್ಶಿಯೂ ಕಲಾತ್ಮಕವೂ ಆದುದು. 'ಬಲಿ' ಕಥೆಯಲ್ಲಿ ಹೆಣೆಯಲಾದ ತಂತ್ರ, ನಿರೂಪಣೆ, ಸಂವಾದ, ಸನ್ನಿವೇಶ, ಪಾತ್ರಚಿತ್ರಣ ಒಂದಕ್ಕೊಂದು ಪೂರಕವಾಗಿ ಸಾಮರಸ್ಯವಾಗಿ ಬೆರೆತು ಅಪೂರ್ವವಾದ ಪರಿಣಾಮವನ್ನುಂಟು ಮಾಡುವುದರಲ್ಲಿ ಸಂಪೂರ್ಣ ಯಶಸ್ವಿಯಾಗಿವೆ ಎಂಬ ವಿಮರ್ಶಕರ ಮಾತುಗಳು ಓದುವಾಗ ಸಹೃದಯನಿಗೆ ಸಹಜವೆನಿಸುತ್ತವೆ.

"ಓದಿಗೆ ತಿಲಾಂಜಲಿಯಿತ್ತು ಅಕ್ಕರೆಯ ತಂದೆ ತಾಯಿಗಳ ಮಮತೆಯ ಬಂಧನವನ್ನು ಬದಿಗೊತ್ತಿ ಬಾಪೂ ಕರೆಗೆ ಓಗೊಟ್ಟು 'ಕ್ವಿಟ್ ಇಂಡಿಯಾ' ಚಳುವಳಿಯಲ್ಲಿ ಭಾಗವಹಿಸಿ ಸಹೋದ್ಯೋಗಿಗಳಿಗೆ ಸ್ಫೂರ್ತಿಯ ಕೇಂದ್ರವಾಗಿ ಆದರ್ಶದ ಅಣ್ಣನಾಗಿ ಎಂತಹ ಸಂದಿಗ್ಧ ಪರಿಸ್ಥಿತಿಯಲ್ಲೂ ಮನಸ್ಥೈರ್ಯವನ್ನು ಕಳೆದುಕೊಳ್ಳದೆ ಧೀರಪುರುಷನಾಗಿ ಮೆರೆದು ಪೋಲಿಸರ ಅತ್ಯಾಚಾರಕ್ಕೆ ಈಡಾಗಿ ಅಸುನೆತ್ತ ಬಾಲ ಅಭಿಮನ್ಯುವಿನೊಬ್ಬನ ದುರಂತ ಕಥೆಯಿದು" (ದೇಜಗೌ

ಮತ್ತು ಸಿ.ಪಿ.ಕೆ., ೧೯೬೯, ಪುಟ-೧೧೩.) ಎಂದು ಜೆ.ಎಚ್. ಲಕ್ಕಪ್ಪಗೌಡ ಅವರು ವಿಮರ್ಶಿಸಿಸುತ್ತಾರೆ.

ಇಲ್ಲಿ ಕಥೆಯು ಅಗಸ್ಟ ಹದಿಮೂರು, ಅಗಸ್ಟ ಇಪ್ಪತ್ತು, ಅಗಸ್ಟ ಇಪ್ಪತ್ತೈದು, ಸೆಪ್ಟಂಬರ್ ಎಂಟು, ಅಕ್ಟೋಬರ್ ಹದಿನೈದು, ಅಕ್ಟೋಬರ್ ಇಪ್ಪತ್ತು, ಅಕ್ಟೋಬರ್ ಇಪ್ಪತ್ಮೂರು, ಅಕ್ಟೋಬರ್ ಮೂವತ್ತು ಹೀಗೆ ದಿನಚರಿಯ ತಂತ್ರದಲ್ಲಿ ಹಂತ ಹಂತವಾಗಿ ಕಥೆಯನ್ನು ಕಟ್ಟಿದ ಲೇಖಕರು ಕುತೂಹಲವನ್ನು ಕೆರಳಿಸುತ್ತಾ ಶಂಕರನನ್ನು ಆದರ್ಶ ಮೂರ್ತಿಯಾಗಿ ರೂಪಿಸುತ್ತಾರೆ. ಅವನ ಸಾವು ಯಾರೂ ತುಂಬಲಾರದ ಸಂಪತ್ತಾಗುತ್ತದೆ. ಶಂಕರನು ನೆಚ್ಚಿನ ನಾಯಕ, ಪ್ರೀತಿಯ ಬಂಧು, ನಾಡಿನ ಆದರ್ಶ ಮೂರ್ತಿ, ಕರ್ನಾಟಕದ ಕಣ್ಮಣಿಯಾಗಿ ನೆನಪು ಮಾತ್ರ ಕೊನೆಗೆ ಉಳಿಯುತ್ತದೆ.

**ಅಜ್ಞಾತವಾಸಿ**

ಹಿಂಸೆ, ದಬ್ಬಾಳಿಕೆ ಆದರೆ ಇಲ್ಲಿ ಪುರಷನ ಮೇಲಲ್ಲ ಮಹಿಳೆಯ ಮೇಲೆ. ಕಥೆ ತೆರೆದುಕೊಳ್ಳುವುದೇ ಹೊಡಿ, ಬಡಿ, ಸೆದೆಬಡಿ, ಸಾಯಿಸು ಎನ್ನುವ ಏಟು, ಅತ್ಯಾಚಾರ, ರಕ್ತಪಾತಗಳ ದೃಶ್ಯಗಳನ್ನು ಕಣ್ಣಿಗೆ ಕಟ್ಟುವಂತೆ ಸುರುವಾಗುತ್ತದೆ. ಕಥೆಯ ನಾಯಕಿ ನಾಗಮ್ಮ ತುಂಬಾ ಸ್ವಾಭಿಮಾನಿ ಹೆಂಗಸು. ಅವಳು ಭಾರತೀಯ ನಾರಿಯ ಪ್ರತೀಕ. ದೇಶದ ತುಂಬ ಬೀಸಿದ ಸ್ವಾತಂತ್ರ್ಯ ಬಿಸಿಗಾಳಿ ಅಜ್ಞಾನ, ಮೌಢ್ಯ ಅನಕ್ಷರತೆ ದಾರಿದ್ರ್ಯಗಳಲ್ಲಿ ಮುಳುಗಿದ ಸಾಮಾನ್ಯನನ್ನು ಬಡಿದೆಬ್ಬಿಸಿದ ಕಾಲವದು. ಕಥಾ ನಾಯಕಿ ತನ್ನ ಗಂಡನನ್ನು ಕುರಿತು "ಹೇಳು ಎಲ್ಲಿದಾನೆ ಆ ನಿನ್ನ ಗಂಡ? ಬಂಡ ಎಲ್ಲಿ ಅಡಗಿದಾನೆ ಹೇಡಿಯ ಹಾಗೆ?" ಎಂದು ಪ್ರಶ್ನಿದ ದಫೇದಾರನಿಗೆ "ಯಾರಿಗೆ ಭಂಡ ಅಂತಿಯೋ ಷಂಡಾ! ಹೆಂಗಸರ ಮ್ಯಾಲೆ ಕೈ ಎತ್ತುವ ನಿಮ್ಮಂಥ ಹೇಡಿಗಳಂಥವನಲ್ಲ ನನ್ನ ಗಂಡ! ಥೂ! ನಿಮ್ಮ ಮುಖಕ್ಕೆ ಬೆಂಕಿಹಾಕಲಿ! ನಾಚಿಕೆಯಾಗೋದಿಲ್ಲವೆ ನಿಮಗೆ?" (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಎಂದು ಸಿಡಿದೇಳುತ್ತಾಳೆ. ಅದುವರೆಗೂ ತಡೆದುಕೊಂಡಿದ್ದ ತನ್ನ ಸ್ವಾಭಿಮಾನದ ಕೆಚ್ಚನ್ನು ಹೊರಹಾಕುತ್ತಾಳೆ.

ಗಂಡ-ಹೆಂಡತಿ ದಾಂಪತ್ಯ ಜೀವನದ ಜೊತೆ ಸ್ವಾತಂತ್ರ್ಯ ಪ್ರೇಮ, ದೇಶಾಭಿಮಾನ ಬೆಸದುಕೊಂಡಿದೆ. ಕಟ್ಟೀಮನಿಯವ ಕಥೆಗಳಲ್ಲಿ ಒಂದು ಸಂಸಾರಿಕ ಕುಟುಂಬವು ಹೇಗೆ ತನ್ನ ದೇಶಕ್ಕಾಗಿ, ತನ್ನ ಸ್ವಾಭಿಮಾನಕ್ಕಾಗಿ ಸಿಡಿದೇಳುತ್ತದೆ ಎಂಬುದನ್ನು ಬಹುತೇಕ ಕಥೆಗಳು ತಿಳಿಸುತ್ತವೆ. ಅಲ್ಲಿ ಬರಿ ಒಂದು ಕುಟುಂಬ ಮಾತ್ರವಲ್ಲ ಇಡೀ ದೇಶವನ್ನೇ ಪ್ರತಿನಿಧಿಸುವಂತಹ ಸಾಂಕೇತಿಕ ಚಿತ್ರಣಗಳನ್ನು ಕಟ್ಟೀಮನಿಯವರು ಕಟ್ಟುತ್ತಾ ಹೋಗುತ್ತಾರೆ. ಪ್ರಸ್ತುತ 'ಅಜ್ಞಾತವಾಸಿ'

ಕಥೆಯಲ್ಲಿ ನಾಗಮ್ಮ "ತನಗೊದಗಿದ ಅಸಹನೀಯ ಸಂಕಟದಲ್ಲೂ ಆಕೆ ಪತಿಗಾಗಿ ಮರುಗುತ್ತಾಳೆ; ಅವನನುಭವಿಸುತ್ತಿರಬಹುದಾದ ಕಷ್ಟಗಳನ್ನು ಕಲ್ಪಿಸಿಕೊಂಡು ತಲ್ಲಣಿಸುತ್ತಾಳೆ. ನಿಶ್ಶಕ್ತಿಯಿಂದ ಶರೀರ ಬೆಂಡಾಗಿದ್ದರೂ ತನ್ನಿನಿಯನಿಗಿಲ್ಲದ ರೊಟ್ಟಿ ತುಂಡನ್ನು ತಿನ್ನಲು ಅವಳಿಗೆ ಮನಸ್ಸಾಗದು. ಅವನ ದರ್ಶನಕ್ಕಾಗಿ ಅವನ ಕ್ಷೇಮಕಾತರಳಾಗಿ ಜೀವ ಹಿಡಿದಿರುತ್ತಾಳೆ. ಅದು ಕೈಗೂಡಿದಾಗ ಅವನ ಜೀವ ಸಂರಕ್ಷಣೆಮಾಡಿಕೊಳ್ಳಬೇಕೆಂದು ಆರ್ತಳಾಗಿ ಬೇಡಿ ಪರಮ ಸಂತೃಪ್ತಿಯಿಂದ ಅವನ ತೊಡೆಯಮೇಲೆ ತಲೆಯಿಟ್ಟು ಅಸು ತೊರೆಯುತ್ತಾಳೆ"(ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪುಟ-೧೧೩.) ಎಂದು ಮನೋಜ್ಞವಾಗಿ ಎಚ್.ಜೆ. ಲಕ್ಕಪ್ಪಗೌಡ ಅವರು ವಿಮರ್ಶಿಸಿದ್ದಾರೆ. ಕಥೆಯಲ್ಲಿ ದೇಶಪ್ರೇಮ ಮತ್ತು ದಂಪತಿಗಳ ಪರಸ್ಪರ ಅನುರಾಗವು ಜೊತೆ ಜೊತೆಗೆ ವ್ಯಕ್ತಗೊಂಡಿರುವುದು ಕಟ್ಟೀಮನಿಯವರ ಲೇಖನಿಯ ಅದ್ಭುತ ಸಾಮರ್ಥ್ಯವಾಗಿದೆ.

ಸಾಮಾನ್ಯ ಸ್ತ್ರೀಯರೂ ಕೂಡ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡು ನೇರವಾಗಿ ಬ್ರಿಟೀಷ ಅಧಿಕಾರಿಗಳೆದುರು ಗಂಡುಗಚ್ಚೆ ಹಾಕಿ ಮಾತನಾಡಬಲ್ಲ ಎದೆಗಾರಿಕೆಯನ್ನು ಕಥಾ ನಾಯಕಿ ನಾಗಮ್ಮನ ಮಾತುಗಳಲ್ಲಿ ಕಾಣಬಹುದಾಗಿದೆ,

ಕಥೆ-ಕಾದಂಬರಿಗಳಲ್ಲಿ ಕೆಲವು ಸಲ ಪ್ರೇಮಿಗಳು ಜೊತೆಯಾಗಿ ಹೋರಾಡಿದ ಸಂದರ್ಭಗಳಿವೆ. ಗಂಡ ಬ್ರಿಟೀಷರ ಪರವಾದರೆ, ಹೆಂಡತಿ ಹೋರಾಟಗಾರರ ಪರವಾಗಿ ನಿಂತು ಸಹಕರಿಸಿದ ಅನೇಕ ಸಂದರ್ಭಗಳಿವೆ. ಅಂತರ್ಜಾತಿ ವಿವಾಹ, ಅದಕ್ಕೆ ವಿಶೇಷ ಹೋರಾಟವಾಗಲಿ, ಅಗಲಿಕೆ, ಪರಸ್ಪರ ತ್ಯಾಗ, ಗೂಢಚರ್ಯ ನಡೆಸುವುದು. ಇತ್ಯಾದಿ ನಡೆಯುತ್ತಲೆ ಇರುವುದನ್ನು ಈ ಕ್ಷೇತ್ರದಲ್ಲಿ ಅಧ್ಯಯನ ಕೈಗೊಳ್ಳಬಹುದು.

ಹೀಗೆ ನಾನು ಸಂಶೋಧನ ಸಂದರ್ಭದಲ್ಲಿ ಈ ಮೇಲೆ ತಿಳಿಸಿರುವ ಆಯಾಮಗಳ ಅಧ್ಯಯನ ಮಾಡಬಹುದೆಂಬ ಸಣ್ಣ ಸುಳಿವುಗಳನ್ನು ಪಡೆದುಕೊಂಡಿದ್ದೇನೆ. ಪ್ರಗತಿಶೀಲ ಕಥನ ಸಾಹಿತ್ಯದಲ್ಲಿ ಹೋರಾಟದ ಹೊರತಾಗಿಯೂ ಇನ್ನೂ ಅನೇಕ ಆಯಾಮಗಳು ಅಧ್ಯಯನಕ್ಕಾಗಿ ಕಾದಿರುವುದರಿಂದ. ಈ ಕ್ರಮದಲ್ಲಿ ಮಾಡಬಯಸುವವರಿಗೆ ಇನ್ನೂ ಸಾಕಷ್ಟು ಫಲಿತಗಳು ದಕ್ಕಬಹುದೆಂಬುದು ನನ್ನ ಆಶಯ.

**ಮೂವರು ಸೈನಿಕರು**

'ಸೆರೆಯಿಂದ ಹೊರಗೆ' ಎಂಬ ಕಥಾಸಂಕಲನವು ೧೯೪೪ರಲ್ಲಿ ಪ್ರಕಟಗೊಂಡಿತು. ಇದರಲ್ಲಿ ಒಟ್ಟು ಹತ್ತು ಕಥೆಗಳಿವೆ. ಸ್ವಾತಂತ್ರ್ಯದ ತುಡಿತವನ್ನು, ದೇಶಾಭಿಮಾನವನ್ನು ತೊರುವ

'ಮೂವರು ಸೈನಿಕರು' ಕಥೆಯು ಇಲ್ಲಿ ಪ್ರಮುಖವಾಗಿ ಅಧ್ಯಯನ ವಿಶ್ಲೇಷಣೆಗೆ ಒಳಗು ಮಾಡಲಾಗಿದೆ.

ಕಟ್ಟೀಮನಿಯವರ ಮತ್ತೊಂದು ಕಥೆಗೆ ಅಗಷ್ಟ ಒಂಭತ್ತು ಚಳುವಳಿ ಕಾರಣವಾಯಿತು. ಅದರು ಪ್ರಭಾವದಿಂದ ಹುಟ್ಟಿಕೊಂಡ ಕಥೆ 'ಮೂವರು ಸೈನಿಕರು'. ಮಹಾದೇವಪ್ಪ ಮೈಲಾರ, ತಿರುಕಪ್ಪ ಮಡಿವಾಳರ ಮತ್ತು ವೀರಯ್ಯ ಹಿರೇಮಠ ಎಂಬುವವರೇ ಆ ಮೂವರು ಸೈನಿಕರು. ಮಹಾದೇವಪ್ಪ ಮೊದಲಿನಿಂದ ಸೈನಿಕ. ಗಾಂಧೀಜಿ ಆಶ್ರಯದಲ್ಲಿ ಶಿಸ್ತಿನಿಂದ ಬೆಳೆದು, ಶಿಕ್ಷಣ ಪಡೆದವನು. ದಂಡಿ ಸತ್ಯಾಗ್ರಹದಲ್ಲಿ ಭಾಗವಹಿಸಿ ಚಳುವಳಿಯ ಸವಿಯನ್ನು ಉಂಡವನಾಗಿದ್ದ. ಇದರ ಪ್ರಭಾವದಿಂದಾಗಿ ತನ್ನ ಗ್ರಾಮದಲ್ಲಿ ಸ್ವಾತಂತ್ರ್ಯಕ್ಕಾಗಿ ಒಂದು ಸೈನಿಕರ ಪಡೆಯನ್ನು ಸಿದ್ಧಪಡಿಸಿದ. ಅವನ ಜೊತೆಗಾರರಲ್ಲಿ ತಿರುಕಪ್ಪ ಮತ್ತು ವೀರಯ್ಯ ಎಡಗೈ-ಬಲಗೈ ಆಗಿದ್ದರು. ಇವರಿಗೆ ಬ್ರಿಟೀಷ್ ಸರ್ಕಾರದ ವಿರುದ್ಧ ಗೆರಿಲ್ಲಾ ಮಾದರಿ ಯುದ್ಧಗಳನ್ನು ಮಾಡಿ ಸರ್ಕಾರದ ಖಜಾನೆಯನ್ನು ಕೊಳ್ಳೆ ಹೊಡೆಯುವುದು, ದೋಚುವುದು, ಸರ್ಕಾರಕ್ಕೆ ಅಘಾತವನ್ನುಂಟು ಮಾಡುವ ಕೆಲಸಗಳಲ್ಲಿ ತೊಡಗಿದ್ದರು. ಈ ಮಧ್ಯ ಮಹಾದೇವನಿಗೆ ಗಾಂಧೀಜಿಯ ಅಹಿಂಸೆಯಲ್ಲಿ ಅಪಾರವಾದ ಭಕ್ತಿ, ಗೌರವ. ಮಹಾದೇವನು ಸರ್ಕಾರಿ ಪೆಟ್ಟಿಗೆಯನ್ನು ಕದ್ದೊಯ್ಯುವಾಗ ಪೊಲೀಸ್ ಸಿಪಾಯಿಯೊಬ್ಬ ಗುಂಡು ಹಾರಿಸಿಬಿಡುತ್ತಾನೆ. ಅದು ತಾಕಿತು. ಕುಸಿದು ಬಿದ್ದರೂ ತನ್ನ ಜೊತೆಗಾರರಿಗೆ "ಕೈ ಹಚ್ಚ ಬೇಡಿರಿ ಆ ಪೋಲೀಸನಿಗೆ. ಎಂಥ ಪ್ರಸಂಗದಲ್ಲೂ ಅಹಿಂಸೆಯನ್ನು ನಾವು ಬಿಡಕೂಡದು" (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಎಂದು ಅವರಿಂದ ಹಿಂಸೆಗೆ ಪ್ರತಿಹಿಂಸೆಯಾಗುವದನ್ನು ತಡೆಯುತ್ತಾನೆ. ಇದು ಗಾಂಧೀಜಿಯಿಂದ ಕಲಿತ ಪಾಠ. ತಮ್ಮ ನಾಯಕ ಮಹಾದೇವನ ಮಾತು ಪಾಲಿಸಿದ ವೀರಯ್ಯ ಮತ್ತು ತಿರುಕಪ್ಪ ತಮ್ಮ ಹೋರಾಟವನ್ನು ಮುಂದುವರೆಸಿದರು. ಸ್ವಲ್ಪ ಹೊತ್ತಿಗೆ ಯಾವ ಕಡೆಯಿಂದಲೋ ಗುಂಡು ಬಂದು ದೇಹಹೊಕ್ಕು ನೆಲಕ್ಕುರಳಿಸಿದವು. ಆಗಲೂ ಅವರ ಜಪ ಒಂದೇ ಆಗಿತ್ತು 'ನಾವು ಮಾಡುವೆವು... ಇಲ್ಲ ಮಡಿಯುವೆವು'!

ಪ್ರಸ್ತುತ ಕಥೆಯಲ್ಲಿ ಪರಸ್ಪರ ಸ್ನೇಹಿತರ ಒಂದು ದೃಢ ಸಂಕಲ್ಪವನ್ನು ಹೊಂದಿ ಸ್ವಾತಂತ್ರ್ಯಕ್ಕಾಗಿ ಮಿಡಿಯುವ, ಪ್ರಾಣತ್ಯಾಗಕ್ಕೂ ಸಿದ್ಧರಾಗುವ ಸನ್ನಹತೆಯನ್ನು ಕಾಣುತ್ತೇವೆ. ಕಟ್ಟೀಮನಿಯವರ ಪ್ರಗತಿಶೀಲತೆ ಪ್ರತಿಪಾದನೆಯ ದಾರಿ ಇಲ್ಲಿ ಸುಲಭವಾಗಿ ಗೋಚರಿಸುತ್ತದೆ. ಅಹಿಂಸೆಗೆ ಬದ್ಧನಾಗಿದ್ದ ಮಹಾದೇವನು ತನ್ನ ಉಳಿದ ಸ್ನೇಹಿತರಿಗೂ ಅದನ್ನೇ ಪಾಲಿಸಲು ಹೇಳಿದ. ಹೀಗೆ ಕಥೆ ಕೊನೆ ಕೊನೆಯಲ್ಲಿ ಒಂದು ಆದರ್ಶವನ್ನು ಎತ್ತಿ ತೋರಿಸುತ್ತದೆ. "ಮೃತ್ಯುವಿನ ದವಡೆಯಲ್ಲೂ ಅಹಿಂಸೆಯನ್ನು ಪಾಲಿಸಿದ ರೋಮಾಂಚಕ ಸಂಗತಿ. ಮಾತು ಕಡಿಮೆ, ಆದರೂ ಮೊನಚು ಹೃತ್‌ಸ್ಪರ್ಶಿ. ಆ ಧೈರ್ಯ ಆ ಸಾಹಸವನ್ನು ಕಂಡು

ಎಂಥವನಿಗಾದರೂ ಮೈ ಉಬ್ಬುತ್ತದೆ. ಪರಿಸರದ ಚಿತ್ರಣ ಮತ್ತಷ್ಟು ವಿವರವಾಗಿ ಸತ್ವಯುತವಾಗಿ ಇದ್ದಿದ್ದರೆ ಇದು ಮತ್ತಷ್ಟು ಕಲಾತ್ಮಕವಾದ ಕಥೆಯಾಗುತ್ತಿತ್ತು" (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು-೧೧೩.) ಎಂಬಂಥ ವಿಮರ್ಶೆಗಳು ಈ ಕಥೆಯ ಕುರಿತು ಹೊರ ಹೊಮ್ಮುತ್ತವೆ. ಇಲ್ಲಿ ಎಷ್ಟೇ ನುರಿತ ಲೇಖಕನಿದ್ದರು ಅವನಿಗೆ ಕಥೆಯ ಮುಕ್ತಾಯದ ಅವಸರವು ಎದ್ದು ಕಾಣುತ್ತದೆ.

**ಸುಂಟರಗಾಳಿ**

ಸುಂಟರಗಾಳಿ ಕಥಾ ಸಂಕಲನದಲ್ಲಿ ಒಟ್ಟು ಏಳು ಕಥೆಗಳಿದ್ದು ಅದರಲ್ಲಿ ಸ್ವಾತಂತ್ರ್ಯಕ್ಕೆ ಸಂಬಂಧಿಸಿದ ಎರಡು ಕಥೆಗಳನ್ನು ನೋಡಬಹುದು. ಅವುಗಳೆಂದರೆ 'ಸುಂಟರಗಾಳಿ' ಮತ್ತು 'ಗೂಢಚಾರಿಣಿ'. ೧೯೫೭ರಲ್ಲಿ ಪ್ರಕಟಗೊಂಡ ಈ ಕಥೆಗಳಲ್ಲಿ ಭಾರತ ಸ್ವತಂತ್ರ್ಯೋತ್ತರದಲ್ಲಿ ನಡೆದ ಘಟನೆಗಳನ್ನು, ಲೇಖಕರ ಅನುಭವಗಳನ್ನು ಆಧರಿಸಿದಂತಿವೆ. ಇಲ್ಲಿನ ಕಥೆಗಳಲ್ಲಿ ಗೋವಾ ವಿಮೋಚನ ಸಮರಗಳ ಚಟುವಟಿಕೆಗಳ ಪಕ್ಷಿನೋಟವನ್ನು ನಾವು ಗುರುತಿಸಬಹುದು. ಬಹು ವಿಭಿನ್ನ ನೋಟಗಳಲ್ಲಿ ಈ ಕಥೆಗಳನ್ನು ವಿಶ್ಲೇಷಿಸಬಹುದಾಗಿದ್ದರೂ ಇಲ್ಲಿ ಸ್ವಾತಂತ್ರ್ಯ ನೆಲೆಗಟ್ಟಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡಲಾಗಿದೆ.

ಪ್ರಸ್ತುತ ಕಥೆಯಲ್ಲಿ ಒಬ್ಬ ಸ್ತ್ರೀಯ (ರಮಾ) 'ಸುಂಟರಗಾಳಿ'ಯಂತೆ ಒಳೊಗೊಳಗೆ ಸುಳಿ ಸುಳಿದು ಗೋವಾ ವಿಮೋಚನಾ ಸಮರದಲ್ಲಿ ತಾನು ಹೇಗೆ ಚಿಂತಿಸಬಲ್ಲಳು ಎಂಬ ಸೂಕ್ಷ್ಮ ನೋಟವನ್ನು ಲೇಖಕರು ನೀಡುತ್ತಾರೆ. "ಬಾಂದಾ ಗಡಿಯಲ್ಲಿ ಪೋರ್ತುಗೀಸರ ಗೋಲಿಬಾರ್, ಮೂವರು ಸತ್ಯಾಗ್ರಹಿಗಳ ಮರಣ, ಹದಿಮೂರು ಜನರಿಗೆ ಗಾಯ" (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಎಂಬ ಸುದ್ಧಿಯು ಆಕಾಶವಾಣಿಯಿಂದ ಬಿತ್ತರಗೊಳ್ಳುತ್ತಲೇ ರಮಾಳಿಗೆ ತಾನು ಬೆಳಿಗ್ಗೆಯಿಂದ ಯಾವುದೋ ಒತ್ತಡಕ್ಕೆ ಬಿದ್ದಂತೆ ವರ್ತಿಸುವದು ನಿಂತಿತು. ಅವಳಿಗೆ ಮಾತ್ರವಲ್ಲ "ಅರ್ಧಗಂಟೆಯೊಳಗಾಗಿ ನಗರಕ್ಕೆ ಸ್ಮಶಾನ ಭೂಮಿಯ ಸ್ವರೂಪ ಬಂದಿತ್ತು" (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಎಂದರೆ ಆ ಘಟನೆ ಎಷ್ಟು ಪರಿಣಾಮಕಾರಿ ಎಂಬುದನ್ನು ಅರಿಯಬಹುದು. ರಕ್ತಕ್ಕೆ ಪ್ರತಿ ರಕ್ತ, ಕೊಲೆಗೆ ಪ್ರತಿ ಕೊಲೆ ಎಂದು ಸತ್ಯಾಗ್ರಹಿಗಳು ಮುನ್ನುಗ್ಗಿದಾಗ ಅವರನ್ನು 'ಕೋಳಿಯ ಮರಿಗಳನ್ನು ಕೊಲ್ಲುವಂತೆ ಕೊಲ್ಲಲಾಯಿತು' ಎಂದರೆ ನಗರಕ್ಕೆ ಅಕ್ಷರ ಸಹ ಗರ ಬಡಿದಂತಾಯಿತು.

ಎಂದೂ ಬೀಳದ ಮೇಲಿನ ಮೇಲಿನ ಗಂಡ ಗೋಪಿನಾಥನ ಭಾವಚಿತ್ರ ಕೆಳಕ್ಕೆ ಬಿದ್ದು ಅದರ ಗಾಜು ಒಡೆದು ಹೋಗಿದ್ದು ಆಕೆಗೆ ತುಂಬಾ ಸಂಶಯವನ್ನುಂಟು ಮಾಡುತ್ತದೆ. ಅದರ ಮಧ್ಯ ತನ್ನ ಬಾಲ್ಯ ಸ್ನೇಹಿತ ಮತ್ತು ತಂದೆಗೆ ಪರಿಚಯವಿದ್ದ ಅರವಿಂದನ ನೆನೆಪು

ಸುಂಟರಗಾಳಿಯಂತೆ ಸುಳಿಯುತ್ತದೆ. ಕಥೆಯ ಆರಂಭದಿಂದಲೂ ಲೇಖಕರು ಪ್ರೇಮ ಮತ್ತು ದೇಶಪ್ರೇಮವನ್ನು ಹೊಸೆಯುತ್ತಾ ಹೋಗುತ್ತಾರೆ. 'ರಮಾ' ಇಲ್ಲಿ ಒಂದು ಕೈಯನ್ನು ಪ್ರೇಮದತ್ತ ಮತ್ತೊಂದು ಕೈಯನ್ನು ದೇಶಪ್ರೇಮದತ್ತ ಚಾಚಿ ಸುಂಟರಗಾಳಿಯಂತ ನೆನಪುಗಳನ್ನು ಬಿಚ್ಚುತ್ತಾ ಹೋಗುತ್ತಾಳೆ. ಗಂಡನಾದ ಗೋಪಿನಾಥನಲ್ಲಿರುವ ದೇಶಪ್ರೇಮಕ್ಕೂ ಗೆಳೆಯ ಅರವಿಂದನಲ್ಲಿರುವ ದೇಶಪ್ರೇಮಕ್ಕೂ ತೌಲನಿಕತೆಯನ್ನು ತರುತ್ತಾಳೆ. ನಡು ನಡುವೆ ಗೋವಾ ವಿಮೋಚನೆಯ ಸಮರದ ಭೀಕರತೆಯನ್ನು, ಅದರಿಂದಾಗುವ ಅನಾಹುತ, ಸಾವು, ನೋವುಗಳನ್ನು ಮನೋಜ್ಞವಾಗಿ ಕಟ್ಟೀಮನಿಯವರು ಚಿತ್ರಿಸುತ್ತಾರೆ.

ಒಟ್ಟಿನಲ್ಲಿ ಗೋವಾ ವಿಮೋಚನೆಯ ಸಮರಕ್ಕೆ ಸಂಬಂಧಿಸಿದಂತೆ ಯುವಕನೊಬ್ಬ ದೇಶಕ್ಕಾಗಿ ಸಾಹಸ ಮನೋಭಾವ, ಪರಾಕ್ರಮಾನುಕಂಪಗಳಿಗೆ ಮಾರುಹೋಗಿ ತಂದೆ-ತಾಯಿಗಳ ಪ್ರತಿಭಟನೆಯನ್ನೂ ಲೆಕ್ಕಿಸದೆ ಮದುವೆಯಾಗಿ, ಕುಟುಂಬದ ಬಗೆಗಿನ ಅನಾಸಕ್ತಿಯಿಂದಾಗಿ ಬೇಸರ ಜಿಗುಪ್ಸೆಗಳಿಗೊಳಗಾದ ಕಥನವು ಇಲ್ಲಿದೆ.

**ಗೂಢಚಾರಿಣಿ**

ಗೋವಾದಲ್ಲಿ ಶಾಂತಾರಾಮ ಮತ್ತು ಮಂದಾಕಿನಿ ದಂಪತಿಗಳು. ಶಾಂತಾರಾಮ ಪೋರ್ಚುಗೀಸರ ಗೂಢಚಾರ. ಅವನನ್ನು ಗಂಡು ಸಿಗದೇ ಹೋದಾಗ ಅನಿವಾರ್ಯವಾಗಿ ಮಂದಾಕಿನಿ ಕಟ್ಟಿಕೊಳ್ಳುತ್ತಾಳೆ. ಅವಳಿಗೆ "ಶಾಂತಾರಾಮ ತನಗೆ ಅನುರೂಪನಾದ ಪರಿಯಾಗಿರಲಿಲ್ಲ" (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಎಂಬುದನ್ನು ಸೂಚಿಸುತ್ತಾ ಕಥೆಯು ಪ್ರಾರಂಭವಾಗುತ್ತದೆ. ಅವಳೋ "ಮೊದಲಿನಿಂದಲೂ ದೇಶಪ್ರೇಮಿಯಾದ ನಾನು, ಅಪ್ರತ್ಯಕ್ಷವಾಗಿಯಾದರೂ ದೇಶ ವಿರೋಧಿಯೆನಿಸಿಕೊಳ್ಳುವ ಇಂಥ ಮನುಷ್ಯನ ಹೆಂಡತಿಯಾಗಿ ಬಾಳಬೇಕಾಗಿ ಬಂದಿತಲ್ಲ..." (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಎಂದುಕೊಳ್ಳುತ್ತಿದ್ದಳು. ಇದು ಅವಳಲ್ಲಿ ಆಳವಾಗಿರುವದರಿಂದಲೋ ಏನೋ ಎಲ್ಲವನ್ನೂ, ಎಲ್ಲರನ್ನು ಸಂಶಯ ದೃಷ್ಟಿಯಿಂದಲೇ ನೋಡುತ್ತಿದ್ದಳು. ತನ್ನ ಮನೆಯ ಆಳು 'ತಾರಾ' ಒಂದು ವರ್ಷದಿಂದ ಮನೆಯಲ್ಲಿ ಕೆಲಸ ಮಾಡುತ್ತಿದ್ದರೂ ಅವಳ ಮೇಲೆ ಈಕೆಗೆ ಸಂಶಯ; "ಪೋರ್ಚುಗೀಸರ ಗೂಢಚಾರಿಣಿಯಾಗಿರಬಹುದೇ ಈಕೆ?" ಎಂದು ಗುಮಾನಿಗಳನ್ನು ಅವಳಲ್ಲಿ ಹುಟ್ಟಿಕೊಳ್ಳುತ್ತಿದ್ದವು.

ಗೋವಾ ವಿಮೋಚನಕ್ಕೆ ಸಂಬಂಧಿಸಿದಂತೆ ಕಟ್ಟೀಮನಿಯವರ ಎರಡನೆಯ ಕಥೆಯಿದು. ಗೋವಾದಲ್ಲಿ ಗೋಮಾಂತಕ ದಲ ಮತ್ತು ಸ್ವತಂತ್ರ ಗೋಮಾಂತಕ ದಲ ಎಂಬ ಎರಡು ದಲಗಳು ಪೋರ್ಚುಗೀಸರ ವಿರುದ್ಧ ಅನೇಕ ಕಾರ್ಯಾಚರಣೆಗಳನ್ನು ಮಾಡುತ್ತಿದ್ದರಿಂದ ಅವರ

ಚಟುವಟಿಕೆಗಳ ಮೇಲೆ ಅನೇಕ ಗೂಢಚಾರರನ್ನು ನೇಮಿಸಿದ್ದರು. ಇದು ಮಂದಾಕಿನಿಗೆ ಗೊತ್ತಿತ್ತು. ಆದರೂ ಗಂಡನ ಹೆಂಡತಿ ಭಾರತೀಯಳು ಹೀಗಾಗಿ ಪೋರ್ಚುಗೀಸರು 'ತಾರಾ'ಳನ್ನು ತನ್ನ ಗಂಡನ ಚಟುವಟಿಕೆಗಳನ್ನು ಅವಲೋಕಿಸಲು ಗೂಢಚಾರಿಣಿಯಾಗಿ ನೇಮಿಸಿರಬಹುದೇ ಎಂಬ ಸಂಶಯಗಳನ್ನು ತಲೆಯಲ್ಲಿ ತುಂಬಿಕೊಂಡಿರುತ್ತಾಳೆ. ಬರುಬರುತ್ತಾ ತಾನೇ ಒಬ್ಬ ಗೂಢಚಾರಿಣಿಯಂತೆ 'ತಾರಾ'ಳ ಹಿಂದು-ಮುಂದಿನ ಚರಿತ್ರೆಯನ್ನು ಬಿಡಿಸುತ್ತಾ ಹೋಗುತ್ತಾಳೆ. ಈ ತೊಳಲಾಟಕ್ಕೆ ಕಾರಣ ದೇಶ ಪ್ರೇಮದ ಉತ್ಕಟತೆ. ಮತ್ತೊಂದು ಕಡೆ ತನ್ನ ಗಂಡನ ನೌಕರಿ ಇದ್ದರು ಅದು ದೇಶದ್ರೋಹದ ಕೆಲಸ ಅದಕ್ಕೆ ಅವಳು ಬೆಲೆ ಕೊಡುವವಳಲ್ಲ.

ಅಚಾನಕ್ ಆಗಿ ಒಬ್ಬ ಕ್ರಾಂತಿಕಾರನ ಪರಿಚಯವಾಗುತ್ತದೆ ಅವಳಿಗೆ. "ನೀವು ಕ್ರಾಂತಿಕಾರನೇ ಆಗಿದ್ದ ಪಕ್ಷಕ್ಕೆ ತನ್ನ ಬಾಳು ಸಾರ್ಥಕವಾಗಬಹುದು; ದೇಶದ್ರೋಹಿಯಾಗಿ ಬದುಕುತ್ತಿರುವ ವ್ಯಕ್ತಿಯೊಬ್ಬನ ಹೆಂಡತಿಯಾಗಿ ತುಚ್ಛ ಜೀವನ ಸಾಗಿಸಿರುವ ತಾನು ಒಬ್ಬ ಸ್ವಾತಂತ್ರ್ಯವೀರನಿಗಾದರೂ ಸಹಾಯ ಮಾಡಿದ ಪುಣ್ಯ ಪಡೆದುಕೊಳ್ಳಬಹುದು..." (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಎಂಬಂಥ ಮಾತುಗಳು ಅವಲ್ಲಿನ ಉತ್ಕೃಷ್ಟ ಸ್ವಾತಂತ್ರ್ಯ ಸ್ವಾಭಿಮಾನವನ್ನು ಎತ್ತಿ ತೋರಿಸುತ್ತದೆ. ಇಲ್ಲಿ ಲೇಖಕರ ಪ್ರಗತಿಶೀಲ ತುಡಿತನ್ನು ನಾವು ಗುರುತಿಸಬಹುದು. ದೇಶಕ್ಕಾಗಿ ಸ್ವತಃ ಗಂಡನನ್ನೆ ದೂರುವಳು. 'ದೇಶ ಮೊದಲು ಕುಟುಂಬ ಆನಂತರ' ಎಂಬ ಧೋರಣೆಯನ್ನು ನಾವು ಮಂದಾಕಿನಿಯ ವ್ಯಕ್ತಿತ್ವದಲ್ಲಿ ಕಾಣಬಹುದು.

ಕ್ರಾಂತಿಕಾರನನ್ನು ಗುರುತಿಸಿದ ಮಂದಾಕಿನಿಗೆ "ಗೋವಾದ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ವೀರನೊಬ್ಬನನ್ನು ಉಳಿಸುವ ಪ್ರಸಂಗ ಬಂದಿತಲ್ಲಾ ಎಂದು ಹಿಗ್ಗು" (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭-೩೫೦.) ಆದರೆ ಗೂಢಚಾರಿಗಳಾದ ತಾರಾ ಮತ್ತು ಗಂಡನ ಭಯ ಅವಳಿಗೆ. "ಆ ಗೂಢಚಾರಿಣಿ ತಾರಾ... ಅವಳದು ಬೆಕ್ಕಿನಂಥ ಕುಟಿಲಬುದ್ಧಿ.... ತನ್ನ ಮುಖದಲ್ಲಿ ಕೊಂಚ ಬದಲಾವಣೆಯನ್ನು ಕಂಡ ಮಾತ್ರಕ್ಕೆ ಅವಳಿಗೆ ಸಂದೇಹ ಬರಬಹುದು" (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಎಂದು ಮತ್ತೆ ಅವಳನ್ನು ಸಂಶಯವಾಗಿ ಟೀಕಿಸುತ್ತಾಳೆ. "ತಾರಾ ಗೂಢಚಾರಿಣಿಯೆಂಬುದೇನೊ ನಿಜ. ಆದರಾಕೆ ಪೋರ್ಚುಗೀಸರ ಗೂಢಚಾರಿಣಿಯಲ್ಲ. ನಮ್ಮ ಗೂಢಚಾರಿಣಿ!" (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೯೭.) ಎಂದು ಕ್ರಾಂತಿಕಾರಿ ಹೇಳಿದಾಗ; ಕಥೆಗೆ ಮುಕ್ತಾಯದ ತಿರುವು ಮೂಡುತ್ತದೆ. ಇಲ್ಲಿ ಮಂದಾಕಿನಿಯ ಗೂಢಚಾರಿಣಿಯಂತೆ ಗೋಚರಿಸುತ್ತಾಳೆ. ತನಗೆ ಮೊದಲಿನಿಂದಲೂ ತಾರಾಳ ಬಗ್ಗೆ ಸಂಶಯವಿತ್ತು. ಅದು ಈಗ ಸ್ಪಷ್ಟವಾಯಿತು. ಅಷ್ಟೇ ಅಲ್ಲ ಅವಳು ಆ ಕ್ರಾಂತಿಕಾರಿಯನ್ನು ಮದುವೆಯಾಗುವ ಹುಡುಗಿ ಎಂಬುದು ತಿಳಿದಾಗ ಮತ್ತು

ಅವರನ್ನು ಪೋರ್ಚುಗೀಸರಿಂದ ರಕ್ಷಿಸುವಾಗ ಅವಳಿಗೆ ತಾನೂ ಗೋವಾ ಸ್ವಾತಂತ್ರ್ಯಕ್ಕೆ ಹೋರಾಡಿದಷ್ಟೇ ಸಂತೋಷವಿತ್ತು.

ಹೀಗೆ 'ಗೂಢಚಾರಿಣಿ' ಕಥೆಯಲ್ಲಿ ಮೂವರು ಗೂಢಚಾರರು ಸಿಗುತ್ತಾರೆ. ಒಂದು: ಗಂಡ ಶಾಂತಾರಾಮ ಪೋರ್ಚುಗೀಸರ 'ಗೂಢಚಾರಿ', ಎರಡು: ಮನೆಕೆಲಸದಾಕೆ ತಾರಾ ಕ್ರಾಂತಿಕಾರಿಗಳ 'ಗೂಢಚಾರಿಣಿ' ಹಾಗೂ ಮೂರು: ಸ್ವತಃ ಮಂದಾಕಿನಿ ಅವರಿಬ್ಬರ ಚಲನವಲನಗಳನ್ನು ಗಮನಿಸುವ 'ಗೂಢಚಾರಿಣಿ'ಯಾಗಿ ಕಥೆಯಲ್ಲಿ ಬಿತ್ತರಗೊಂಡಿದ್ದಾರೆ. ಇದು ಕಟ್ಟೀಮನಿಯವರ ಕಥೆಗಳ ವೈಶಿಷ್ಟ್ಯಗಳಲ್ಲಿ ವಿಶೇಷವಾದುದು.

**ಸೈನಿಕನ ಹೆಂಡತಿ: (೧೯೬೭)**

'ಸೈನಿಕನ ಹೆಂಡತಿ' ಕಥಾ ಸಂಕಲನವು ೧೯೬೭ರಲ್ಲಿ ಮೊದಲ ಮುದ್ರಣವನ್ನು ಕಂಡಿತು. ಇದು ಸೈನಿಕನ ಹೆಂಡತಿ, ಶರಣ, ತಾರನಾಳದ ಸಾವಿತ್ರಿ, ಹಾಜಿ ಪೀರ್ ಕಣಿವೆಯ ದಾರಿಯಲ್ಲಿ, ಕುಂಭಕರ್ಣ, ಕುಸ್ತಿ, ಕೆನ್ನೆಯ ಮೇಲಿನ ಕಲೆ, ಕವಾಯತಿನ ತರುವಾಯ, ಗಂಡುಬೀರಿ ಮತ್ತು ರೈಲುದಾರಿಯ ರಕ್ಷಕ ಎಂಬ ಹತ್ತು ಕಥೆಗಳನ್ನು ಒಳಗೊಂಡಿದೆ. ಈ ಕಥಾ ಸಂಕಲನದಲ್ಲಿ ಅಧ್ಯಯನದ ಉದ್ದೇಶಕ್ಕಾಗಿ ಪ್ರಮುಖವೆನಿಸುವ 'ಸೈನಿಕನ ಹೆಂಡತಿ', ಹಾಜಿ ಪೀರ್ ಕಣಿವೆಯ ದಾರಿಯಲ್ಲಿ' ಮತ್ತು 'ರೈಲುದಾರಿಯ ರಕ್ಷಕ' ಕಥೆಗಳನ್ನು ಆಯ್ದುಕೊಳ್ಳಲಾಗಿದೆ. ಇವುಗಳಲ್ಲಿ ಸ್ವಾತಂತ್ರ್ಯದ ಬಗೆಗೆ ಲೇಖಕರ ವಿಭಿನ್ನ ನಿಲುವು ವ್ಯಕ್ತವಾಗಿರುವುದನ್ನು ಗಮನಿಸಬಹುದು. ಮೂರೂ ಕಥೆಗಳು ಪಾಕಿಸ್ತಾನೀ ಆಕ್ರಮಣದ ಹಿನ್ನೆಲೆಯನ್ನು ಒಳಗೊಂಡಂತವು.

ಪಾಕಿಸ್ತಾನಿಗಳ ಗುಂಡಿಗೆ ಬಲಿಯಾಗಿರಬಹುದಾದ ಭಾರತೀಯ ಜವಾನರಲ್ಲಿ ಕರಿಯನೂ ಒಬ್ಬನಾಗಿರಬಹುದೇ ಅಥವಾ ಅವರ ಸೆರೆಯಾಳಾಗಿರಬಹುದೇ ಎಂಬ ಗುಮಾನಿಯನ್ನು ಹಳ್ಳಿಯ ಅವನ ಸ್ನೇಹಿತ ರೇಡಿಯೋ ಸುದ್ಧಿಯಿಂದ ಚಿಂತಿತನಾಗಿರುವಾಗ ಕರಿಯನ ಹೆಂಡತಿ ಎಂದು ಯಮುನಾ ಅವತ್ತು ಮೊದಲ ಸಲ ಅವನ ಮನಿಗೆ ಬಂದಿದ್ದಳು. ಯಮುನಿಯ ನಡತೆ ಸರಿ ಇರಲಿಲ್ಲ. ಕರಿಯ ಒಬ್ಬ ಸೈನಿಕನಾಗಿದ್ದರಿಂದ ಹಳ್ಳಿಯಲ್ಲಿ ಇರುತ್ತಿರಲಿಲ್ಲ. ಅದೇ ವೇಳೆಯಲ್ಲಿ ಊರಿನ ಉಡಾಳ, ಲಫಂಗ ಎನಿಸಿಕೊಂಡಿದ್ದ 'ದುಂಡಪ್ಪ' ಇವಳನ್ನು ಕಾಡಿ ಬೇಡಿ ಹೆಂಗೋ ಒಲಿಸಿಕೊಂಡಿದ್ದ. ಇದು ಕರಿಯನಿಗೂ ಮತ್ತು ಅವನ ಸ್ನೇಹಿತನಿಗೂ ತುಂಬಾ ನೋವಿನ ಸಂಗತಿಯಾಗಿತ್ತು. ಎಷ್ಟು ತಿಳುವಳಿಕೆ ಹೇಳಿದರೂ ಯಮುನಾ ದುಂಡಪ್ಪನ ಸಹವಾಸ ಬಿಟ್ಟಿರಲಿಲ್ಲ. ಕರಿಯನ ಸ್ನೇಹಿತ ಇವಳಿಗೆ ಒಳ್ಳೆಯ ದಾರಿಗೆ ತರಲು ಪ್ರಯತ್ನಿಸುತ್ತಾನೆ ಕೊನೆಗೆ ಅದರಲ್ಲಿ ಯಶಸ್ಸು ಆಗುತ್ತಾನೆ. ಆದರೆ ಯಮುನೆ ಒಳ್ಳೆಯವಳು ಆಗೋದು 'ದುಂಡಪ್ಪ'ನ ಕೊಲೆ

ಮಾಡಿದಾಗ. ಕಥೆಗೆ ಒಂದು ಹೊಸ ತಿರುವನ್ನು ಕಾಣೋದು ಅಪರಾಧಿಯಾಗಿ 'ಯಮುನೆ' ನಿಂತಾಗ.

ಪ್ರತಿ ಹಳ್ಳಿಯಲ್ಲಿ "ದುಂಡಪ್ಪನಂಥ ಲಂಪಟರಿರುವಂತೆ ಯಮುನೆಯಂಥ ಕುಟಿಲೆಯರೂ ಇರುತ್ತಾರೆ." (ಬಸವರಾಜ ಕಟ್ಟೀಮನಿ, ೨೦೧೪, ಪುಟ-೯೭.) ಆದರೆ ಒಬ್ಬ ಸೈನಿಕನ ಹೆಂಡತಿಯಾಗಿ ಯಮುನೆ ಕುಟಿಲೆಯಾಗಿ, ಸೂಳೆಯಂತೆ ವರ್ತಿಸುವುದು ಸಮಾಜದ ಕೆಂಗಣ್ಣಿಗೆ ಗುರಿಯಾಗುತ್ತಾಳೆ. "ಇದೊಂದು ಛಿನಾಲಿ! ಸೂಳಿಯಾಗಬೇಕಾದದ್ದು ಕರಿಯನ ಕೊಳ್ಳಿಗೆ ಗಂಟುಬಿದ್ದೈತಿ!" (ಬಸವರಾಜ ಕಟ್ಟೀಮನಿ, ೨೦೧೪, ಪುಟ-೯೭) ಎಂಬಂಥ ಕಠೋರ ಮಾತು ಸೈನಿಕ ಹೆಂಡತಿಗೆ ನುಂಗಲಾರದ ತುತ್ತಾಗುತ್ತವೆ. ಆಕೆಯನ್ನು ಲೇಖಕರು ಕಥೆಯೊದ್ದಕ್ಕೂ ಚಂಚಲೆ ಮನಸ್ಸಿನ ಹೆಣ್ಣು ಎಂಬಂತೆ ಚಿತ್ರಿಸಿದ್ದಾರೆ. ಅವಳಿಗೆ ಸೈನಿಕನ ಹೆಂಡತಿಯ ಗಂಭೀರತೆ, ಸೌಮ್ಯತೆ, ದೇಶಪ್ರೇಮದ ಬಗೆಗೆ ಅಭಿಮಾನಗಳು ಎಳ್ಳಷ್ಟು ಇಲ್ಲ. ಅಂಥವಳಿಗೆ ಕರಿಯನ ಸ್ನೇಹಿತ ಹೇಳುವ: "ಯುದ್ಧ ನಡೆದಾಗ, ಸುತ್ತಲೂ ಗುಂಡು ಹಾರಾಡುತ್ತಿರುವಾಗ ಗೆಣತೀರ ನೆನಪಾದರೂ ಹೆಂಗ ಬಂದೀತ ಯಮನೀ? ವೈರಿಗಳನ್ನ ಕೊಲ್ಲುವ ಒಂದ ವಿಚಾರ ಆಗ ಸೈನಿಕರಿಗಿರತೈತಿ.."(ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೦೨.) ಎಂಬ ಮಾತುಗಳು ಅವಳ ಮನಸ್ಸನು ಪರಿವರ್ತಿಸುವಲ್ಲಿ ಸಫಲವಾಗುತ್ತವೆ. ಅಲ್ಲದೆ ತನ್ನ ತಪ್ಪಿನ ಅರಿವಾಗಿ ಯಮುನಿಯು "ಮೊನ್ನಿನ ದಿವಸ ಹೋಳೀ ಮ್ಯಾಲ ನಾ ನಿಮಗ ಅನಬಾರದ್ದು ಅಂದೀನಿ. ನಂದು ದೊಡ್ಡ ತಪ್ಪಾತು. ಮನಸಿನಾಗ ಹಿಡಕೋಬ್ಯಾಡ್ರಿ" (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೦೪.) ಎಂದು ತನ್ನ ತಪ್ಪಿನ ಅರಿವನ್ನು ತಿದ್ದಿಕೊಳ್ಳುತ್ತಾಳೆ. ತಾನು ಅಂದಿನಿಂದ 'ದುಂಡಪ್ಪ'ನನ್ನು ಮತ್ತಷ್ಟು ದೂರ ಸರಿಸಲು ಪ್ರಯತ್ನಿಸುತ್ತಾಳೆ.

ಇತ್ತ ಯುದ್ಧರಂಗದಲ್ಲಿ ಹತ್ತಿಪ್ಪತ್ತು ಸೈನಿಕರು ಸತ್ತ ವಾರ್ತೆ ಬಂದಿತ್ತು. ಅದನ್ನು ಕೇಳಿಸಿಕೊಂಡ ಯಮುನೆಯ ಮನಸ್ಸಿಗೆ ಸಮಾಧಾನವಿರಲಿಲ್ಲ. ಅವತ್ತೆ ರಾತ್ರಿ ಒಂದು ಅನಾಹುತವು ನಡೆದು ಹೋಗಿತ್ತು. "ದುಂಡ್ಯಾನ ಕಾಟ ಬಹಳ ಆತಂತ ನಾನ ಅವನ್ನ ಒನಿಕೆಯಿಂದ ಮರ್ಮಸ್ಥಾನಕ್ಕೆ ಹೊಡೆದು ಕೊಂದು ಹಾಕೀನ್ರಿ ಗೌಡರೆ ನನ್ನ ಹಿಡುಕೊಂಡು ನಡೀರಿ. ಬರ್ತಿನಿ." (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೦೫.) ಎನ್ನುತ್ತಾಳೆ. ಸೈನಿಕನ ಹೆಂಡತಿ ಎನಿಸಿಕೊಂಡಿದ್ದು ಅವತ್ತು ಸಾರ್ಥಕವೆಂದು ಯಮುನಿಗೆ ಅನಿಸಿತ್ತು. ಅವಳ ಅತ್ತೆಯು "ನನ್ನ ಸೊಸೀದೇನೂ ತಪ್ಪಿಲ್ಲಪ್ಪಾ ಇದರಾಗ" (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು-೧೧೩.) ಎನ್ನುವಾಗ ಯಮುನಿಗೆ ಒಮ್ಮೆಗೆ ಆದರ್ಶವಾಗಿ, ಸಾಧ್ವಿಯಂತೆ ಕಾಣುತ್ತಾಳೆ. ಅತ್ತೆಯನ್ನು ಸಮಾಧಾನ ಪಡಿಸುತ್ತಾ "ನೀನ್ಯಾಕ ಅಳತಿ ಅತ್ತೆವ್ವ? ನಾ ಖೂನೀ ಮಾಡಿದ್ದಂತೂ ಖರೇನ ಐತಿ. ಅದಕ್ಯಾಕ ಅಂಜೂದು? ನನ್ನ ಜೀವಾ ತಿಂತಿದ್ದ ಇದೊಂದು ಕೆಟ್ಟ ಹುಳಾ ಆದ್ರೂ

ಹಾಳಾಗಿ ಹೋತಲ್ಲ! ಅದ ನನಗ ಸಮಾಧಾನ" (ಬಸವರಾಜ ಕಟ್ಟೀಮನಿ, ೨೦೧೪, ಪುಟ-೧೦೬) ಎನ್ನುವಾಗ ಈ ಹಿಂದೆ ಇದ್ದ ಯಮುನೆ ಈಕೆ ಅಲ್ಲವೆನಿಸುತ್ತದೆ. ಈಗ ನಿಜವಾಗಲೂ ಇವಳು 'ಸೈನಿಕನ ಹೆಂಡತಿ'ಯಾಗಿ ಗೋಚರಿಸುತ್ತಾಳೆ. ಇಲ್ಲಿ ಲೇಖಕ ಕಟ್ಟೀಮನಿಯವರ ಕಥಾ ಕೌಶಲ್ಯವು ಮನೋಜ್ಞವಾಗಿ ಮೂಡಿಬಂದಿದ್ದರೂ ಸ್ವಾಂತಂತ್ರ್ಯ ಹೋರಾಟದ ಛಾಯೆ ಇಲ್ಲವೆಂದು ಹೇಳಬೇಕು. ಆದರೆ ಸೈನಿಕ ಕರಿಯನು ದೇಶಕ್ಕಾಗಿ ಹೋರಾಡುವಾಗ ತನ್ನ ಸಂಸಾರದ ಕಡೆ ಲಕ್ಷ್ಯವಿರದೇ ದೇಶಕ್ಕಾಗಿ ಹೋರಾಡುತ್ತಿರುವ ಚಿತ್ರಣವು ದೇಶಾಭಿಮಾನವನ್ನು, ದೇಶಪ್ರೇಮವನ್ನು ತೋರಿಸುತ್ತದೆ. ನಮ್ಮ ಸೈನಿಕರಿಗೆ ಯುದ್ಧ ಸನ್ನಿವೇಶದಲ್ಲಿ ಮಾತ್ರವಲ್ಲ ಎಲ್ಲ ಸಂದರ್ಭದಲ್ಲಿಯೂ ದೇಶ ಮುಖ್ಯವಾಗುತ್ತದೆ ಹೊರತು ಸಂಸಾರವಾಗಲಿ, ಕೌಟುಂಬಿಕ ದೌರ್ಬಲ್ಯವಾಗಲಿ ಮುಖ್ಯವಲ್ಲ ಎಂಬುದನ್ನು ಕಥೆ ಒಳಗೊಂಡಿದೆ.

**ಹಾಜಿಪೀರ್ ಕಣಿವೆಯ ಮಾರ್ಗದಲ್ಲಿ**

ಹೇಳದೆ ಕೇಳದೆ, ಹಿಂದು-ಮುಂದು ನೋಡದೆ ದಾಳಿ ಮಾಡುವ ನೆರೆ ರಾಷ್ಟ್ರದ ಬಗೆಗೆ ಅಸಹನೆ, ದ್ವೇಷವು ಹುಟ್ಟಿಕೊಳ್ಳುತ್ತದೆ. "ಸಾಮಾನ್ಯ ರಕ್ತವನ್ನು ಹೆಪ್ಪುಗಟ್ಟಿಸುವ ಕಗ್ಗತ್ತಲಲ್ಲಿ ಕಲ್ಲುಮುಳ್ಳು ಮರಗಳಿಂದ ತುಂಬಿದ ದಟ್ಟಡವಿಯ ಕಣಿವೆಯಲ್ಲಿ ತನ್ನ ದಳದ ನಾಯಕನ ಆಜ್ಞೆಗೆ ವಿರುದ್ಧವಾಗಿ ನಡೆದು ಏಕಾಂಗಿಯಾಗಿ ಹತ್ತಾರು ಜನ ಪಾಕಿಸ್ತಾನೀ ಸೈನಿಕರನ್ನು ತನ್ನ ಬಂದೂಕಕ್ಕೆ ಬಲಿಗೊಟ್ಟು ವೀರಾವೇಶದಿಂದ ಕಾದಿ ಮಡಿದ ಕತೆ ಹಾಜಿಪೀರ್ ಕಣಿವೆಯ ಮಾರ್ಗದಲ್ಲಿ" (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು-೧೧೩.) ಒಳಗೊಂಡಿದೆ.

ಕಥೆಯ ನಾಯಕ ಪರಸುರಾಮ ಒಬ್ಬ ಅಪ್ರತಿಮ ವೀರ, ಭಾರತ ಸೈನ್ಯದಲ್ಲಿ ಸಿಪಾಯಿ. ತನ್ನ ಪ್ರೇಯಸಿ ಚಿಕ್ಕವೀರಿಗೋಸ್ಕರ ತಾನು ಇನ್ನೂ ನಾಲ್ಕುವರ್ಷ ಕಾದರೆ ಹವಾಲ್ದಾರ್‌ನಾಗುವ ಕನಸು ಹೊತ್ತು ಹಾಜಿ ಪೀರ್ ಕಣಿವೆಯಲ್ಲಿ ಮತ್ತೆ ಸೈನ್ಯವನ್ನು ಸೇರಿಕೊಂಡಿದ್ದ. ಅಂದು "ಗಣೇಶ ಚತುರ್ಥಿ; ಕಾಶ್ಮೀರದಲ್ಲಿ ಪಾಕಿಸ್ತಾನಿಗಳ ಗದ್ದಲ ಆರಂಭವಾಗಿರದಿದ್ದರೆ ತಾನು ಈಗ ಹಳ್ಳಿಯಲ್ಲಿಯೇ ಇರುತ್ತಿದ್ದೆ" ಎಂದು ತನ್ನ ಹಳ್ಳಿ, ಹಳ್ಳಿಯಲ್ಲಿಯ ತನ್ನ ಹುಡುಗಿಯನ್ನು ನೆನಪಿಸಿಕೊಳ್ಳುತ್ತಾನೆ. ಇಂತಹ ಟ್ವಿಸ್ಟ್‌ಗಳು ಕಟ್ಟೀಮನಿಯವರ ಕಥೆಗಳಲ್ಲಿ ಒಂದು ವೈಶಿಷ್ಟ್ಯವನ್ನು ಹೊಂದಿವೆ. ಅವು ಕಥೆಯನ್ನು ಸಾಮಾಜಿಕ ನೆಲೆಯಲ್ಲಿ ಸಾಮಾನ್ಯ ಕುಟುಂಬವನ್ನು ಕೇಂದ್ರವಾಗಿಸಿಕೊಂಡು, ಆಸೆ, ಆಕಾಂಕ್ಷೆಗಳನ್ನು ಮೀರಿನಿಂತ ತುಡಿತಗಳನ್ನು ದೇಶಾಭಿಮಾನಿಯಾಗಿ ಪರಿವರ್ತಿಸುವ ಒತ್ತಡವನ್ನು ಕಥೆಯಲ್ಲಿ ತುಂಬಿಕೊಡುತ್ತವೆ.

ಹಾಜಿಪೀರ್ ಕಣಿವೆ "ಎಡ ಬದಿಯಲ್ಲಿ ಕೊಂಚ ಕಾಲು ಜಾರಿದರೂ ನೇರವಾಗಿ ಪಾತಾಳವನ್ನೇ ಕಾಣುವ ಪರಿಸ್ಥಿತಿ" (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು-೧೩೪.) ಇಂತಹ

ಕಣಿವೆಯಲ್ಲಿ ಪಾಕಿಸ್ತಾನಿ ಸೈನಿಕರ ಗುಂಡಿನ ಸುರಿಮಳೆಗೆ ಎದೆಗುಂದದೆ ತನ್ನ ನಾಯಕನ ಆಜ್ಞೆಯನ್ನು ಮೀರಿ ಪರಸುರಾಮನು ಮುನ್ನುಗ್ಗುತ್ತಾನೆ. "ತಾನೀಗ ನಾಯಕನಲ್ಲ... ಹವಾಲ್ದಾರನಲ್ಲ. ಕೇವಲ ಒಬ್ಬ ಸಿಪಾಯಿ" (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು-೧೩೬.) ಎಂಬುದು ಗೊತ್ತಿದ್ದು ಶೂರನಂತೆ ಮುನ್ನುಗ್ಗಿ "ಯಾ ಅಲ್ಲಾ! ದುಷ್ಮನ್ ಆಗಯೆ! ಚಲೋ! ಪೀಛೇ ಹಟೋ" (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು-೧೩೭.) ಎಂದು ಸಾವನಪತ್ರಿ ಠಾಣ್ಯದಲ್ಲಿ ಬಿಡಾರ ಹೂಡಿದ್ದ ಶತ್ರು ಸೈನ್ಯವು ಹಿಂದುರುಗುವಂತೆ ಏಕಾಂಗಿಯಾಗಿ ಹೋರಾಡುತ್ತಾನೆ. ಇದು ಕಥೆಯ ಒಂದು ಹಂತ. ಇಲ್ಲಿಯವರೆಗೂ ಮಾಡಿದ್ದು ಪ್ರೇಮ, ಪ್ರೀತಿಯನ್ನು ಗಳಿಸಲು, ತಾನು 'ಪರಮವೀರ ಚಕ್ರ', 'ಹವಾಲ್ದಾರ್' ಹುದ್ದೆಯನ್ನು ಪಡೆದು ಪ್ರೇಯಸಿ 'ಚಿಕ್ಕವೀರಿ'ಯ ಮನವಲಿಸಿ ಅವರ ತಂದೆ-ತಾಯಿಗಳಿಗೆ ಬುದ್ಧಿಯನ್ನು ಕಲಿಸಬೇಕೆಂದು ಹೋರಾಡಿದ ಛಾಯೆ ಓದುಗನಲ್ಲಿ ಮೂಡುವುದು. "ಪರಮವೀರ ಚಕ್ರ ಪಡೆಯುವಂಥಾ ಅಪ್ರತಿಮ ಶೌರ್ಯ ತೋರಿಸಿದ್ದಾನೆ ಈ ಕಲಿ. ಆದರೆ, ಅದನ್ನು ಸ್ವತಃ ದೊರಕಿಸಲು ಆತ ಉಳಿಯಲಿಲ್ಲ" (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು-೧೩೭.) ಎಂದು ಮೇಜರ್ ರಣಬೀರಸಿಂಗ್ ಹೇಳಿದಾಗ ಕಥೆಯು ಹೊಸ ತಿರುವು ಪಡೆದುಕೊಳ್ಳುತ್ತದೆ. ಓದುಗನಲ್ಲಿ ತನ್ನಿಂದ ತಾನೇ ದೇಶಾಭಿಮಾನ ಉಕ್ಕೇರಿಸುತ್ತದೆ. ಇದು ಕಟ್ಟೀಮನಿಯವರ ಲೇಖನಿಯ ಸಾಮರ್ಥ್ಯವೇ ಸರಿ.

## ರೈಲು ದಾರಿಯ ರಕ್ಷಕ

ಅದೇ ರೀತಿಯಾಗಿ ಒಬ್ಬ ರೈಲ್ವೆ ಲೈನ್‌ಮನ್ ಮುಸ್ಲಿಮನೊಬ್ಬನ ದೇಶ ಪ್ರೇಮವನ್ನು ಎತ್ತಿ ತೋರಿಸುವ ಚಿತ್ರಣವನ್ನು 'ರೈಲು ದಾರಿಯ ರಕ್ಷಕ' ಕಥೆ ಹೇಳುತ್ತದೆ. ದೇಶಪ್ರೇಮದ ಎದುರು ರಕ್ತಸಂಬಂಧಗಳು ಸೋಲುತ್ತವೆ. ದೇಶಪ್ರೇಮಿಯ ಮುಂದೆ ಅಣ್ಣ-ತಮ್ಮ, ಅಕ್ಕ-ತಂಗಿ, ತಂದೆ-ತಾಯಿಗಳ ಸಂಬಂಧಗಳು ಮಂಕಾಗುತ್ತವೆ ಎಂಬುದನ್ನು 'ರೈಲು ದಾರಿಯ ರಕ್ಷಕ' ಅನ್ವರ್‌ನಿಂದ ಲೇಖಕರು ತೋರಿಸುತ್ತಾರೆ. ಅನೇಕ ಪ್ರಯಾಣಿಕರನ್ನು ತುಂಬಿಕೊಂಡು ಹೊರಟ ರೈಲನ್ನು ಸ್ಫೋಟಿಸುವ ಸಂಚು ಪಾಕಿಸ್ತಾನಿಯೊಬ್ಬನಿಂದ ರೂಪಿತಗೊಂಡಿರುತ್ತದೆ. ಆ ವ್ಯಕ್ತಿ ಬೇರೆ ಯಾರೂ ಅಲ್ಲ ಸ್ವತಃ ಲೈನ್‌ಮನ್‌ನಾದ ಅನ್ವರ್‌ನ ತಮ್ಮನೇ ಆಗಿರುತ್ತಾನೆ. ತನ್ನ ತಮ್ಮನಿಂದಲೇ ಈ ಕೃತ್ಯವಾಗುತ್ತದೆ ಎಂದು ತಿಳಿದು ಚೂರಿಯಿಂದ ಇರಿದು ಆತನನ್ನು ನಿರ್ದಾಕ್ಷಿಣ್ಯವಾಗಿ ಕೊಲ್ಲುತ್ತಾನೆ. ಹೀಗೆ ತಾನೊಬ್ಬ ದೇಶಕ್ಕಾಗಿ ತನ್ನ ರಕ್ತ ಹಂಚಿಕೊಂಡು ಹುಟ್ಟಿದವನನ್ನು ಕೊಲ್ಲುವುದು ಅವನ ದೇಶಾಭಿಮಾನವನ್ನು ತೋರಿಸುತ್ತದೆ. "ಕರ್ತವ್ಯ ಮತ್ತು ಕರುಳ ಬಾಂಧವ್ಯಗಳ ಕತ್ತರಿಯಲಗಿನಲ್ಲಿ ಸಿಕ್ಕಿದ ಅನ್ವರನ ವ್ಯಕ್ತಿತ್ವದ ರೂಪಣೆ ಅಭಿಮಾನಾಸ್ಪದವೂ ಆದರ್ಶವೂ ಆಗಿದೆ. ಜೊತೆಗೆ ಆರಂಭದ ಕತ್ತಲೆಯ ವರ್ಣನೆ ಅತ್ಯಂತ ಶಕ್ತವಾಗಿದ್ದು ಕತೆಗೆ

ತೀವ್ರ ಪರಿಣಾಮದ ಉಚಿತ ಹಿನ್ನೆಲೆಯನ್ನೊದಗಿಸಿದೆ" (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು-೧೧೩-೧೧೯.) ಎಂಬ ವಿಮರ್ಶಕರ ಮಾತುಗಳು ಕಥೆಯನ್ನು ಉನ್ನತೀಕರಿಸುತ್ತವೆ. ಅನ್ವರ ಪ್ರತಿದಿನ ಕಂದೀಲಿನ ಬೆಳಕಿನಲ್ಲಿ ಹಳಿಗಳನ್ನು ಪರೀಕ್ಷಿಸುತ್ತಿದ್ದ. ಒಂದು ದಿನ ಎ.ಎಸ್.ಎಂ.ಗೆ ಸಾಹೇಬನೊಬ್ಬ ಬಂದು ಇವನನ್ನು ವಿಚಾರಿಸಿದ. "ನೀವೆಷ್ಟು ಮಂದಿ ಅಣ್ಣ ತಮ್ಮಂದಿರು?, ಉಳಿದವರು ಏನ್ಮಾಡ್ತಾರೆ?" ಎಂಬಂತ ಪ್ರಶ್ನೆಗಳು ಅನ್ವರ್‌ಗೆ ಕಲಿವಿಲಿ ಮಾಡಿದವು. ೨೫ ವರ್ಷಗಳಿಂದ ತಾನು ಈ ಕೆಲಸದಲ್ಲಿ ಇದ್ದರು ಇಂತಹ ಅನುಭವ ಅವನಿಗೆ ಆಗಿರಲಿಲ್ಲ. ಆದರೆ ಅವನಿಗೆ "ತನ್ನ ಮನಸ್ಸು, ತನ್ನ ನಡತೆ ನೂರಕ್ಕೆ ನೂರರಷ್ಟು ಶುದ್ಧವಾಗಿರುವಾಗ ಏಕೆ ಅಂಜಬೇಕು?" (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು-೧೧೮.) ಎಂಬ ಆತ್ಮವಿಶ್ವಾಸವಿತ್ತು. ಬಂದ ಅಧಿಕಾರಿಗೆ ಇವನ ಕಿರಿಯ ಸಹೋದರ 'ಅಬ್ದುಲ್' ಬಗೆಗೆ ವಿಚಾರಿಸುವ ತುಮುಲು ಇತ್ತು. ಅನ್ವರಿಗೆ ಗೊತ್ತಿರಲಿಲ್ಲ ತನ್ನ ತಮ್ಮ ಪಾಕಿಸ್ತಾನಿಯಾಗಿದ್ದು ರೈಲ್ವೇ ಹಳಿಗಳನ್ನು ಉಡಾಯಿಸಲು ಸಂಚು ಮಾಡುತ್ತಿದ್ದಾನೆಂದು. ಅಧಿಕಾರಿಯ ಪ್ರಶ್ನೆಗಳಿಂದ ಅದು ಸ್ಪಷ್ಟವಾಗುತ್ತದೆ. ಅದೇ ದಿನ ಸಾಯಂಕಾಲ ಗೂಡ್ಸ್ ಸೆಕ್ಷನಿಗೆ ಅವನ ಕೆಲಸವನ್ನು ವರ್ಗಮಾಡಿದ್ದು ಅಚ್ಚರಿಯನ್ನು ಮಾಡುತ್ತದೆ. "ಏಕ್‌ದಂ ಹೀಗೇಕೆ ಮಾಡಿದ್ರಿ ಸಾಬ್? ಮೈ ನಮಕ್ ಹರಾಂ ನಹೀ ಹೋ ಸಕತಾ! ನಹೀ ಹೋ ಸಕತಾ! ಏ ಕ್ಯಾ ಕರ್‌ಡಾಲಾ ತುಮನೇ?" (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು-೧೯೫.) ಎಂದು ಅಧಿಕಾರಿಯನ್ನು ಕೇಳುತ್ತಾಳೆ. ಇಲ್ಲಿ ಅನ್ವರನ ಸ್ವಾಭಿಮಾನವನ್ನು ಎತ್ತಿ ತೋರುತ್ತದೆ. ಏಕೆಂದರೆ ಬಹಳ ನಿಷ್ಠೆಯಿಂದ ಲೈನ್ ಮನ್ ಕಾಯಕವನ್ನು ೨೫ ವರ್ಷ ನಿಭಾಯಿಸಿಕೊಂಡು ಬಂದವನಿಗೆ ಹೀಗೆ ಮಾಡಿದ್ದರಲ್ಲಿ ಏನೋ ಅಪರಾಧ ಮನೋಭಾವ ತನ್ನ ಮೇಲೆ ಮೂಡಿದೆ ಎಂದು ಅನುಮಾನಿಸುತ್ತಾನೆ ಅನ್ವರ್. ಪತ್ತೇದಾರಿಯ ಕಥೆಯಂತೆ ನಿರಾಳವಾಗಿ ಸಾಗುತ್ತಿರುವಾಗ ಕೊನೆಯಲ್ಲಿ ಅನ್ವರ್‌ಗೆ ತನ್ನ ದೇಶಾಭಿಮಾನವನ್ನು ತನ್ನ ಪ್ರಾಮಾಣಿಕತೆಯನ್ನು ತೋರಿಸುವ ಪ್ರಸಂಗವೊಂದು ಒದಗಿ ಬರುತ್ತದೆ. ಗಡ್ಡದಾರಿ ವ್ಯಕ್ತಿಯೊಬ್ಬ ಸಂಶಯಾಸ್ಪದವಾಗಿ ಹಳಿಯ ಮೇಲೆ ಓಡಾಡುತ್ತಿರುವುದು ಗೊತ್ತಾಗಿ ಅದು ಸಾಹೇಬನಿಗೆ ತಿಳಿಸಲು ಓಡೋಡಿ ಬರುತ್ತಾನೆ. ಗಡ್ಡದಾರಿಯನ್ನು ಹಿಡದು ಸಿ.ಐ.ಡಿ. "ಇವನ ಗುರುತು ಹತ್ತಿತೇ ಅನ್ವರ್?" ಎಂದು ಕೇಳಿದಾಗ; "ಹತ್ತಿತ್ತು ಸಾಬ್. ನಾ ಒಗೆದ ಚೂರಿ ಬೆನ್ನಿಗೆ ನಾಟಿ ಇವ ಕೂಗಿದಾಗಲೇ ದನಿಯ ಗುರುತು ಹತ್ತಿತು" (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು-೧೯೯.) ಎಂದು ಹೇಳಿದಾಗ ತನ್ನ ಪ್ರೀತಿಯ ಕಿರಿಯ ತಮ್ಮನು ದೇಶದ್ರೋಹಿ ಕೆಲಸ ಮಾಡಿದ ಪರಿಣಾಮವಿದು ಎಂಬ ಭಾವವು ಮೂಡುತ್ತದೆ. ಇಲ್ಲಿ ಅನ್ವರ್‌ನಲ್ಲಿ ರಕ್ತ ಸಂಬಂಧಕ್ಕಿಂತ ದೇಶದ ಒಳಿತು ಹೆಚ್ಚಾಗಿ ಎದ್ದು ಕಾಣುತ್ತದೆ.

## ಐದನೆಯ ಸ್ವಾತಂತ್ರ್ಯ ದಿನ

'ಗರಡಿಯಾಳು' ೧೯೭೫ರಲ್ಲಿ ಪ್ರಕಟವಾದ ಕಟ್ಟೀಮನಿಯವರ ೧೦ ಕಥೆಗಳನ್ನೊಳಗೊಂಡ ಕಥಾ ಸಂಕಲನ. ಅಧ್ಯಯನದ ವ್ಯಾಪ್ತಿಯ ಹಿನ್ನೆಲೆಯಲ್ಲಿ ಬರುವ 'ಐದನೆಯ ಸ್ವಾತಂತ್ರ್ಯದಿನ' ಕಥೆಯು ನಮಗಿಲ್ಲಿ ಪ್ರಸುತವಾಗಿದೆ. ಇದರಲ್ಲಿ ಸ್ವಾತಂತ್ರ್ಯೋತ್ತರದ ಭಾರತದ ಹಳ್ಳಿ ಮತ್ತು ಪಟ್ಟಣದ ಚಿತ್ರಣವನ್ನು ನೀಡುತ್ತಾರೆ. "೧೯೫೧ರ ಅಗಷ್ಟ ೧೫ರ ಬೆಳಗು. ಐದನೆಯ ಸ್ವಾತಂತ್ರ್ಯ ದಿನದ ಬೆಳಗು. ಬೆಳಗು ಅಷ್ಟೇ; ಬೆಳಗಲಿಲ್ಲ." (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪು-೨೯೯.) ಎನ್ನುವ ಲೇಖಕರು ಭಾರತವು ಬ್ರಿಟೀಷ್‌ರಿಂದ ಮುಕ್ತಿ ಪಡೆದ ನಂತರ ನಾವು ಯಾವ ಮಟ್ಟದಲ್ಲಿ ಅಭಿವೃದ್ಧಿಯನ್ನು ಹೊಂದಿದ್ದೇವೆ? ಏನೂ ಇಲ್ಲ. ಯತಾವತ್ತಾಗಿ ಇನ್ನೂ ಹಾಗೇ ಬದುಕುತ್ತಿದ್ದೇವೆ! ಎಂಬ ಛಾಯೆಯನ್ನು ಸೂಚಿಸುತ್ತಾರೆ.

ಹಳ್ಳಿಯಲ್ಲಿ "ಉತ್ಸಾಹವಿಲ್ಲ, ಉಲ್ಲಾಸವಿಲ್ಲ. ಇದು ಐದನೆಯ ಸ್ವಾತಂತ್ರ್ಯ ದಿನವೆಂಬುದು ಯಾರಿಗೂ ತಿಳಿಯದು. ಸ್ವಾತಂತ್ರ್ಯ, ಸ್ವಾತಂತ್ರ್ಯದಿನ ಎಂಬ ಶಬ್ದಗಳ ಅರ್ಥವೂ ಅವರಿಗೆ ತಿಳಿಯದು" (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪುಟ-೨೯೯.) ಎನ್ನುತ್ತಾರೆ. ಹಳ್ಳಿಯ ಹಳೆಯದಾದ ಗುಡಿಯಲ್ಲಿ ಬಟ್ಟೆಯಿಲ್ಲದೆ ಬಿದ್ದುಕೊಂಡ ಬಡ ರೈತನ ಮೂಲಕ ಭಾರತದ ದಾರಿದ್ರ್ಯವನ್ನು ಎತ್ತಿ ಹೇಳುತ್ತಾ ಹೋಗುತ್ತಾರೆ. ಅವನಿಗೆ ಗುಡಿಯ ಮುಂದಿನ ಬಿದಿರಿಗೆ ಕಟ್ಟಿದ ಧ್ವಜ ಕಾಣುವುದಿಲ್ಲ. ಅವನಿಗೆ ಹಸಿವು ಮಾತ್ರ ತಡೆದುಕೊಳ್ಳಲಾಗುತ್ತಿಲ್ಲ. ಹಸಿವಿನ ರೊಟ್ಟಿಯ ಮುಂದೆ ಸ್ವಾತಂತ್ರ್ಯದ ಗುರುತಾದ ಧ್ವಜವು ಲೆಕ್ಕಕ್ಕಿಲ್ಲ. ಅದಕ್ಕೆ ದಾಕ್ಷಿಣ್ಯದ ಒಂದು ನೋಟವು ಅವನು ಅತ್ತ ಬೀರುವುದಿಲ್ಲ. "ಸ್ವತಂತ್ರ ಬಂತಂತೆ.... ಸ್ವತಂತ್ರ.... ಯಾರಿಗೆ ಸ್ವತಂತ್ರ? ಆ ಸಾವುಕಾರ ಸೂಳೀ ಮಕ್ಕಳಿಗೆ... ಆ ಜಮೀನುದಾರರಿಗೆ... ಆ ಇನಾಂದಾರರಿಗೆ" (ದೇಜಗೌ ಮತ್ತು ಸಿ.ಪಿ.ಕೆ., ೧೯೬೯, ಪುಟ-೩೦೧.) ಎಂದು ಟೀಕಿಸುವುದನ್ನು ದಾಖಲಿಸುತ್ತಾರೆ. ಇಲ್ಲಿ ಆಳುವ ವರ್ಗವು ಸಾಮಾನ್ಯ ಮತ್ತು ಕೆಳವರ್ಗದ ಜನರನ್ನು ಹೇಗೆ ದಮನಕ್ಕೆ ಒಳಪಡಿಸಿದ್ದಾರೆಂಬುದು ವೇದ್ಯವಾಗುತ್ತದೆ. ಸ್ವಾತಂತ್ರ್ಯ ಸಿಕ್ಕು ಐದು ವರ್ಷಗಳು ಕಳೆದರು ತಮ್ಮ ಬದುಕಿನಲ್ಲಿ ಯಾವುದೇ ಸುಧಾರಣೆ ಇಲ್ಲ. ಮತ್ತಷ್ಟು ದಾರಿದ್ರ್ಯ, ಬಡತನವೇ ಹೆಚ್ಚಿದೆ ಎಂಬ ಆಕ್ರೋಶವನ್ನು ರೈತನಿಂದ ಹೊರ ಹಾಕಿಸುತ್ತಾರೆ.

ಹಳ್ಳಿಗಳ ಸುಧಾರಣೆ, ರೈತರ ಉದ್ಧಾರ ಮಾಡುತ್ತೇವೆ ಅಂತ ಹೊಸ ಹೊಸ ಪಕ್ಷಗಳನ್ನು ಕಟ್ಟುವ ಕಾತುರದಲ್ಲಿ ಇರುವ ಶ್ರೀಮಂತ ವರ್ಗವನ್ನು ಕಂಡರೆ ಆಗದು. ಅವರ ಸ್ವಾತಂತ್ರ್ಯ ದಿನದ ಬಾವುಟವು ಅಷ್ಟಕ್ಕಷ್ಟೇ. ಬಡವನ ಗೋಳು ಹಸಿವನ್ನು ನೀಗಿಸುವತ್ತ ಹರಿದರೆ;

ಶ್ರೀಮಂತನ ಚಿತ್ತ ಹೊಸ ರಾಜಕೀಯ ಪಕ್ಷ ಕಟ್ಟುವತ್ತ ಹರಿದಿದೆ. ಆದರೆ ಧ್ವಜದತ್ತ ಇಬ್ಬರೂ ತಮ್ಮ ಲಕ್ಷ್ಯವನ್ನು ಹರಿಸಲಿಲ್ಲ. ಇದು ಹಳ್ಳಿಯ ಚಿತ್ರಣವಾದರೆ: ಪಟ್ಟಣದ್ದು ಬೇರೆ ಎನಿಸದು.

ಪಟ್ಟಣದ ಪ್ರಮುಖ ಚೌಕು ಟಿಳಕವಾಡಿ ಬಸ್ಸು ನಿಲ್ಲುವ ಚಾಕು. ಅಲ್ಲಿ ಐದನೆ ಸ್ವಾತಂತ್ರ್ಯದಿನದ ಬಾವುಟ ಹಾರುತ್ತಿದೆ. ಮತ್ತೊಂದೆಡೆ ನಿರಾಶ್ರಿತರು ಅನಾಥರಂತೆ ಗಿಡದಡಿ ಬಿದ್ದುಕೊಂಡಿದ್ದಾರೆ. ಅವರಿಗೆ ಬಾವುಟದತ್ತ ಗಮನವಿಲ್ಲ. ಅದೇ ಬೀದಿಯಲ್ಲಿ ಸ್ತ್ರೀಯೊಬ್ಬಾಕೆ 'ಅವಳ ದೇಹದಲ್ಲಿ ರಕ್ತವಿದ್ದಂತೆ ತೋರುವುದಿಲ್ಲ' ಆದರೂ ಗೋವಿನ ಜೋಳದ ತೆನೆ ಸುಟ್ಟು ಮಾರುತ್ತಿದ್ದಾಳೆ. ಅವಳಿಗೂ ಧ್ವಜ ಕಾಣುತ್ತಿಲ್ಲ. ಎತ್ತಿನ ಗಾಡಿ ಮುದುಕ ಗಾಡಿ ಹೊಡೆಯುತ್ತಿದ್ದಾನೆ. ಆತನಿಗೆ 'ಇಂದು ಸ್ವಾತಂತ್ರ್ಯದಿನವೆಂಬ ಕಲ್ಪನೆ ಇಲ್ಲ'. ಮತ್ತೊಂದೆಡೆ ತಾಯಿಯೊಬ್ಬಳು ತನ್ನ ಮಗಳೊಂದಿಗೆ ತರಕಾರಿ ಮಾರುತ್ತಿದ್ದಾಳೆ. ಅವಳಿಗೂ ಧ್ವಜದ ಬಗೆಗೆ ಗೊತ್ತಿಲ್ಲ. ಅಲ್ಲದೇ 'ಟಾಂಗಾವಾಲಾಗಳಿಗೂ ಅವರ ಕುದುರೆಗಳಿಗೂ ಒಂದೇ ಸಮನೆ ದುಡಿಯುತ್ತಿವೆ', ಚಿತ್ರಮಂದಿರಗಳಿಗೂ ಬಿಡುವಿಲ್ಲ ದಿನಾ ಮೂರು ಆಟ. "ಬಂದಿದೆ ಸ್ವಾತಂತ್ರ್ಯದಿನ..... ಐದನೆ ಸ್ವಾತಂತ್ರ್ಯ ದಿನ" (ದೇಜಗೌ ಮತ್ತು ಸಿ.ಪಿ.ಕೆ., ೧೯೬೪, ಪುಟ-೧೯೯.) ಇಲ್ಲಿಗೆ ಕಥೆ ಮುಗಿಯುತ್ತದೆ. ಇಲ್ಲಿ ವ್ಯಕ್ತವಾದ, ಚಿತ್ರಿತವಾದ ಸಾಮಾನ್ಯನ ಬದುಕು, ಕೆಳವರ್ಗದವರ ದೈನಂದಿನ ಜೀವನಕ್ಕೆ 'ಐದನೆ ಸ್ವಾತಂತ್ರ್ಯದ ಬಗೆಗೆ' ಕಲ್ಪನೆಯೇ ಇಲ್ಲ. ಗೌರವದ ಮಾತಿರಲಿ. ಅದೇ ದಿನ 'ಸರ್ಕಾರಿ ನೌಕರರಿಗೆ ಸವೇತನ ರಜ ದೊರೆತಿದೆ' ಆದರೆ ಕೂಲಿಕಾರರಿಗೆ ಅದು ಯಾರು ಕೊಡಬೇಕು? ಸರ್ಕಾರವೆ? ಅದಕ್ಕೆ ಹೊಸ ಚುಣಾವಣೆಯತ್ತ ಲಕ್ಷ್ಯವಿದೆ. ಯಾರನ್ನು ಎಷ್ಟು ದುಡಿಸಲಿ? ಎಂದು ಲೆಕ್ಕ ಹಾಕುವದರಲ್ಲೆ ಇದೆ. ಅದಕ್ಕೂ ಸ್ವಾತಂತ್ರ್ಯದ ಧ್ವಜ ನಿಮಿತ್ಯ ಮಾತ್ರ ಎಂಬ ಕೊರಗು ಲೇಖಕರಲ್ಲಿ ತೋರುತ್ತದೆ.

ಇದು ಸ್ವಾತಂತ್ರ್ಯೋತ್ತರ ಭಾರತವನ್ನು ಲೇಖಕರು ಕಂಡುಂಡ ಅನುಭವವೇ ಆಗಿದೆ. ಪಟ್ಟಣ ಬೇರಲ್ಲ ಹಳ್ಳಿ ಬೇರಲ್ಲ ಎರಡರಲ್ಲೂ ಒಂದೇ ಚಿತ್ರಣ. ಎರಡಲ್ಲೂ ಕೆಳವರ್ಗವೇ ಮತ್ತೆ ಮತ್ತೆ ಸ್ವಾತಂತ್ರ್ಯವನ್ನು ಬಯಸುತ್ತಿದೆ. ಅದಕ್ಕೆ ನಿಜವಾಗಲೂ ಸ್ವಾತಂತ್ರ್ಯವೆನ್ನುವುದು ದೊರಕಿಲ್ಲ. ನೆಪತ್ತೈಕ್ಕೆ ಮಾತ್ರ 'ಐದನೆಯ ಸ್ವಾತಂತ್ರ್ಯ ದಿನ'. ಆದರೆ ಕೂಲಿಗೆ, ರೈತನಿಗೆ ಹಸಿವಿನ ಚೀಲ ಎಂದು ತುಂಬುತ್ತದೋ ಅಂದೇ 'ಸ್ವಾತಂತ್ರ್ಯ' ಎಂಬುದು ವೇದ್ಯವಾಗುತ್ತದೆ. ಕಟ್ಟೀಮನಿಯವರ ಇತರ ಎಲ್ಲ ಕಥೆಗಳಿಗಿಂಥ ಈ ಕಥೆಯು ವಿಭಿನ್ನವೆನಿಸುತ್ತದೆ. ಇಲ್ಲಿ ವ್ಯಕ್ತವಾದ ಸ್ವಾತಂತ್ರ್ಯದ ಕಲ್ಪನೆಯೇ ಬೇರೆಯಾಗಿದೆ.

ಪ್ರಸ್ತುತ ಇಲ್ಲಿ ವಿಶ್ಲೇಷಿಸಲಾದ ಹದಿನೈದು ಕಥೆಗಳಲ್ಲಿ ಕಟ್ಟೀಮನಿಯವರು ಸ್ವಾತಂತ್ರ್ಯದ ವಿಭಿನ್ನ ಮುಖಗಳು ಗೋಚರಿಸುತ್ತವೆ. ಇಲ್ಲಿ ತಮ್ಮ ಸ್ವಾತಂತ್ರ್ಯ ಅಭಿಮಾನವನ್ನು ಹೊಸೆದು ಕಥೆ

ಕಟ್ಟಿಕೊಟ್ಟಿದ್ದಾರೆ. ಸ್ವಾತಂತ್ರ್ಯ ಪೂರ್ವ ಮತ್ತು ನಂತರದ ಅವರ ಕಥೆಗಳಲ್ಲಿ ಅವರೊಬ್ಬ ಸ್ವಾತಂತ್ರ್ಯ ಹೋರಾಟಗಾರರಾಗಿ ಅನೇಕ ಚಳುವಳಿಗಳಲ್ಲಿ ಭಾಗವಹಿಸಿದ ಅನುಭವಗಳಿಗೆ ಪ್ರಾಧಾನ್ಯತೆ ಕೊಟ್ಟಿರುವುದನ್ನು ನಾವುಲ್ಲಿ ಸೂಕ್ಷ್ಮವಾಗಿ ಗಮನಿಸಬಹುದು. ಜೊತೆ ಜೊತೆಗೆ ಅಂದಿನ ಭಾರತದ ಬಡತನ, ದಾರಿದ್ರ್ಯ, ಆಹಾರ ಸಮಸ್ಯೆ, ಮೂಢನಂಬಿಕೆ, ಢಾಂಬಿಕತನ ಮೊದಲಾದವು ಬೆಸೆದುಕೊಂಡಿವೆ. ಪ್ರಗತಿಶೀಲ ಲೇಖಕರಲ್ಲಿ ಅಗ್ರಗಣ್ಯರೆನಿಸಿಕೊಂಡ ಕಟ್ಟೀಮನಿಯವರ ಸ್ವಾತಂತ್ರ್ಯ ಚಳುವಳಿಗಳ ಅನುಭವ, ಪ್ರಭಾವವು ಪ್ರತಿ ಕಥೆಯಲ್ಲಿಯು ಉತ್ಸಾಹ, ಸಾಹಸಗಳನ್ನು ತುಂಬಿಕೊಡುವದರೊಂದಿಗೆ ಭಾರತದ ಚಿತ್ರಣವನ್ನು ಅವರು ಕಟ್ಟಿಕೊಡುತ್ತಾರೆ. ಸ್ವಾತಂತ್ರ್ಯ ಪ್ರೇಮಿಗಳ ಸುಡುರಕ್ತ ವಾಚಕರ ಧಮನಿ ಧಮನಿಗಳಲ್ಲೂ ಹರಿಯುವಷ್ಟು ತೀಕ್ಷ್ಣವಾಗಿ ಚಿತ್ರಿಸಿರುವ ಕಟ್ಟೀಮನಿಯವರ ಸಾಹಿತ್ಯದಲ್ಲಿ ಬದುಕಿನ ಸಾರ್ಥಕತೆ ತುಂಬಿಕೊಂಡಿದೆ.

ಬಸವರಾಜ ಕಟ್ಟೀಮನಿಯವರ ಬಹುತೇಕ ಕಥೆಗಳಲ್ಲಿ ಸ್ವಾತಂತ್ರ್ಯ ಹೋರಾಟದ ತೀವ್ರತೆಯಿದೆ. ಪುರುಷರೊಂದಿಗೆ ಸ್ತ್ರೀಯರು ಕೂಡ ಹೆಗಲಿಗೆ–ಹೆಗಲು ಕೊಟ್ಟು ಹೋರಾಟಕ್ಕೆ ನಿಂತಿರುವ ಚಿತ್ರಣಗಳಿವೆ. ರೈತರು, ಬಡವರು, ಯುವಕರು, ಸ್ತ್ರೀಯರು, ಕೆಳವರ್ಗದವರು – ಎಲ್ಲರೂ ಒಕ್ಕೂರಲಿನಿಂದ ಹೋರಾಡಿದ ಪ್ರತಿಫಲವೇ ೧೯೪೭ರ ಸ್ವಾತಂತ್ರ್ಯ ದಟ್ಟವಾದ ಹೋರಾಟದ ಚಿತ್ರಣಗಳಿರುವಂತೆ ಅದೇ ಕೊನೆ ಕೊನೆಗೆ ಕಟ್ಟೀಮನಿಯವರಂಥಹ ನಿಸ್ವಾರ್ಥ ಹೋರಾಟದ ಫಲವಾಗಿ ಪಡೆದ ಸ್ವಾತಂತ್ರ್ಯ, ತದನಂತರ ಶ್ರೀಮಂತರ, ಉಳ್ಳವರ ಪಾಡಾಗಿ, ದಲಿತರ–ಬಡವರ–ಸಾಮಾನ್ಯರ ಬದುಕಿಗೆ ಹಸಿವನ್ನು ತಂದಿತೆಂದು ರೈತನೊಬ್ಬನ ಮೂಲಕ ಪ್ರತಿಪಾದಿಸುತ್ತದೆ. ಹಾರುವ ಧ್ವಜ–ಹಸಿದ ಹೊಟ್ಟೆಗಳೆರಡನ್ನು ಐದನೇ ಸ್ವಾತಂತ್ರ್ಯದಿನ ಕಥೆಯಲ್ಲಿ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಕಥೆಗಾರರೇ ತಮ್ಮ ಕಥೆಗಳ ಪ್ರಭಾವ–ಪರಿಣಾಮಗಳೆರಡನ್ನು ವಿಶ್ಲೇಷಿಸುತ್ತಾ ತಮ್ಮ ನಿರ್ಭಿಡೆಯ ವ್ಯಕ್ತಿತ್ವವನ್ನು ತೋರಿದ್ದಾರೆ.

ರಾಜಕೀಯ ಪ್ರಜ್ಞೆಯೊಂದಿಗೆ ಬಸವರಾಜ ಕಟ್ಟೀಮನಿಯವರಿಗೆ ಸಾಮಾಜಿಕ ಕಳಕಳಿ ಅವರ ಸುಪ್ತ ಪ್ರಜ್ಞೆಯಲ್ಲಿದೆ. ಶಾರದೆ–ಚಂದ್ರಣ್ಣರ ಮಧ್ಯದ ಸಂಭಾಷಣೆಗಳಲ್ಲಿ ಇಂಥ ಅನೇಕ ಆಲೋಚನೆಗಳನ್ನು ತೆರೆದಿಟ್ಟಿದ್ದಾರೆ. ರವಕೆಗಳು ಹರಿದು ಹೇಸಿಯತೆ ಕಾಣುತ್ತಿದ್ದವು ಎಂದು ಅಭಿಪ್ರಾಯ ಪಡುವಲ್ಲಿ ಸಾಮಾಜಿಕ ಪ್ರಜ್ಞಾಲೋಕ ಅನಾವರಣಗೊಂಡಿವೆಯಾದರೂ ಬಸವರಾಜ ಕಟ್ಟೀಮನಿಯವರಿಗೆ ದೇಶಪ್ರೇಮ ಢಾಳವಾಗಿ ಎದ್ದು ಕಾಣುತ್ತದೆ. ಭಾವುಕತೆ, ಸಮಯ ಪ್ರಜ್ಞೆ ಹಾಗೂ ಸ್ವಾತಂತ್ರ್ಯ ಪ್ರೇಮಾರಾಧನೆಯಲ್ಲಿ ಉನ್ನತ ಪ್ರತಿಕ್ರೀಯೆಗಳು ಅವರ 'ಮೀಸಲು ಹೂ' ಕಥೆಗಳಲ್ಲಿ ಚೆನ್ನಾಗಿ ಅಭಿವ್ಯಕ್ತಗೊಂಡಿದೆ.

ಕಟ್ಟೀಮನಿಯವರಿಗೆ ವಿಶಿಷ್ಟವಾದ ಒಂದು ಶೈಲಿಯಿದೆ. ಇತರರ ಬರಹಗಳೊಂದಿಗೆ ಇಟ್ಟಾಗ ಇದು ಬಸವರಾನನದೇ ಎಂದು ತಟ್ಟನೇ ಗುರುತಿಸುವಷ್ಟು ಅವರ ವ್ಯಕ್ತಿತ್ವ ನಿಚ್ಚಳವಾಗಿ ಮೂಡಿಬಂದಿರುತ್ತದೆ. 'style is the man' ಎಂಬ ಉಕ್ತಿಗೆ ಸುಂದರ ನಿದರ್ಶನ ಅವರ ಶೈಲಿ. ಲೋಕದ ಡೊಂಕುಗಳನ್ನು ದರ್ಪ ದಬ್ಬಾಳಿಕೆಗಳನ್ನು ಅಸಮತೆ ಆಷಾಡಭೂತಿತನಗಳನ್ನು ಕಂಡಾಗ, ಚಿತ್ರಿಸುವಾಗ ಅವರ ಶೈಲಿಗೆ ನೂರಾನೆಯ ಬಲ ಬರುತ್ತದೆ, ಆವೇಶಪೂರ್ಣವಾದ ಸುಧಾರಣಾತ್ಮಕವಾದ ಪ್ರತಿಭಟನಾತ್ಮಕವಾದ ಅವರ ವ್ಯಕ್ತಿತ್ವ ಇಂಥ ಸಂದರ್ಭದಲ್ಲಿ ಕೆರಳಿದ ತಾಯಿ ಹುಲಿಯಾಗುತ್ತದೆ. ಆಡುವ ಮಾತುಗಳು ಕೆಂಡದುಂಡೆಗಳಾಗುತ್ತವೆ. ಪ್ರಗತಿಶೀಲ ಕಥೆಗಳ ಉದ್ದಕ್ಕೂ ಅರ್ಭಟಿಸುವ ಆ ಶಕ್ತಿಯುತವಾದ ಗಂಡು ಶೈಲಿಯನ್ನು ಓದುವಾಗ ಎಂಥವರ ಮನದಲ್ಲೂ ಬೆಂಕಿಯ ಹೊಳೆ ಹರಿಯದಿರದು ಸ್ವಾತಂತ್ರ್ಯ ಪ್ರೇಮದ ಉಜ್ವಲ ಅಧ್ಯಾಯಗಳನ್ನು ಅಧ್ಯಯನಿಸುವಾಗ ವೀರಾವೇಶದ ರಾಷ್ಟ್ರಪ್ರೇಮದ ಕುದಿ ರಕ್ತ ಧಮನಿಧಮನಿಗಳಲ್ಲಿ ಅತ್ಯಂತ ವೇಗವಾಗಿ ಧುಮುಕಿ ಹರಿಯತೊಡಗುತ್ತದೆ, ಇದೇ ಬರವಣಿಗೆ ಕಷ್ಟ ಕಾರ್ಪಣ್ಯಗಳನ್ನು ಮನದ ಮೂಲೆಯ ಕೋಮಲ ಸೂಕ್ಷಭಾವಗಳನ್ನು ಪ್ರೇಮ ಕರುಣೆಗಳನ್ನು ಚಿತ್ರಿಸುವಾಗ ಅವಶ್ಯಕವಾಗಿ ಮೃದುವಾಗುತ್ತದೆ. ಸುಸೂಕ್ಷ್ಮ ಚಿತ್ರವತ್ತಾಗುತ್ತದೆ. ಕಾವ್ಯಮಯವಾಗುತ್ತದೆ, ಅವರ ಶೈಲಿಗೆ ಕತ್ತಿಯ ಹರಿತ, ಭರ್ಚಿಯ ಮೊನಚು, ಸೂಜಿಯ ಚೂಪು, ಕೆಂಡದ ಕಾವು, ಶೂಲದ ಶಕ್ತಿ, ತೋಳಿನ ಕೈರ್ಯ, ಮಿಂಚಿನ ಹೊಳಪು, ಯೋಧನ ಆವೇಶ, ವಾಜಿಯ ವೇಗ, ವಜ್ರದ ಕಾಠಿಣ್ಯ, ಕೆಲಮಟ್ಟಿಗೆ ಹೂವಿನ ಕೋಮಲತೆ, 'ಕಟ್ಟೀಮಿನಿಯವರದು ಕಾತರದ ಎದೆ ' ಡವಡವ' ಎನ್ನುವುದನ್ನು ಕೇಳಿಸಬಲ್ಲರು. ಮೋಹದ ಶಕ್ತಿ ಇಳಿಜಾರಿನಲ್ಲಿ ಪ್ರವಾಹ ನುಗ್ಗಿದಂತೆ ನುಗ್ಗುವುದನ್ನು ಕಾಣಿಸಬಲ್ಲರು. ನಿರಾಸೆಯ ನಿಟ್ಟುಸಿರಿನ ಕಾವು ಮುಖಕ್ಕೆ ತಾಗುವಂತೆ ಮಾಡಬಲ್ಲರು. ಉತ್ಸಾಹದ ಎಳೆಯ ರಕ್ತ ನಮ್ಮ ಧಮನಿಗಳಲ್ಲಿ ಚಿಮ್ಮುವಂತೆ ಮಾಡಬಲ್ಲರು ಎಂಬ ಎಲ್.ಎಸ್.ಶೇಷಗಿರಿರಾಯರ ವಿಮರ್ಶೋಕ್ತಿ ನೂರಕ್ಕೆ ನೂರರಷ್ಟು ಸತ್ಯ.

ಕಟ್ಟೀಮನಿಯವರ ಕಥೆಗಳ ವಸ್ತುವೈವಿಧ್ಯ ಬೆರಗುಗೊಳಿಸುವಂಥದು. ಜೀವನದ ಆಳವಾದ ಆರ್ದ್ರವಾದ ವ್ಯಾಪಕವಾದ ನೈಜಾನುಭವದಿಂದ ಮೂಡಿಬಂದ ಈ ಕಥೆಗಳ ವಸ್ತು ನಾವು ಕೈಯಲ್ಲಿ ಮುಟ್ಟುವಷ್ಟು ಹತ್ತಿರವಾದದ್ದು, ಸಹಜವಾದುದು. ರಾಷ್ಟ್ರಪ್ರೇಮ, ರಾಜಕೀಯ ಸಾಮಾಜಿಕ ಆರ್ಥಿಕ ಅವ್ಯವಸ್ಥೆ, ಸ್ವಾರ್ಥ ದ್ರೋಹಿಗಳ ದಬ್ಬಾಳಿಕೆ, ಶ್ರೀಮಂತರ ಹೃದಯ ವಿಹೀನತೆ, ಡಾಂಭಿಕತನ, ಬಡತನದ ಬಾಳು, ಮುಗ್ಧ ಹೃದಯಗಳ ನಿಶ್ಚಲ ನಂಬಿಕೆ, ಕೌಟುಂಬಿಕ ಸ್ನೇಹ ಪ್ರೇಮಸರಸ ವಿರಸಗಳು, ಸ್ವಾಭಿಮಾನ, ಔದಾರ್ಯ, ತ್ಯಾಗ, ತತ್ವ, ಗ್ರಾಮ ಜೀವನ, ಕಲ್ಪನೆ –ಹೀಗೆ ಅವರ ಬಸವರಾಜ ಕಟ್ಟೀಮನಿಯವರಿಗೆ ಕಥಾ ಶಕ್ತಿಗೆ ಕೈಗನ್ನಡಿಯಾಗಿವೆ.

## ೪.೨. ನಿರಂಜನ ಅವರ ಕಥೆಯಲ್ಲಿನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು

'ನಿರಂಜನ' ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಕುಳಕುಂದ ಶಿವರಾಯರು ಪ್ರಗತಿಶೀಲ ಕಥೆಗಾರರಲ್ಲಿ ಪ್ರಮುಖವಾಗದ ಹೆಸರು. ಪ್ರಗತಿಶೀಲ ಕಾಲಘಟ್ಟದ ಅಗ್ರಮಾನ್ಯ ಲೇಖಕರಲ್ಲಿ ಒಬ್ಬರಾದ ಶ್ರೀಯುತರು ಯಾವುದೇ "ಇಜಂ"ಗಳಿಗೆ ಮಾರುಹೋಗದೇ ತಮ್ಮ ಮೂಲತತ್ವವನ್ನು ಬಿಟ್ಟುಕೊಟ್ಟವರಲ್ಲ. ಅಪ್ಪಟ ಪ್ರಗತಿಶೀಲರಾಗಿಯೇ ತಮ್ಮ ಬದುಕು-ಬರಹಗಳನ್ನು ಮೈಗೂಡಿಸಿಕೊಂಡವರು. ಸಮಾಜವಾದಿ ಹಿನ್ನೆಲೆಯಲ್ಲಿ ನಮ್ಮ ಸಾಮಾಜಿಕ ಬದುಕು ನಿರ್ಮಾಣಗೊಳ್ಳಬೇಕೆಂದು ವಾಸ್ತವಿಕ ನೆಲಗಟ್ಟಿನ ಮೇಲೆ ಗಟ್ಟಿಯಾಗಿ ಆಲೋಚಿಸಿದ ನಿರಂಜನರು ಕಥೆ, ಕಾದಂಬರಿ, ಕವನ ಸೇರಿದಂತೆ ೮೨ ಕೃತಿಗಳನ್ನು ರಚಿಸಿದ್ದಾರೆ. ಪ್ರಮುಖವಾಗಿ ಕಾದಂಬರಿಕಾರ, ಕಥೆಗಾರರೆನಿಸಿಕೊಂಡ ಇವರು 'ಸಂಧಿಕಾಲ', 'ರಕ್ತಸರೋವರ', 'ಅನ್ನಪೂರ್ಣ', 'ವಾರದ ಹುಡುಗ', 'ಕಾತ್ಯಾಯನಿ', 'ಒಂಟಿ ನಕ್ಷತ್ರ ನಕ್ಕಿತು', 'ಯಾವ ಜನ್ಮದ ಶಾಪ', 'ನಾಸ್ತಿಕ ಕೊಟ್ಟ ದೇವರು' ಪ್ರಮುಖವಾದ ಕಥಾ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಪ್ರಸ್ತುತ ಅವರ ಕಥೆಗಳಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದ 'ಮಣ್ಣಿನ ಮಗ ಗನ್ನು ತಂದ' ಎಂಬ ಕಥೆಯನ್ನು ಮಾತ್ರ ಅಧ್ಯಯನದ ದೃಷ್ಟಿಯಿಂದ ಇಲ್ಲಿ ಅವಲೋಕಿಸಲಾಗಿದೆ.

### ಮಣ್ಣಿನ ಮಗ ಗನ್ನು ತಂದ

ಪ್ರಸ್ತುತ ಕಥೆಯು ನಿರಂಜನರ 'ನಾಸ್ತಿಕ ಕೊಟ್ಟ ದೇವರು' ಕಥಾ ಸಂಕಲನದಲ್ಲಿ ಪ್ರಕಟಗೊಂಡಿದೆ. ನಮ್ಮ ದೇಶದ ಸ್ವಾತಂತ್ರ್ಯಾನಂತರ ರಾಜಕೀಯ ಕ್ಷೇತ್ರದಿಂದ ಪ್ರೇರಣೆಗೊಂಡು ರಚಿಸಿದ ಈ ಕಥೆಯಲ್ಲಿ ನಮ್ಮ ದೇಶಭಕ್ತಿಯ ಆಚಾರ ವಿಚಾರಗಳನ್ನು ಕುರಿತು ಅದ್ಭುತ ವಿಶ್ಲೇಷಣೆಯಿದೆ. ದೇಶಾಭಿಮಾನ, ರಾಷ್ಟ್ರಭಕ್ತಿಯು ನಮ್ಮ ಯುವಜನತೆಯ ನರನಾಡಿಗಳಲ್ಲಿ ಮಿಡಿಯಬೇಕಾಗಿದೆ. ಒಬ್ಬ ವ್ಯಕ್ತಿ ನಿಷ್ಪ್ರಯೋಜಕನಾಗಿರಬಹುದು. ಆದರೆ ಅನೇಕ ಸಂದರ್ಭಗಳಲ್ಲಿ ಅಂಥವನಿಗೆ ಅವಕಾಶ ಲಭಿಸಿದಾಗ ತನ್ನ ಸತ್ವಯುತ ಪ್ರತಿಭೆಯನ್ನು ವ್ಯಕ್ತಪಡಿಸದೆ ಬಿಡಲಾರ ಎಂಬುದಕ್ಕೆ ಪ್ರಸ್ತುತ ಕಥೆಯೇ ಒಂದು ನಿದರ್ಶನ. ಇದಕ್ಕೆಲ್ಲಾ ಬೇಕಾಗಿರುವುದು ಸರಿಯಾದ ಪರಿಸರ ನಿರ್ಮಾಣ.

ಕಥೆಯಲ್ಲಿ ಬರುವ ನಾಯಕ ಬೀರಣ್ಣನು ಮಂಡ್ಯ ಜಿಲ್ಲೆಯ ಮಣ್ಣೂರು ಗ್ರಾಮದವನು. ತಂದೆಯನ್ನು ಚಿಕ್ಕ ವಯಸ್ಸಿನಲ್ಲಿ ಕಳೆದುಕೊಂಡ ಬೀರಣ್ಣನು ಮತ್ತು ಸೀತಾಳ ಜವಾಬ್ದಾರಿ ತಾಯಿಯ ಮೇಲೆ ಬಿತ್ತು. ಗಟ್ಟಿ ಶರೀರದ ಬೀರಣ್ಣನು ಆಟದಲ್ಲಿ ಮುಂದು. ಪಾಠವೆಂದರೆ ಆಗುತ್ತಿರಲಿಲ್ಲ. ವಿದ್ಯೆ ತಲೆಗೆ ಹತ್ತದೆ ಇರುವುದರಿಂದ ಇವನಿಗೆ ಗುರುಗಳು "ದಡ್ಡ ಶಿಖಾಮಣಿ! ನೀನೊಬ್ಬ ಗುಲ್ಡು ಕಣೋ. ಯಾವ ದಂಡಕ್ಕೆ ಬರ್ತೀಯಾ ಶಾಲೆಗೆ? ಹೋಗು! ಎಮ್ಮೆ ಕಾಯೋಕೆ

ಹೋಗು!" (ನವಲಗುಂದ. ಎಸ್.ಎಸ್. ಮತ್ತು ಶಿವಾನಂದ ಕಳಕಣ್ಣವರ, ೨೦೧೧, ಪುಟ-೮.) ಎಂದ ಮಾತನ್ನು ಮನಸ್ಸಿಗೆ ಹಚ್ಚಿಕೊಂಡು ಬೀರಣ್ಣ ಎಮ್ಮೆ ಕಾಯೋದನ್ನೇ ಮಾಡತೊಡಗಿದ. ಅಂದಿನಿಂದ 'ಗುಲ್ಡು' (ದಡ್ಡ) ಎಂದು ಅವನಿಗೆ ಕಾಯಂ ಆಗಿ 'ಗುಲ್ಡು ಬೀರಣ್ಣ' ಎಂದು ಉಳಿದುಕೊಳ್ಳುತ್ತದೆ. ಹಳ್ಳಿಯಲ್ಲಿನ ಜಗಳಗಳಿಗೆ ಗುಲ್ಡು ಬಲಿಯಾಗುತ್ತಿದ್ದ. ತಾಯಿಗೆ ತನ್ನ ಮಗನ ದಡ್ಡತನಕ್ಕೆ ಬೇಸತ್ತು "ಎಂಥ ಮಗ ಹುಟ್ಟಿದನಪ್ಪ ತನಗೆ" (ನವಲಗುಂದ. ಎಸ್.ಎಸ್ ಮತ್ತು ಶಿವಾನಂದ ಕಳಕಣ್ಣವರ, ೨೦೧೧, ಪುಟ-೯.) ಎಂದು ಬೈದಿದ್ದೇ ತಡ ಮರುದಿನ ಅವನು ಬೆಂಗಳೂರಿಗೆ ಬಂದುಬಿಟ್ಟಿದ್ದ. 'ರಂಗಪ್ಪ' ಎಂಬ ಪುಢಾರಿಯ ಸಹಾಯದಿಂದ ಮಿಲ್ಟ್ರೀಗೂ ಸೇರಿಬಿಟ್ಟ. ಹೀಗೆ ಒಬ್ಬ ಮುಗ್ದ, ದಡ್ಡ ಮಾತ್ರವಲ್ಲ. ಒಂದೇ ಮಾತಿಗೆ ತನ್ನ ಸ್ವಾಭಿಮಾನವನ್ನು ಉಳಿಸಿಕೊಳ್ಳಲು ತನಗೆ ಅವಮಾನವಾದಲ್ಲಿ ತಿರುಗಿ ನೋಡದ ಸ್ವಭಾವದವನ ಚಿತ್ರಣವನ್ನು ಅವನ ಪರಿಸರವನ್ನು ನಿರಂಜನರು ಹಿನ್ನೆಲೆಯಾಗಿ ಕೊಡುತ್ತಾರೆ. ಇಲ್ಲಿ ಕಥೆ ರಭಸವಾಗಿ ಓದಿಸಿಕೊಂಡು ಹೋಗುತ್ತದೆ. ಒಂದು ಕಡೆ 'ವೆಲಾಂಗ್' ಚೀನಿ-ಭಾರತದ ಗಡಿ ಪ್ರದೇಶ. "ಹಿಂದೀ ಚೀನೀ ಭಾಯಿ ಭಾಯಿ!" ಹೆಸರಿಗೆ ಮಾತ್ರ. "ಗಿರಿಕಂದರಗಳ ತುಂಬ ಗುಂಡಿನ ಭೋರ್ಗರೆತದ ಧ್ವನಿ, ಪ್ರತಿಧ್ವನಿ." (ನವಲಗುಂದ. ಎಸ್.ಎಸ್ ಮತ್ತು ಶಿವಾನಂದ ಕಳಕಣ್ಣವರ, ೨೦೧೧, ಪುಟ-೪.) ಇದರಲ್ಲಿ ಗುಲ್ಡು ಬೀರಣ್ಣನಿಗೆ ಸ್ನೇಹಿತರಾಗಿ ರಾಮನ್ ನಾಯರ್, ಶೇರ್‌ಗಾಂವ್‌ಕರ್, ಕರ್ನಲ್ ಸಿಂಗ್ ಜೊತೆಗಿದ್ದರು. ಇವರ ಕೈಯಲ್ಲಿ ಗುಲ್ಡುವಿನ ಒರಟು ಜೀವನ, ನಗೆ, ಮಾತು, ಶಿಸ್ತು ಎಲ್ಲವು ಬದಲಾಗಿದ್ದವು. ಅವನೊಬ್ಬ ಶಿಸ್ತಿನ ಸೈನಿಕನಾಗಿ ರೂಪಗೊಂಡ. ಯುದ್ಧದ ಬಳಿಕ ಅವನಿಗೆ ಒಂದು ತಿಂಗಳ ರಜೆಯನ್ನು ಕೊಡುವದಾಗಿ ಮೇಜರ್ ಹೇಳಿ "ಈ ಚೀನೀ ಲೈಟ್ ಮಷಿನ್ ಗನ್ ಇದು ನಿನಗೆ!" (ನವಲಗುಂದ. ಎಸ್.ಎಸ್ ಮತ್ತು ಶಿವಾನಂದ ಕಳಕಣ್ಣವರ, ೨೦೧೧, ಪುಟ-೧೦.) ಎಂದು ಹುರುದುಂಬಿಸಿದ್ದರು. ಅವನನ್ನು ಊರಿಗೂ ಕಳಿಸಲು ಬಿಡಾರದ ಸೈನಿಕರೆಲ್ಲ ಹಿಂಬಾಲಿಸಿ ಶುಭಕೋರಿದರು. ಆದರೆ ಬೀರಣ್ಣನಿಗೆ "ಊರಿಗೆ ಹೋಗೋಕೆ ಮನಸ್ಸಿಲ್ಲ, ಕರ್ನಾಯಿಲ್ ಭಾಯಿ" (ನವಲಗುಂದ. ಎಸ್.ಎಸ್ ಮತ್ತು ಶಿವಾನಂದ ಕಳಕಣ್ಣವರ, ೨೦೧೧, ಪುಟ-೧೧.) ಎಂದನು. ಈ ಮಾತಿನಲ್ಲಿಯೇ ಗುಲ್ಡು ಬೀರಣ್ಣನಿಗೆ ಅಲ್ಲಿನ ಪರಿಸರವು ಎಷ್ಟು ಹಿಡಿಸಿತ್ತು? ಅದರ ಮೇಲೆ ಅವನಿಗೆ ಇದ್ದ ಅಭಿಮಾನ ಗೋಚರಿಸುತ್ತದೆ. ಸೈನ್ಯದಿಂದ ತಮ್ಮ ಊರುಗಳಿಗೆ ನಗುನಗುತ್ತಾ ಓಡಿ ಹೋಗುವ ಸೈನಿಕರಂತೆ ಬೀರಣ್ಣ ಇಲ್ಲಿ ಚಿತ್ರಿತವಾಗಿಲ್ಲ. ಇವನ ಸ್ವಭಾವವೇ ಬೇರೆ. ನಿರಂಜನರಿಗೆ ಇಲ್ಲಿ ಹೇಳಬೇಕಾದುದ್ದು ಬೇರೆಯೇ ಇದೆ: ಒಬ್ಬ ಹಳ್ಳಿಯ ಗಮ್ಮಾರನು ಸೈನಕ್ಕೆ ಸೇರಿ, ದೇಶಸೇವೆಯನ್ನು ಮಾಡುತ್ತಾ ತನ್ನ ಬದುಕನ್ನು ಹೇಗೆ ಸುಧಾರಿಸಿಕೊಳ್ಳಬಲ್ಲ ಎಂಬುದನ್ನು ಎತ್ತಿ ತೋರಿಸುತ್ತಾರೆ.

ಹೇಗೋ ಸೈನ್ಯದಿಂದ ತನ್ನ ಊರೂ ಮಣ್ಣೂರಿಗೆ ಪಯಣ ಬೆಳೆಸಿದ ಬೀರಣ್ಣನನ್ನು ಸ್ವಾಗತಿಸಲು ಬಸ್ಸ ನಿಲ್ದಾಣದಲ್ಲಿ "ಮಣ್ಣೂರಿಗೆ ಮಣ್ಣೂರೇ ಅಲ್ಲಿ ನೆರೆದಿತ್ತು." (ನವಲಗುಂದ. ಎಸ್.ಎಸ್ ಮತ್ತು ಶಿವಾನಂದ ಕಳಕಣ್ಣವರ, ೨೦೧೧, ಪುಟ-೧೩.) ಅಲ್ಲದೇ ಕಡು ಬಡವರಾದ ಇವರ ತಂಗಿಯನ್ನು ಎಷ್ಟೋ ಜನ ಸೊಸೆಯಾಗಿ ಮಾಡಿಕೋತೀವಿ ಅಂತ ಕೇಳುವುದು. ಅಲ್ಲದೆ ದಡ್ಡನಾಗಿದ್ದ ಗುಲ್ಡು ಬೀರಣ್ಣನಿಗೂ ಹೆಣ್ಣು ಕೊಡಲು ಅನೇಕರು ಮುಂದೆ ಬಂದಿದ್ದು ಹೊಸ ಸಂಚಲನವನ್ನೇ ಮೂಡಿಸುತ್ತದೆ. "ಸರಕಾರ ನಮಗೆ ಹೊಲ ಕೊಡುತ್ತಂತಪ್ಪ" ಎಂಬಂತ ಮಾತುಗಳಲ್ಲಿ ಸೈನಕ್ಕೆ ಸೇರಿ ಚೀನಿಯ ಸೈನಿಕರ ವಿರುದ್ಧ ಹೋರಾಡಿ ತನ್ನ ಸಾಹಸಗಳನ್ನು ತೋರಿದ 'ಗುಲ್ಡು ಬೀರಣ್ಣ' ಪತ್ರಿಕೆಗಳಲ್ಲಿ ಹೆಸರಾಗಿದ್ದ. ಹೀಗೆ ಕಥೆ ಸಕಾರಾತ್ಮಕವಾಗಿ ಎಲ್ಲಿಯೂ ನೋವಿನ, ಕರುಳು ಹಿಂಡುವ ದೃಶ್ಯಗಳಿಲ್ಲದೆ ಒಂದು ಸ್ವತಂತ್ರ ಭಾರತದ ಸೈನ್ಯದಲ್ಲಿ ಸೈನಿಕನೊಬ್ಬನು ತನ್ನ ಗ್ರಾಮದಲ್ಲಿ ಐಕ್ಯತೆಯನ್ನು ಮೂಡಿಸುತ್ತಾನೆ. ಹಳ್ಳಿಯಲ್ಲಿದ್ದ ಮಾರಪ್ಪ ಮತ್ತು ಈಶ್ವರಪ್ಪರ ಪಾರ್ಟಿಗಳು ಒಂದಾಗಿದ್ದವು. ಇದೆಲ್ಲ ಗುಲ್ಡು ಬೀರಣ್ಣನ ಧೈರ್ಯ, ಸಾಹಸಗಳಿಂದ ಎಂದು ನಿರಂಜನರು ತೋರಿಸುತ್ತಾರೆ.

ವಿದ್ಯೆ ತಲೆಗೆ ಹೋಗದಿರುವುದರಿಂದ, ತಾಯಿಯ ಮಾತಿಗೆ ನೊಂದುಕೊಂಡು ಬೆಂಗಳೂರಿಗೆ ಹೋಗಿ ಸ್ವಯಂ ಪ್ರೇರಣೆಯಿಂದ ಸೈನ್ಯಕ್ಕೆ ಸೇರಿಕೊಳ್ಳುತ್ತಾ, ಅಲ್ಲಿನ ಹೊಸ ವಾತಾವರಣಕ್ಕೆ ಹೊಂದಿಕೊಳ್ಳುತ್ತಾ, ಅಲ್ಲಿನ ಸೈನಿಕರ ಸಹವಾಸದಿಂದ ತನ್ನ ಒರಟು ಜೀವನ, ನಗೆ, ಮಾತು ಶಿಸ್ತುಗಳು ಒಳ್ಳೆಯ ಯೋಧನನ್ನಾಗಿ ರೂಪಿಸುತ್ತವೆ. ವಿವಿಧ ವೇಷ, ಭಾಷೆಗಳು, ಜನರೊಡನೆ ಬೆರೆತು ತನ್ನ ಹಳ್ಳಿಯನ್ನು ನೆನೆಯುತ್ತಾನೆ. ಎಲ್ಲಕ್ಕಿಂತ ಈ ಕಥೆಯಲ್ಲಿ ನಮಗೆ ಅವನ ಸಾಹಸಗಳು, ಅವನ ದೇಶ ಪ್ರೇಮ ಮುಖ್ಯವೆನಿಸುತ್ತದೆ. ವೆಲಾಂಗ್ ರಣರಂಗದಲ್ಲಿ ಚೀನಿಯರ ಅನಿರೀಕ್ಷಿತ ದಾಳಿಯನ್ನು ತನ್ನ ಸ್ನೇಹಿತರೊಂದಿಗೆ ಸಮರ್ಥವಾಗಿ ಕಾದುತೋರಿಸುತ್ತಾನೆ. ಎಲ್ಲ ವೈರಿಗಳೂ ಪ್ರಾಣಭಯದಿಂದ ಓಡಿಹೋಗುವಂತೆ ಮಾಡಿ ತನ್ನನ್ನು ಕೊಲ್ಲಲು ಬರುತ್ತಿದ್ದ ಮೂವರು ವೈರಿಗಳಲ್ಲಿ ಇಬ್ಬರನ್ನು ಬಂದೂಕಿನಿಂದ ಹೊಡೆದು ಉರುಳಿಸುತ್ತಾನೆ. ಆಗ ತನ್ನ ಬಳಿ ಮದ್ದುಗುಂಡುಗಳು ಇಲ್ಲದ ಅಸಹಾಯಕ ಪರಿಸ್ಥಿಯಲ್ಲಿಯೂ ತನ್ನ ಮೇಲೇರಿ ಬರುತ್ತಿದ್ದ ಮೂರನೆಯವನನ್ನು ಧೈರ್ಯದಿಂದ ಅವನ ಬಂದೂಕಿನಿಂದಲೇ ಕೊಂದುಹಾಕುತ್ತಾನೆ. ಗುಂಡುಗಳ ಸುರಿಮಳೆಯನ್ನು ತಪ್ಪಿಸಿಕೊಳ್ಳಲು ಓಡಿಹೋಗಿ ಆಳವಾದ ಕಂದಕಕ್ಕೆ ಧುಮುಕಿ ತಪ್ಪಿಸಿಕೊಳ್ಳುತ್ತಾನೆ. ಕೊನೆಗೆ 'ಗುಲ್ಡು' ಎಂಬ ಬಿರುದು ಕೊಟ್ಟ ತನ್ನ ಗುರುಗಳೇ ಅವನಿಗೆ "ಗುಲ್ಡು ಬೀರಣ್ಣನಿಗೆ ಜಯವಾಗಲಿ, ಭಾರತ ಮಾತೆಗೆ ಜಯವಾಗಲಿ" ಎಂದು ಹೊಗಳುತ್ತಾರೆ. ಹೀಗೆ ಸಂತೋಷದಲ್ಲಿ ಕಥೆ ಮುಗಿಯುತ್ತದೆ. ಬೀರಣ್ಣ ನಿಜವಾಗಿ ವೀರನಾದುದು ಈ ಕಥೆಯ ಸ್ವಾರಸ್ಯ. 'ಮಣ್ಣು' ಮತ್ತು 'ಗನ್ನು' ಇವೆರಡೂ ಪದಗಳು

ಒಂದಕ್ಕೊಂದು ಸೂಕ್ಷ್ಮ ಸಂಬಂಧಗಳನ್ನು ಹೊಂದಿವೆ. ಎರಡೂ ಅನ್ನ ನೀಡುವ, ದೇಶ ಕಾಯುವ ಸಂಕೇತಗಳಾಗಿ ಕಥೆಯಲ್ಲಿ ವ್ಯಕ್ತವಾಗಿವೆ.

### ೪.೩. ತ.ರಾ.ಸು ಅವರ ಕಥೆಯಲ್ಲಿನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು

ಪ್ರಗತಿಶೀಲ ಪಂಥದ ಲೇಖಕರ ಪರಂಪರೆಯಲ್ಲಿ ಅ.ನ.ಕೃ. ಅವರ ಪ್ರಭಾವಲಯದಲ್ಲಿ ರೂಪುಗೊಂಡ ಕನ್ನಡದ ಮಹತ್ವದ ಲೇಖಕರಲ್ಲಿ ತ.ರಾ.ಸು. ಅಗ್ರಗಣ್ಯರು. ಪ್ರಗತಿಶೀಲ ಪಂಥದ ಕಥೆಗಾರರಾಗಿ, ಕಾದಂಬರಿಕಾರರಾಗಿ ಹೊರಹೊಮ್ಮಿದರಾದರೂ, ಆ ಪಂಥಕ್ಕೆ ಕಟ್ಟು ಬೀಳದೆ, ತಮ್ಮ ಸೃಜನಾತ್ಮಕ ಪ್ರತಿಭೆಯಿಂದ ಸತತವಾಗಿ ಸಾಹಿತ್ಯ ರಚನೆ ಮಾಡಿಕೊಂಡು ಬಂದವರು. ವಿದ್ಯಾರ್ಜನೆಯ ಅಲ್ಪಾವಧಿಯಲ್ಲಿಯೇ ಸ್ವಾತಂತ್ರ್ಯ ಸಂಗ್ರಾಮದತ್ತ ಆಕರ್ಷಿತರಾಗಿದ್ದ ಇವರು ಅದರ ಭವಣೆಗಳನ್ನೂ ಅನುಭವಿಸಿದವರು.

"ಅ.ನ.ಕೃ. ಅವರ ಮಾರ್ಗದರ್ಶನದಿಂದ ರೂಪುಗೊಂಡ ತ.ರಾ.ಸು. ಕನ್ನಡಿಗರಲ್ಲಿ ಅವರು ಮೂಡಿಸಿದ ವಾಚನಾಭಿರುಚಿಯನ್ನು ಸಮರ್ಥವಾಗಿ ಬೆಳೆಸಿದರು. ಅವರ ಭಾಷಾ ಶೈಲಿಗಳ ಸಲೀಲತೆ, ಉಜ್ವಲತೆ, ಉತ್ಸಾಹ, ಭಾವನಿರ್ಭರತೆ, ಅಲಂಕಾರಿಕತೆಗಳಿಗೆ ಮಾರುಹೋಗದ ಓದುಗರಿಲ್ಲವೆಂದರೆ ಅದರಲ್ಲಿ ಅತಿಶಯೋಕ್ತಿಯೇನೂ ಇಲ್ಲ"(ಪರಭಾಕರ್, ನಾ. ೨೦೦೫, ಪುಟ-೭.) ಎಂಬಂಥ ವಿಮರ್ಶೆಗಳು ತ.ರಾ.ಸು. ಅವರ ಲೇಖನಿ ಸಾಮರ್ಥ್ಯವನ್ನು ಎತ್ತಿಹಿಡಿಯುತ್ತವೆ. "ಕನ್ನಡದ ಪ್ರಗತಿಶೀಲ ಸಾಹಿತ್ಯದ ಬರಹಗಾರರಲ್ಲಿ ಸಣ್ಣ ಕಥೆಯನ್ನು ತಮ್ಮ ಅಭಿವ್ಯಕ್ತಿಯ ಏಕೈಕ ಮಾಧ್ಯಮವನ್ನಾಗಿಸಿಕೊಂಡ ಲೇಖಕರು ಯಾರೂ ಇಲ್ಲ. ಅ.ನ.ಕೃ. ಮತ್ತು ತ.ರಾ.ಸು. ಅವರುಗಳು ಪ್ರಯೋಗಶೀಲ ದೃಷ್ಟಿಯಿಂದಲೇ ಸಣ್ಣ ಕಥೆಗಳನ್ನು ಬರೆದವರು" (ಮಹೇಶ.ಎಂ.ಎಂ., ೨೦೦೯, ಪುಟ-೫೨.) ಎಂಬ ನಿರ್ಣಯಗಳು, ಅಭಿಪ್ರಾಯಗಳು ತ.ರಾ.ಸು. ಅವರ ಕುರಿತು ಮೂಡಿಬಂದಿವೆ.

ತ.ರಾ.ಸು. ಅವರು ಬರೆದ ಕಥೆಗಳ ಸಂಕಲನಗಳು ನಾಲ್ಕು. ೧೯೪೬ರಲ್ಲಿ ರೂಪಸಿ, ೧೯೪೭ರಲ್ಲಿ ತೂಗಿತು, ೧೯೫೫ರಲ್ಲಿ ಗಿರಿಮಲ್ಲಿಗೆಯ ನಂದನದಲ್ಲಿ ಮತ್ತು ೧೯೮೨ರಲ್ಲಿ ಮೂರು ಮತ್ತೊಂದು ಎಂಬ ಕಥಾ ಸಂಕಲನಗಳು ಪ್ರಕಟಗೊಂಡಿವೆ. ಇವರು ಬರೆದ ಕಥೆಗಳು ಇಪ್ಪತ್ತೊಂದು. "ಅವರಿಗೆ ಕಾದಂಬರಿ ಬರೆದಷ್ಟು ವೇಗವಾಗಿ, ಆತ್ಮತೃಪ್ತಿಗಾಗಿ ಕಥೆಗಳನ್ನು ಬರೆಯುವ ವ್ಯವಧಾನವಿಲ್ಲದೇ ಹೋದದ್ದು" (ಪ್ರಧಾನ್ ಗುರುದತ್ತ, ೨೦೦೫, ಪುಟ-೭೪.) ಇದೇ. ಅದಕ್ಕೆ ಅವರೇ "ಕಾದಂಬರಿಯನ್ನು ಬರೆಯುವುದಕ್ಕಿಂತಲೂ ಸಣ್ಣ ಕಥೆಯನ್ನು ಬರೆಯುವುದು ಕಠಿಣವಾದ ಕಲಾಮಾರ್ಗ ಎಂಬ ಸತ್ಯ ನನಗೆ ಗೋಚರಿಸಿದೆ" (ಪರಭಾಕರ್, ನಾ.೨೦೦೫, ಪುಟ-೭೪.) ಎಂದು ಅದರ ಬಗೆಗೆ ಹೇಳಿಕೊಳ್ಳುತ್ತಾರೆ. ಪ್ರಸ್ತುತ ಅಧ್ಯಯನದ

ಉದ್ದೇಶ ಪ್ರಗತಿಶೀಲ ಕಥೆಗಾರರ ಕಥೆಗಳಲ್ಲಿ ಸ್ವಾತಂತ್ರ್ಯದ ದೇಶಾಭಿಮಾನದ ಚಿತ್ರಣಗಳನ್ನು ವಿಶ್ಲೇಷಿಸುವುದಾಗಿದೆ.

**'ಎಕ್ಸ್'**

'ಗಿರಿಮಲ್ಲಿಗೆಯ ನಂದನದಲ್ಲಿ' ಕಥಾ ಸಂಕಲನದಲ್ಲಿ ಪ್ರಕಟವಾದ ಆರು ಕಥೆಗಳಲ್ಲಿ ಐದನೆಯ ಕಥೆ 'ಎಕ್ಸ್'. ಕಮುನಿಸ್ಟ್ ಒಬ್ಬನನನ್ನು "ಈಗಲೂ ಅವನಿಗೆ ಹೆಸರು ಇರದೆ ಇರಲಿಲ್ಲ. ಗುಂಪಿನಿಂದ ಹೊರದೂಡಿ ಅವನ ಕೊಂದವರೇ ಅವನಿಗೆ ಪುನರ್ಜನ್ಮದ ನಾಮಕರಣ ಮಾಡಿದ್ದರು- ಎಕ್ಸ್ !..." (ತ.ರಾ.ಸು, ೨೦೧೩, ಪುಟ-೧೭೨.) ಇಲ್ಲಿ ಲೇಖಕರು ಸ್ವಗತದಲ್ಲಿ ಮಾತನಾಡುವ ಒಬ್ಬ ಕಮ್ಯುನಿಷ್ಟನ ಕ್ರಾಂತಿಕಾರಕ ವಿಚಾರಧಾರೆಗಳನ್ನು ಎಕ್ಸ್‌ನ ಹೇಳುತ್ತಾ ಹೋಗುತ್ತಾರೆ. "ಒಳಗೆ ಕಹಿ ನೆನಪುಗಳ ಹೊಳೆ. ಹೊರಗೆ- ಇನ್‌ಕ್ವಿಲಾಬ್ ಜಿಂದಾಬಾದ್.... ಇನ್‌ಕ್ವಿಲಾಬ್ ಜಿಂದಾಬಾದ್" (ತ.ರಾ.ಸು., ೨೦೧೩, ಪುಟ-೧೭೨.) ಈ ಕೂಗು ಅವನಿಗೆ ಚಿರನಿದ್ರೆ ಆದರೆ; ಜಗತ್ತಿಗೆ ಎಚ್ಚರಿಸುವ ಕೂಗು. ಇಲ್ಲಿ ಲೇಖಕರು ಕ್ರಾಂತಿಯ ಕೂಗಿಗೆ ಇರುವ ಸಾಮರ್ಥ್ಯವನ್ನು ಎತ್ತಿ ಹೇಳುತ್ತಾರೆ. "ಕ್ರಾಮೇಡ್! ಎಷ್ಟು ಮಧುರ, ಎಂಥ ಸ್ಫೂರ್ತಿದಾಯಿ ಈ ಹೆಸರ ಕರೆ. ಸರ್. ಮಿಸ್ಟರ್, ರೀ... ಎಲ್ಲಾ ಸಪ್ಪೆ, ಹಣ್ಣು ತಿಂದ ಮೇಲೆ ತವಡು ಜಗಿದಂತೆ" (ತ.ರಾ.ಸು., ೨೦೧೩, ಪುಟ-೧೭೪.) ಎಂಬಂಥ ಮಾತುಗಳು ಕಮ್ಯುನಿಸ್ಟರ್‌ಲ್ಲಿನ ಉತ್ಕಟ ಹೋರಾಟವನ್ನು, ಅಭಿಮಾನವನ್ನು ವ್ಯಕ್ತಪಡಿಸುತ್ತದೆ. ಕಥೆಯಲ್ಲಿ ಬರುವ ಪ್ರಮುಖ ಪಾತ್ರಗಳಾದ ಸ್ವಾಮಿನಾಥನ್ ಮತ್ತು ಮೀರ್ ಸಾದಕ್ ಇಬ್ಬರು ಸರ್ಕಾರದ ವಿರುದ್ಧ ಕ್ರಾಂತಿಯಲ್ಲಿ ಸಕ್ರಿಯವಾಗಿ ತೊಡಗಿದ್ದರಿಂದ ಸ್ವಲ್ಪದಿನ ಒಂದೇ ಜೈಲಿನಲ್ಲಿ ಇದ್ದು ಬಂದವರು. ಇಬ್ಬರ ಗುರಿ ಒಂದೇ ಆದರೂ ಮಾರ್ಗಗಳಲ್ಲಿ ಸಾಮ್ಯತೆ ಇಲ್ಲ. ಸ್ಟಾಲಿನ್, ಲೇನಿನ್‌ರ ವಿಚಾರಧಾರೆಗಳ ಪ್ರಭಾವವು ಇವರಲ್ಲಿ ಎದ್ದು ಕಾಣುವ ಅಂಶವಾಗಿದೆ. ಇಂತಹ ಅಂಶಗಳನ್ನು ವ್ಯಕ್ತಪಡಿಸುವಲ್ಲಿ "ಪ್ರಗತಿಶೀಲ ಪಂಥದ ದೃಷ್ಟಿ, ಆದರ್ಶಗಳು ಸುಬ್ಬರಾಯರಿಗೆ ಮೆಚ್ಚುಗೆಯಾಗಿದ್ದವು. ಸ್ವಾತಂತ್ರ್ಯ ಸಂಗ್ರಾಮವನ್ನು ಹತ್ತಿರದಿಂದ ಕಂಡು ಅದರಲ್ಲಿ ಭಾಗವಹಿಸಿ ಸೆರೆಮನೆವಾಸ ಅನುಭವಿಸಿದ್ದ" (ರಾಜಪ್ಪ ದಳವಾಯಿ, ೧೯೯೬, ಪುಟ-೧೨೫.) ರಿಂದಲೇ ಆ ಅನುಭವ ಕಥೆಯಲ್ಲಿ ವ್ಯಕ್ತವಾಗಿದೆ ಎನ್ನಬಹುದು.

"ಕುಡುಗೋಲು, ಕತ್ತಿ, ಸ್ಪ್ಯಾನರ್, ಸ್ಕ್ರೂಡ್ರೈವರ್, ನೇಗಿಲುಗಳೊಂದಿಗೆ ಧುಮುಕಿತ್ತು. ಲೆಕ್ಕಣಿಕ- ನವಜಗತ್ತಿನ ನಿರ್ಮಾಣಕ್ಕೆ ನಾಂದಿಯಾದ ಕ್ರಾಂತಿ ಕಣಕ್ಕೆ" (ತ.ರಾ.ಸು., ೨೦೧೩, ಪುಟ-೧೭೪.) ಎಂದು ನಂಬಿದ ಕಮ್ಯುನಿಸ್ಟರಲ್ಲಿ ಸಮಾಜದಲ್ಲಿ ಬಡವರ, ಕೂಲಿಕಾರ್ಮಿಕರ ಬಗೆಗಿನ ಕಾಳಜಿಯನ್ನು ತೋರ್ಪಡಿಸುತ್ತವೆ. ದುಡಿಯುವವರ ಸಾಧನಗಳೇ ಕ್ರಾಂತಿಯ ಚಿಹ್ನೆಗಳನ್ನಾಗಿ

ಮಾಡಿಕೊಂಡಿದ್ದು, ಸಮಾಜದಲ್ಲಿ ಸಮಾನತೆಗಾಗೆ ಹೋರಾಡುವುದು ಎದ್ದುಕಾಣುತ್ತದೆ. ಎಕ್ಸ್ ಕಥೆಯಲ್ಲಿ ಸಾಮ್ರಾಜ್ಯಶಾಹಿ; ಬಂಡವಾಳಶಾಹಿಗಳ ವಿರುದ್ಧದ ಕಾರ್ಮಿಕರ ಮೇ ಕ್ರಾಂತಿಯ ಒಂದು ಅಂಶವನ್ನು ಇಟ್ಟುಕೊಂಡು, ಅವರ ವಿರುದ್ಧ ಹೇಗೆ ಬಂಡೇಳಬಹುದು ಎಂಬುದನ್ನು ವಿಸ್ತರಿಸುತ್ತಾ ಹೋಗುತ್ತದೆ. ಕಥೆಯ ಮಧ್ಯಭಾಗದಲ್ಲಿ "ಪಾರ್ಟಿ ಲೈನ್ – ಫಾಲೋಆನ್"(ತ.ರಾ.ಸು., ೨೦೧೩, ಪುಟ-೧೭೮.) ಎಂಬಂತೆ ಕೇಂದ್ರದಲ್ಲಿ ಚಟರ್ಜಿ ಪಕ್ಷ ಮತ್ತು ಫಡಕೆ ಪಕ್ಷಗಳು ಅಧಿಕಾರಕ್ಕಾಗಿ ನಡೆಸುವ ತಿಕ್ಕಾಟಗಳು ಆರಂಭವಾಗಿ ಕಥೆಯ ಕೊನೆಯವರೆಗೂ ಸುರುಳಿ ಸುರುಳಿಯಾಗಿ ಬಿಚ್ಚಿಕೊಂಡಿವೆ. ಇಲ್ಲಿ ಕಥೆಗೆ ಒಂದು ನಿಶ್ಚಿತತೆಯನ್ನು ಕಲ್ಪಿಸುವಲ್ಲಿ ಲೇಖಕರ ಸಾಮರ್ಥ್ಯವು ಕುಗ್ಗುತ್ತದೆ ಎನ್ನಬಹುದು.

ಚಟರ್ಜಿ ಪಕ್ಷವು ಕೇಂದ್ರದಲ್ಲಿ ಅಧಿಕಾರ ಗದ್ದುಗೆಯನ್ನು ಪಡೆಯಲು ವಿಫಲವಾದಾಗ ಕ್ರಾಂತಿಗೆ ಮತ್ತಷ್ಟು ಬೆಂಬಲ ಬಂದಿತು ಏಕೆಂದರೆ ಸ್ವಾಮಿನಾಥನ್ "ಚಟರ್ಜಿ ಪಕ್ಷದ ದ್ರೋಹ ಪೂರ್ಣ ನೀತಿಯ ಬಗ್ಗೆ ನಮಗೆ ಮೊದಲೇ ಸಂಶಯವಿತ್ತು. ಆದರೆ ಆ ಸಂಶಯವನ್ನು ವ್ಯಕ್ತಪಡಿಸಿದರೆ ಕ್ರಾಂತಿಕಾರಿ ಶಿಸ್ತಿಗೆ ಭಂಗ ಬರಬಹುದೆಂದು ಬೆದರಿ ಬಾಯಿ ಮುಚ್ಚಿಕೊಂಡಿರಬೇಕಾಯಿತು. ಈಗ ಅವರ ಉಚ್ಚಾಟನೆಯಿಂದ ಕ್ರಾಂತಿಯ ಮಾರ್ಗ ಸುಗಮವಾಯಿತು" (ತ.ರಾ.ಸು., ೨೦೧೩, ಪುಟ-೧೯೦.) ಎಂದು ಹೇಳುತ್ತಾನೆ. ಇಲ್ಲಿ ಕಮ್ಯುನಿಷ್ಟ್ ಕ್ರಾಂತಿಕಾರರ ಗುಂಪಿನಲ್ಲಿಯೂ ಅಸಹನೆ, ಸಂಶಯಗಳು ತಾಂಡವಾಡುವ, ಒಬ್ಬರನ್ನೊಬ್ಬರು ದೂರುವ ಒಡಕು ಮನಸ್ಸುಗಳನ್ನು ಲೇಖಕರು ಬಿಚ್ಚಿ ಹೇಳುತ್ತಾರೆ. ಕೊನೆ ಕೊನೆಗೆ ತಮ್ಮ ತಪ್ಪಿನ ಅರಿವಾಗಿ "ಕ್ರಾಂತಿ ಚಿರಾಯುವಾಗಲಿ, ಪಕ್ಷ ಚಿರಾಯುವಾಗಲಿ"(ತ.ರಾ.ಸು., ೨೦೧೩, ಪುಟ-೧೯೨.) ಎಂಬಂತ ಮಾತುಗಳನ್ನು ಕ್ರಾಂತಿಕಾರಿಯಿಂದ ಲೇಖಕರು ಹೇಳಿಸುತ್ತಾರೆ. ಒಂದು ಪಕ್ಷದಲ್ಲಿದ್ದುಕೊಂಡು ಕ್ರಾಂತಿಕಾರಕವಾದ ಮಾತುಗಳನ್ನು ಆಡಿದುದು ಘೋರ್ಪಡೆ ಪಕ್ಷದ ಕಡೆಯವನ್ನು ಕೆರಳಿಸುತ್ತವೆ. ಇದಕ್ಕೆ ಕಥೆಯ ನಾಯಕ ಎಕ್ಸ್ ಬೆಲೆ ಕೊಡುವುದಿಲ್ಲ. ಅವರನ್ನು ದಿಕ್ಕರಿಸಿ ತನ್ನ ಮಾತುಗಳನ್ನು ಮುಂದುವರೆಸುತ್ತಾನೆ. ಅವನ ವಿರುದ್ಧ ಪಕ್ಷವು "ವಿಶ್ವಕ್ರಾಂತಿಯ ವಿಜಯ ದೃಷ್ಟಿಯಿಂದ, ಕ್ರಾಂತಿಯ ಕೈತುವಾದ ಪಕ್ಷದ ಹಿತದೃಷ್ಟಿಯಿಂದ .......ರನ್ನು ಪಕ್ಷದಿಂದ ಹೊರಹಾಕಲಾಗಿದೆ" (ತ.ರಾ.ಸು., ೨೦೧೩, ಪುಟ-೧೯೫.) ಎಂದು ಘೋರ್ಪಡೆ "ಕ್ರಾಂತಿಕಾರಿ ಸೈನಿಕನಿದ್ದಂತೆ ತೀರ್ಮಾನವನ್ನು ಜಾರಿಗೆ ತರುತ್ತಾರೆ. ಆದರೆ ಕೆಲವರು ತಮ್ಮ ತಪ್ಪಿನಿಂದಲೇ ಪಕ್ಷದಿಂದ ಹೊರಹಾಕಲ್ಪಟ್ಟವರು ಪಕ್ಷದ ಬಗ್ಗೆ ಅಪಪ್ರಚಾರಕ್ಕೆ ತೊಡಗುವುದೂ ನಿನಗೆ ತಿಳಿದಿರಬೇಕು" (ತ.ರಾ.ಸು., ೨೦೧೩, ಪುಟ-೧೯೫.) ಎಂದು ಹೇಳುತ್ತಾನೆ. ಪತ್ರಿಕೆಗಳಲ್ಲಿ ಪಕ್ಷದಿಂದ ಹೊರಬಿದ್ದವನಿಗೆ 'ಎಕ್ಸ್' ಎಂದು ಅವತ್ತಿನಿಂದ ಕರೆಯಲಾಗುತ್ತದೆ. ಬೀದಿಯಲ್ಲಿ ಮೇ ದಿನದ ಮೆರವಣಿಗೆ ನಡೆದಿತ್ತು. ಅಲ್ಲಿನ 'ಇನ್‌ಕ್ವಿಲಾಬ್ ಜಿಂದಾಬಾದ್' ಕೂಗು 'ಮಲಗಿದ್ದ ಜಗತ್ತನ್ನು

ಎಚ್ಚರಿಸುತ್ತಿತ್ತು'. ಮಲಗಿದ್ದ ಎಕ್ಸ್ ಎದ್ದು ಅದರಲ್ಲಿ ಬೆರೆತ. ಜಗತ್ತನ್ನು ಎಚ್ಚರಿಸಲು ತಾನೂ 'ಇನ್‌ಕ್ವಿಲಾಬ್ ಜಿಂದಾಬಾದ್' ಎಂದು ಉತ್ಸಾಹದಿಂದ ಕೂಗಿದ. ಇವನ ಕೂಗನ್ನು ಆಲಿಸಿದ ಮೆರವಣಿಗೆಯಲ್ಲಿನ ಕೆಲವರು "ಮೀರ್ ಸಾದಕ್ ಮುರ್ದಾಬಾದ್" ಎಂದು ಕೂಗತೊಡಗಿದರು. ಈಗ ಕಥೆಯಲ್ಲಿನ ಎಕ್ಸ್ ಯಾರು? ಎಂಬುದನ್ನು ಸ್ಪಷ್ಟವಾಗಿ ಲೇಖಕರು ತಿಳಿಸುತ್ತಾರೆ. ಕಥೆಯಲ್ಲಿನ ಇದುವರೆಗಿನ ಎಕ್ಸ್ ಬಗೆಗಿನ ಕೌತುಕತೆ ಹೊರಬೀಳುತ್ತದೆ.

ಎಕ್ಸ್‌ನಿಗೆ ಜನರಿಂದ ಎಷ್ಟೇ ಧಿಕ್ಕಾರಗಳು ಬಂದರು ಅವನು ಮತ್ತೆ ಮತ್ತೆ ಜನತೆಗಾಗಿ ದುಡಿಯಬೇಕೆಂದು ಪಕ್ಷವನ್ನು ಬದಲಾಯಿಸಿಕೊಳ್ಳಲು ಯತ್ನಿಸುತ್ತಾನೆ. ಆಗ ಅವನಿಗೆ 'ಇಂತಹ ಎಕ್ಸ್‌ಗಳು ಎಲ್ಲ ಪಕ್ಷದಲ್ಲಿ ಇರುತ್ತಾರೆ ಅವರು ಚಿಪ್ಪಿನೊಳಗಿನ ಆಮೆಗಳಿದ್ದಂತೆ' ಎಂಬಂತಹ ಆಪಾದನೆಗೆ ಗುರಿಯಾಗುತ್ತಾನೆ. ಕಥೆ ಮೇ ಕಾರ್ಮಿಕ ದಿನಾಚರಣೆ ಮೆರವಣಿಗೆಯಲ್ಲಿ ಮುಗಿಯುತ್ತದೆ. ಎಕ್ಸ್ ಮತ್ತೆ ಏಳದೇ ಮಲಗಿದ್ದಲ್ಲಿಯೇ ಮಲಗಿಕೊಂಡಿರುತ್ತಾನೆ. ಹೀಗೆ ಕಥೆಯಲ್ಲಿ 'ಎಕ್ಸ್' ಎನ್ನುವವ ಸಮಾಜದಲ್ಲಿ ಸಮಾನತೆಯನ್ನು ತರಲು, ಬಡವರ ಪರವಾಗಿ ಹೋರಾಡಲು ಮುಂದಾದಾಗ ಅವನಲ್ಲಿ ಆತ್ಮವಿಶ್ವಾದ ಕೊರತೆ ಎದ್ದು ಕಾಣುತ್ತದೆ. ಪ್ರಾಮಾಣಿಕತೆ ಇಲ್ಲದ, ನಿಯತ್ತಿಲ್ಲದ ವ್ಯಕ್ತಿಯಿಂದ ಯಾವ ಸ್ವಾತಂತ್ರ್ಯವನ್ನು ಪಡೆಯಲು ಸಾಧ್ಯ? ಎಂಬ ಆಪಾದನೆಗಳು ಒಬ್ಬ ಪ್ರಾಮಾಣಿಕನಿಗೆ ಸಮಾಜವನ್ನು ಎದುರು ಹಾಕಿಕೊಂಡು ಎದುರಿಸಲು ಕಷ್ಟವಾಗುತ್ತದೆ.

ಒಟ್ಟಿನಲ್ಲಿ ಕಥೆಯು 'ಎಕ್ಸ್'ನ ಮೂಲಕ "ಆರೋಗ್ಯಪೂರ್ಣ ಸಮಾಜದ ನಿರ್ಮಾಣದ ಹಂಬಲವುಳ್ಳ ಯುವ ಬರಹಗಾರ ಅದರ ಸಾಕಾರಕ್ಕಾಗಿ ಕಮ್ಯುನಿಸ್ಟ್ ಪಕ್ಷದ ಸದಸ್ಯನಾಗುತ್ತಾನೆ. ಅಲ್ಲಿನ ಅಂಧ ನೀತಿಯಿಂದ ಪಕ್ಷದ ಶಿಸ್ತಿನ ಹೆಸರಿನಲ್ಲಿ ಅವನ ಅಭಿವ್ಯಕ್ತಿಯ ಸ್ವಾತಂತ್ರ್ಯವು ದಮನವಾಗುತ್ತದೆ. ಕೊನೆಗೆ ಪಕ್ಷದ ಆಂತರಿಕ ಸಂಘರ್ಷ, ಕಾಲೆಳೆಯುವ ಪ್ರವೃತ್ತಿ ಗುಂಪುಗಾರಿಕೆಯಿಂದ ಪ್ರಾಮಾಣಿಕ ವ್ಯಕ್ತಿತ್ವದ ಈತನ ಮೇಲೆ ಪಕ್ಷದ್ರೋಹ ಆಪಾದನೆ ಹೊರಿಸಲಾಗುತ್ತದೆ. ಪಕ್ಷದಿಂದ ಹೊರ ಹಾಕಲ್ಪಡುತ್ತಾನೆ" (ಮಹೇಶ ಎಂ.ಎಂ, ೨೦೦೯, ಪುಟ-೬೮.) ಎಂದು 'ಜಿಸ್ಟ್' ಮಾಡಬಹುದು.

### ೪.೪. ಅ.ನ. ಕೃಷ್ಣರಾಯ ಅವರ ಕಥೆಯಲ್ಲಿನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು

ಪೂರ್ಣ ಹೆಸರು ಅರಕಲಗೂಡು ನರಸಿಂಗರಾವ್ ಕೃಷ್ಣರಾವ್. ಕನ್ನಡ ಸಾಹಿತ್ಯದ ವಿವಿಧ ಕ್ಷೇತ್ರಗಳಲ್ಲಿ ವಿಪುಲವಾದ ಕೃತಿಗಳನ್ನು ಬರೆದಿದ್ದಾರೆ. ಸುಮಾರು ೧೯೦ ಗ್ರಂಥಗಳನ್ನು ರಚಿಸಿದ್ದಾರೆ. ಅ.ನ.ಕೃ. ಅವರು ಪ್ರಗತಿಶೀಲ ಸಾಹಿತ್ಯ ಚಳುವಳಿಯ ಪ್ರವರ್ತಕರು. ಈ ಕ್ಷೇತ್ರದಲ್ಲಿ ಇವರು ಹೊಸ ಲೇಖಕರ ಒಂದು ಗುಂಪನ್ನೇ ನಿರ್ಮಿಸಿದರು. ಸಾಹಿತ್ಯಕ್ಕೆ ಒಂದು ಹೊಸ

ತಿರುವನ್ನು ತಂದುಕೊಟ್ಟರು. (ರಾಜಪ್ಪ ದಳವಾಯಿ, ೧೯೯೬, ಪುಟ-೧೨೪.) ನೂರಾ ಹನ್ನೆರಡು ಕಾದಂಬರಿಗಳು ಒಂಭತ್ತು ಕಥಾ ಸಂಕಲನಗಳು ಪ್ರಕಟಗೊಂಡಿವೆ. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಕೃಷಿಗೈದ ಶ್ರೀಯುತರು ನಾಡುಕಂಡ ಶ್ರೇಷ್ಠ ಸಾಹಿತಿಗಳಲ್ಲಿ ಅಗ್ರಗಣ್ಯರೆನಿಸಿದ್ದಾರೆ.

ಭಾರತ ಬ್ರಿಟೀಷ ಆಡಳಿತ ವ್ಯವಸ್ಥೆಗೆ ಒಳಪಟ್ಟರೂ ಇಪ್ಪತ್ತನೆಯ ಶತಮಾನದ ಆರಂಭದಿಂದ ಅಲ್ಲಲ್ಲಿ ಅದಕ್ಕೆ ಪ್ರತಿಭಟನೆಗಳು ಕಾಣಿಸಿಕೊಂಡವು. ಇಂಗ್ಲೀಷ ಭಾಷೆ, ಸಾಹಿತ್ಯದ ಪರಿಚಯದಿಂದಾಗಿ ಭಾರತೀಯ ಬರಹಗಾರರು ಹೊಸ ವಿಚಾರ, ಆದರ್ಶ ರೂಢಿಸಿಕೊಂಡು, ಸಂಸ್ಕೃತಿ, ಸ್ವಾತಂತ್ರ್ಯದ ತುಡಿತ, ಇತಿಹಾಸಗಳ ಪುನರ್ ಶೋಧದಲ್ಲಿ ತೊಡಗಿದರು. ನವೋದಯ ಕಾಲದ ಬರಹಗಾರರಿಗೆ ಆದರ್ಶಗಳು, ಕನಸುಗಳು ಧಾರಾಳವಾಗಿದ್ದವು. ಪರಂಪರೆ ಆಧುನಿಕತೆಗಳ ಮುಖಾಮುಖಿಯಲ್ಲಿ ಹೊಸ ಉತ್ಸಾಹದಲ್ಲಿ ಸಾಹಿತ್ಯ ಪುಷ್ಟಿ ಪಡೆಯತೊಡಗಿತ್ತು. ಪ್ರಗತಿಶೀಲರ ದೊಡ್ಡ ಪಡೆಯೊಂದು ರೂಪಗೊಂಡಿತು.(ಶಾಂತಾ ಇಮ್ರಾಪೂರ ಮತ್ತು ಮೋಹನ ನಾಗಮ್ಮನವರು, ೨೦೧೬, ಪುಟ-೧೨೫.) ಆ ಪಡೆಗೆ ನಾಯಕರಂತೆ ಅ.ನ.ಕೃ. ಅವರು ಶೋಭಿಸಿದರು. "ಅ.ನ.ಕೃ. ಅವರ ಕಥೆಗಳಿಗಿಂತ ಅವರ ವಾದ ಉಳಿದವರ ಮೇಲೆ ಹೆಚ್ಚು ಪ್ರಭಾವವನ್ನು ಬೀರಿತು. ಅವರ ಪ್ರಭಾವಲಯದಲ್ಲಿ ಬಂದ ಹೊಸ ಬರಹಗಾರರು ಕಾದಂಬರಿಯಂತೆಯೇ ಸಣ್ಣಕಥೆಯಲ್ಲಿಯೂ ಪ್ರಗತಿಶೀಲತೆಯ ಹೊಸ ಭಾವನೆಯಿಂದ ಪ್ರೇರಿತರಾಗಿ ಮುಂದುವರಿದರು. ಆದರೆ ಇಲ್ಲಿ ಒಂದು ಮಾತನ್ನರಿಯುವುದು ಅವಶ್ಯಕವಾಗಿದೆ. ಪ್ರಗತಿಶೀಲತೆ ಇವರ ಸಾಹಿತ್ಯ ಜೀವನದಲ್ಲಿಯ ಒಂದು ಅವಸ್ಥೆ ಮಾತ್ರ. ಅದು ಬಂದಷ್ಟೇ ಬೇಗ ಸರಿದುಹೋಯಿತು. ಅದರ ಪ್ರಭಾವದಿಂದ ಉಂಟಾದ ಬರವಣಿಗೆಯ ಶೈಲಿ ಮಾತ್ರ ಉಳಿಯಿತು" (ಕೀರ್ತಿನಾಥ ಕುರ್ತಕೋಟಿ, ೨೦೧೦, ಪುಟ-೧೬೬.) ಎಂಬ ಧೋರಣೆಯ ವಿಮರ್ಶೆ ಇವರ ಕಥಾ ಸಾಹಿತ್ಯಕ್ಕೆ ಅಂಟಿಕೊಂಡಿದೆ.

ಅನಕೃ ಅವರ, ೧೯೩೦ರಲ್ಲಿ ಮಿಂಚು, ೧೯೩೨ರಲ್ಲಿ ಕಿಡಿ, ೧೯೪೨ರಲ್ಲಿ ಕಾಮನಸೋಲು, ೧೯೪೩ರಲ್ಲಿ ಪಾಪ-ಪುಣ್ಯ, ೧೯೪೫ರಲ್ಲಿ ಕಣ್ಣಮುಚ್ಚಾಲೆ, ೧೯೪೭ರಲ್ಲಿ ಅಗ್ನಿಕನ್ನೆ, ೧೯೫೦ರಲ್ಲಿ ಶಿಲ್ಪಿ, ೧೯೭೨ರಲ್ಲಿ ಸಮರಸುಂದರಿ ಎಂಬ ಎಂಟು ಕಥಾ ಸಂಕಲನಗಳು ಇದುವರೆಗೆ ಪ್ರಕಟಗೊಂಡಿವೆ. ಇವರ ಸಾಹಿತ್ಯವನ್ನು ಕುರಿತಂತೆ ತರಾಸು, ದೇವೇಂದ್ರಕುಮಾರ ಹಕಾರಿ, ಮ.ಗ.ಶೆಟ್ಟಿ ಶ್ರೀನಿವಾಸ ಉಡುಪ, ವಿ.ಪಿ.ಕುಲಕರ್ಣಿ, ವೀರೇಗೌಡ ಮೊದಲಾದವರು ಚರ್ಚಿಸಿರುವುದನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು. (ಚಂದ್ರಶೇಖರ. ಕೆ.ಟಿ., ೨೦೦೫, ಮುನ್ನುಡಿ ಪುಟ-೧೨.) ಪ್ರಸ್ತುತ ಅವರ ಕಥೆಗಳನ್ನು ಮಾತ್ರ ಪ್ರಗತಿಶೀಲ ದೃಷ್ಟಿಯಿಂದ ಸ್ವಾತಂತ್ರ್ಯದ ಮಿಡಿತಗಳನ್ನು ಹೆಕ್ಕಿ ತೋರಿಸುವದಾಗಿದೆ.

## ಗಿರಿಜವ್ವನ ರೊಟ್ಟಿ

"ಕಳೆದ ಶತಮಾನದ ಮೂವತ್ತು, ನಲವತ್ತರ ದಶಕ ಸ್ವಾತಂತ್ರ್ಯ ಚಳುವಳಿ ಬಿರುಸಾಗಿದ್ದ ಕಾಲ. ನಾಡಿನ ಪ್ರತಿ ಜೀವವೂ ಸ್ವಾತಂತ್ರ್ಯಕ್ಕಾಗಿ ಹಂಬಲಿಸುತ್ತಿದ್ದ ಸನ್ನಿವೇಶ. ಈ ಹೋರಾಟದಲ್ಲಿ ಸಾಮಾನ್ಯ ವ್ಯಕ್ತಿಗಳೂ ಹೇಗೆ ಪಾಲ್ಗೊಳ್ಳುತ್ತಿದ್ದರು ಎಂಬುದನ್ನು ಅ.ನ್.ಕೃ. ತಮ್ಮ ಅನೇಕ ಕಥೆಗಳಲ್ಲಿ ಚಿತ್ರಿಸುತ್ತಾರೆ." (ಚಂದ್ರಶೇಖರ. ಕೆ.ಟಿ., ೨೦೦೫, ಮುನ್ನುಡಿ ಪುಟ-೧೫.) ಅಂತಹ ಕಥೆಗಳಲ್ಲಿ 'ಗಿರಿಜವ್ವನ ರೊಟ್ಟಿ'ಯು ಒಂದು. ಗಿರಿಜವ್ವ ಇನ್‌ಸ್ಪೆಕ್ಟರ್ ಗುರುಬಸಪ್ಪನ ಹೆಂಡತಿ. ಹಿಂದೂಸ್ಥಾನದಲ್ಲಿ ಬ್ರಿಟೀಷ್ ಸರಕಾರವಿರುವುದು ಹಿಂದೂಸ್ತಾನದ ಪುಣ್ಯ ಎಂದು ಭಾವಿಸಿದ್ದ ಗುರುಬಸಪ್ಪನಿಗೆ ಕ್ರಾಂತಿಕಾರರಾದ ಸ್ವಾತಂತ್ರ್ಯ ಹೋರಾಟಗಾರರನ್ನು ಹಿಡಿದು ಬಿಳಿಯರಿಗೆ ಒಪ್ಪಿಸುವುದೆಂದರೆ ಇನ್ನಿಲ್ಲದ ಉತ್ಸಾಹ. ಏಕೆಂದರೆ ಅವನಿಗೆ ಅದು ಅನ್ನ ನೀಡುವ ದೇವರು ಎಂಬ ಭಾವನೆ. ತನಗೆ ಸರ್ಕಾರಿ ಕೆಲಸವನ್ನು ಕೊಟ್ಟು ದೊಡ್ಡ ಉಪಕಾರವನ್ನು ಮಾಡಿದ ಅದಕ್ಕೆ ತನ್ನ ಋಣವನ್ನು ತೀರಿಸಬೇಕೆಂದು ಬಾಹ್ಯವಾಗಿ ಅದನ್ನು ಅವನ ಪ್ರಾಮಾಣಿಕತೆ ಎಂದು ಒಪ್ಪಿಕೊಂಡವ. ಅದು ಆಂತರಿಕವಾಗಿ ದೇಶ ದ್ರೋಹದ ಕೆಲಸವೇ ಆಗಿದೆ.

ಖಾನಾಪುರದ ಕಾಡಿನಲ್ಲಿ ಕ್ರಾಂತಿಕಾರರ ಒಂದು ತಂಡವಿದೆಯೆಂದು ಸುದ್ದಿ ತಿಳಿದ ಇನ್‌ಸ್ಪೆಕ್ಟರ್ ಗುರುಬಸಪ್ಪನಿಗೆ ಎಲ್ಲಿಲ್ಲದ ಉತ್ಸಾಹ, ಕಾತುರತೆ. ಅವನ ಹೆಂಡತಿ ಮಾಡಿಕೊಟ್ಟ ಬಿಸಿ ರೊಟ್ಟಿಯನ್ನು ತಿನ್ನದೆ ಅವರನ್ನು ಹಿಡಿಯಲು ಹೋಗುತ್ತಾನೆ ಎಂದರೆ ಅವನಲ್ಲಿ ಬ್ರಿಟಿಷ್ ಅನ್ನದ ಋಣ ಎಷ್ಟಿರಬೇಕು? ಅವತ್ತು ಖಾನಾಪುರ ಕಾಡಿನಲ್ಲಿ ಕ್ರಾಂತಿಕಾರರನ್ನು ಎದುರುಗೊಂಡು ದುಗ್ಗನಿಗೆ ಗುಂಡಿನ ಪೆಟ್ಟು ಬೀಳುತ್ತದೆ. ಅದೇ ರಾತ್ರಿ ತಿಳಿದೋ ತಿಳಿಯದೋ ಆಶ್ರಯವನ್ನು ಹುಡುಕುತ್ತ ಅವನ ಮನೆಗೇ ಬರುತ್ತಾನೆ. ಗುಂಡಿನ ಪೆಟ್ಟು ಬಿದ್ದು ನರಳುತ್ತಿರುವ ದುಗ್ಗನಿಗೆ ಗುರುಬಸಪ್ಪನ ಹೆಂಡತಿ ತನ್ನ ಗಂಡನಿಗೆ ಮಾಡಿದ್ದ ರೊಟ್ಟಿಯನ್ನು ಕೊಟ್ಟು ಉಪಚರಿಸುತ್ತಾಳೆ. ಅವನನ್ನು ತನ್ನ ಒಡಹುಟ್ಟಿದವನೆಂದು ಭಾವಿಸುತ್ತಾಳೆ. ಹಿಂತಿರುಗಿ ಬಂದ ಗುರುಬಸಪ್ಪನಿಗೆ ದುಗ್ಗ ತನ್ನ ಮನೆಯಲ್ಲೆ ಆಶ್ರಯ ಪಡೆದಿದ್ದಾನೆ ಎಂದು ತಿಳಿಯುವ ವೇಳೆಗೆ ಆತನ ರಿವಾಲ್ವಾರ್ ತೆಗೆದುಕೊಂಡು ಅಲ್ಲಿಂದ ದುಗ್ಗ ಪರಾರಿಯಾಗಿರುತ್ತಾನೆ. ವಿಷಯವನ್ನು ಗಿರಿಜವ್ವನ ಬಳಿ ಪ್ರಸ್ತಾಪಿಸಿದಾಗ 'ಕ್ರಾಂತಿಕಾರರು ಹೇಗೆ ದೇಶದ್ರೋಹಿಗಳು? ಅವರನ್ನು ನೀವೇಕೆ ಕೊಲ್ಲಬೇಕು? ಎಂದು ಪ್ರಶ್ನಿಸುತ್ತಾಳೆ. ಈ ಪ್ರಶ್ನೆಗಳಲ್ಲಿ ಅವಳ ದೇಶಪ್ರೇಮ, ದೇಶಭಕ್ತಿ, ಸ್ವಾತಂತ್ರ್ಯದ ತುಡಿತವು ವ್ಯಕ್ತವಾಗುತ್ತದೆ. ಬಿಳಿಯರ ಸರ್ಕಾರಕ್ಕೆ ನೀವೇಕೆ ನಿಮ್ಮ ದೇಹ ತೇಯಬೇಕು? ಎನ್ನುವ ಅವಳ ಪ್ರಶ್ನೆಗಳು ಗುರುಬಸಪ್ಪನಿಗೆ ದಿಗಿಲು ಹುಟ್ಟಿಸುತ್ತವೆ. ಅಲ್ಲದೇ ತಾನು ಕಷ್ಟಪಟ್ಟು ದುಡಿಯುತ್ತಿರುವುದು ತನ್ನ ಸುಖಕ್ಕಲ್ಲ ಅದು ನಿನ್ನ ಸುಖಕ್ಕೆ, ನಿನ್ನನ್ನು ಸುಖವಾಗಿ ಇರಿಸುವುದಕ್ಕೆ

ಎಂದು ತನ್ನ ದೇಶದ್ರೋಹ ಕೆಲಸದಲ್ಲಿ ಅವಳಿಗೂ ಪಾಲನ್ನು ಕೊಡಲು ಯತ್ನಿಸುತ್ತಾನೆ. ತನ್ನ ನೆಲದ ಜೋಳದ ರೊಟ್ಟಿಯ ಋಣ, ನಿನ್ನ ಬಿಳಿಯರ ಸರ್ಕಾರದ ಪಗಾರಕ್ಕೆ ಹೋಲಿಕೆ ಹೇಗೆ ಆದೀತು? ಅವಳಲ್ಲಿನ ಸ್ವಾತಂತ್ರ್ಯದ ಸ್ವಾಭಿಮಾನವು ಮತ್ತಷ್ಟು ಸಿಡಿದೇಳುತ್ತದೆ. 'ಗಾಂಧೀ ಜನಗಳ ರಕ್ತದ ಮೇಲೆ ನನ್ನ ಸುಖ ಬೆಳೆಸಬೇಡಿ, ಅಂಥ ಸುಖ ನನಗೆ ಬೇಡ' ಎನ್ನುತ್ತಾಳೆ. ಇವಳ ಕಠೋರವಾದ ಮಾತುಗಳು ಗುರುಬಸಪ್ಪನ ಮನಃ ಪರಿವರ್ತನೆಗೆ ಕಾರಣವಾಗುತ್ತವೆ. ಆತನ ಅಂತಃಕರಣವು ಕರಗಿ ತಾನು ಹೋರಾಡಿ ಹಿಡಿದ ದುಗ್ಗನನ್ನು ಸರ್ಕಾರಕ್ಕೆ ಒಪ್ಪಿಸದೇ ತನ್ನ ಕೆಲಸಕ್ಕೆ ತಿಲಾಂಜಲಿ ಹೇಳುತ್ತಾನೆ. ಹೀಗೆ ಕಥೆ ಸ್ವಾತಂತ್ರ್ಯದ ಮಿಡಿತಗಳನ್ನು ಹೊಂದಿದ್ದ ಒಬ್ಬ ಸಾಮಾನ್ಯ ಮನೆಗೆಲಸದ ಸ್ತ್ರೀ ಅಧಿಕಾರಿಯೊಬ್ಬನ ಮನಸ್ಸನ್ನು ಗೆಲ್ಲುತ್ತಾಳೆ.

ಈ ಕಥೆ ಗಿರಿಜವ್ವನ ದೇಶಪ್ರೇಮ ಹಾಗೂ ಅದರ ಪ್ರಭಾವದಿಂದ ಗುರುಬಸಪ್ಪ ಬದಲಾಗುವುದನ್ನು ಚಿತ್ರಿಸುತ್ತದೆ. ವಸಾಹುತುಶಾಹಿಗೆ ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಪ್ರತಿಭಟನೆ ವ್ಯಕ್ತವಾಗುತ್ತಿದ್ದ ಅಥವಾ ಅದನ್ನು ಒಪ್ಪಿ ಸ್ವೀಕರಿಸಿದ್ದ ರೀತಿ ಒಂದು ನೆಲೆ. ಆದರೆ ಪರಿಸರದಲ್ಲೇ ವಸಾಹತುಶಾಹಿಗೆ ಪ್ರತಿಕ್ರಿಯೆ ಹೇಗಿತ್ತು ಎಂಬುದನ್ನು ಈ ಕಥೆ ಪ್ರಧಾನವಾಗಿ ಪ್ರಸ್ತಾಪಿಸುತ್ತದೆ. ಅವಿದ್ಯಾವಂತರು, ಕೃಷಿಕರು, ಕಾರ್ಮಿಕರು, ಸಾಮಾನ್ಯ ಸ್ತ್ರೀ ಸಮುದಾಯ ಇವರೆಲ್ಲರೂ ಅವ್ಯಕ್ತವಾಗಿ ರೂಪುಗೊಂಡಿದ್ದ ಪ್ರತಿಭಟನೆಯ ದನಿಯನ್ನು (ಚಂದ್ರಶೇಖರ. ಕೆ.ಟಿ., ೨೦೦೫, ಮುನ್ನುಡಿ ಪುಟ–೧೬.)

ಈ ಕಥೆಯು ಹೊರಹಾಕುತ್ತದೆ. ಮುಂದುವರೆದಂತೆ ಈ ಕಥೆಯಲ್ಲಿ ಸ್ವಾತಂತ್ರ್ಯ ಚಳುವಳಿಯ ರಾಷ್ಟ್ರೀಯ ಧಾರೆಯಲ್ಲಿ ಅನಕೃ ತಮ್ಮನ್ನು ಗಂಭೀರವಾಗಿ ತೊಡಗಿಸಿಕೊಂಡಂತೆ ತೋರುತ್ತದೆ. ಅವರ ಸಂವೇದನೆ ಆ ಸಂಬಂಧ ತೀವ್ರವಾಗಿ ಚಿಂತಿಸಿದೆ. ಗಾಂಧೀಜಿ, ಅವರ ಚಿಂತನೆಗಳ ಪ್ರಸ್ತಾಪ ಅವರಲ್ಲಿ ಮತ್ತೆ ಮತ್ತೆ ವ್ಯಕ್ತವಾಗುತ್ತದೆ. "ಆದರೂ ಅನಕೃ ತಾತ್ವಿಕವಾಗಿ ಸುಭಾಷ್‌ಚಂದ್ರಬೋಸರ, ತಿಲಕರ ವಿಚಾರಧಾರೆಗೆ ಒಲಿದಂತೆ ಕಾಣುತ್ತದೆ" (ಚಂದ್ರಶೇಖರ. ಕೆ.ಟಿ., ೨೦೦೫, (ಮುನ್ನುಡಿ) ಪುಟ–೧೭.) ಎಂಬ ವಿಮರ್ಶೆ ಓದುಗನಲ್ಲಿ ಉಳಿದುಕೊಳ್ಳುತ್ತದೆ.

ಪ್ರಗತಿಶೀಲ ಕಥೆಗಳಲ್ಲಿ ಸ್ವಾತಂತ್ರ್ಯ ಹೋರಾಟದ ದಟ್ಟವಾದ ಚಿತ್ರಣ ಹೆಚ್ಚಾಗಿ ಮೂಡಿಬಂದಿರುವುದು ಬಸವರಾಜ ಕಟ್ಟೀಮನಿಯವರಲ್ಲಿ ಮಾತ್ರ, ಉಳಿದಂತೆ ತರಾಸು, ನಿರಂಜನ, ಅನಕೃ, ದುನಿಂಬೆಳಗಲಿ ಮೊದಲಾದವರಲ್ಲಿ ಈ ಚಿತ್ರಣ ಸಾಂದರ್ಭಿಕವಾಗಿದೆ ಅಷ್ಟೇ.ಇವರ ದೃಷ್ಟಿಕೋನ ಸಮಾಜವಾದ–ಸಮಾನತೆಗಳ ಕಡೆಗೆಯೇ ಹೆಚ್ಚಾಗಿರುವುದು ಕಂಡು ಬರುತ್ತದೆ.

ಪ್ರಗತಿಶೀಲ ಕಥೆಗಳಲ್ಲಿ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು ದಟ್ಟವಾಗಿ ಮೂಡಿಬಂದಿರುವಂತೆ ಏನೋ, ಅದು ಪ್ರೇಮ-ಕಾಮ, ಹಸಿವು-ಬಡತನ, ಸ್ವಾತಂತ್ರ್ಯ ನಂತರದ ಹತಾಶೆ-ನಿರಾಸೆಗಳು ಕಾಣಬಹುದಾಗಿದೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಧರ್ಮ-ದೇವರು ಬಾಂಧವ್ಯ, ರಕ್ತಸಂಬಂಧ ಮೊದಲಾದವುಗಳು ದೂರ ಸರಿದು ಸ್ವಾಭಿಮಾನ,ದೇಶಾಭಿಮಾನ ಹಾಗೂ ಸ್ವಾತಂತ್ರ್ಯದ ತುಡಿತಗಳು ಮಾತ್ರ ಪ್ರಖರವಾಗಿ ಗೋಚರಿಸುತ್ತವೆ.

ಈ ಕಥೆಗಳಲ್ಲಿ ಕಮ್ಯುನಿಷ್ಟ ಧೋರಣೆಯ ಮಾರ್ಕ್ಸ್, ಲೆನಿನ್ ಹಾಗೂ ಸಮಾಜವಾದದ ಗಾಂಧೀಜಿಯವರ ದಟ್ಟವಾದ ಪ್ರಭಾವದ ಹಿನ್ನೆಲೆಯ ಹೆಚ್ಚಾಗಿದೆ. ಗಿರಿಜವ್ವನ ರೊಟ್ಟಿಯಂಥಹ ಕಥೆ ದೇಶಿ-ವಿದೇಶಿಗಳೆರಡನ್ನೂ ತೌಲನೀಕರಿಸಿ, ಹೆತ್ತ ತಾಯಿ:ಹೊತ್ತ ಭೂಮಿಗಳು ಎಂದೆಂದಿಗೂ ಆದರ್ಶಮಯವಾಗಿರುವುದು ಎಂಬುದನ್ನು ಸಾಬೀತುಪಡಿಸಿದೆ. ಬಸವರಾಜ ಕಟ್ಟೀಮನಿಯವರ ಬಹುತೇಕ ಸ್ವಾತಂತ್ಯ ಚಳುವಳಿಯ ಸಂದರ್ಭದಲ್ಲಿಯೇ ಹುಟ್ಟಿ ಬಂದಿರುವುದಾಗಿದೆ. ಅಲ್ಲಿ ಹೋರಾಟದ ಕಿಚ್ಚು-ರೊಚ್ಚು-ಆವೇಶ ಉದ್ವೇಗ ಹಾಗೂ ತೀವ್ರತೆ ಹೆಚ್ಚಾಗಿ ಕಂಡು ಬಂದಿದೆ. ಬಾಲವೀರ ಕಿಸನ್, ದೇಶಪ್ರೇಮಿ ಅನ್ವರ್, ದುರ್ಗನಿಗೆ ಆಶ್ರಯ ಕೊಟ್ಟ ಗಿರಿಜವ್ವ ಮೊದಲಾದವರು ಸ್ವಾತಂತ್ರ್ಯ ಭಾರತ ಎಂದೂ ಮರೆಯಬಾರದೆಂಬ ಹಂಬಲ ಈ ಕಥೆಗಳ ಅಂತರಂಗದ ಕಾಳಜಿ.

# ಅಧ್ಯಾಯ –೫

## ಪ್ರಗತಿಶೀಲ ಕಾದಂಬರಿ ಸಾಹಿತ್ಯದಲ್ಲಿ ಸ್ವಾತಂತ್ರ್ಯ ಹೋರಾಟದ ನೆಲೆಗಳು

'ಕಾದಂಬರಿ' ಕನ್ನಡ ಸಾಹಿತ್ಯದ ಇತರ ಎಲ್ಲ ಪ್ರಕಾರದಲ್ಲಿ ಅತ್ಯಂತ ಲೋಕಪ್ರಿಯ ಸಾಹಿತ್ಯ ಪ್ರಕಾರ. ಜಗತ್ತಿನ ಯಾವುದೇ ಭಾಷೆಯ ಸಾಹಿತ್ಯವನ್ನು ಗಮನಿಸುವದಾದರೆ ಅಲ್ಲಿ 'ಕಾದಂಬರಿ' ಪ್ರಕಾರಕ್ಕೆ ಆದ್ಯತೆಯನ್ನು ನೀಡಿದ ಲೇಖಕರೇ ಹೆಚ್ಚು ಕಾಣಸಿಗುತ್ತಾರೆ. ಇದರ ಲೋಕಪ್ರಿಯತೆಗೆ ಕಾರಣ; ಮುಖ್ಯವಾಗಿ ಸಾಮಾನ್ಯ ಸಮುದಾಯದ ಆಶೋತ್ತರಗಳನ್ನು, ಅಭಿರುಚಿಗಳನ್ನು, ಸಾಂಸ್ಕೃತಿಕ ಚಹರೆಗಳನ್ನು ಇದು ವಿವರವಾಗಿ ಬಿತ್ತರಿಸುತ್ತದೆ. ಇಲ್ಲಿ ಓದುಗ ಒಂದು ವಸ್ತುವಿನ, ವ್ಯಕ್ತಿಯ, ಸಮಾಜದ ಕುರಿತು ದೀರ್ಘವಾಗಿ ಓದುತ್ತಾ ಹೋಗುತ್ತಾನೆ. ಇದರಿಂದ ಅವನಲ್ಲಿ ಕ್ಷಣಿಕವಲ್ಲದ, ಆಳವಾಗಿ ಬೇರೂರುವ ಭಾವನೆಗಳು ಕಾದಂಬರಿಯನ್ನು ಪ್ರೀತಿಸುವಂತೆ ಮಾಡುತ್ತವೆ. ಆಧುನಿಕ ಸಾಹಿತ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡರೆ ಕಾದಂಬರಿಗಳು ಅಪಾರವಾಗಿ ಎಲ್ಲ ಭಾಷೆಗಳಲ್ಲಿಯೂ ಮೂಡಿಬಂದಿವೆ. ಅಂತಹ ಕಾದಂಬರಿಯ ಕುರಿತು ಅಧ್ಯಯನವನ್ನು ಕೈಗೊಳ್ಳುವದೆಂದರೆ ಅದು– ಕನ್ನಡ ಸಂಸ್ಕೃತಿಯ ಸಂದರ್ಭದಲ್ಲಿ 'ಮಾರ್ಗ–ದೇಸಿ'ಗಳಂಥ ಸಂವಾದಗಳು, ಕನ್ನಡ ಕಾದಂಬರಿಯಲ್ಲಿ ಪರಿವರ್ತನೆಯ ಪ್ರಕ್ರಿಯೆಯನ್ನು ಒಳಗೊಂಡಂತೆ ನಡೆದ ಸಂವಾದವೇ ಆಗಿದೆ. ಅಂಥವುಗಳು ನಡೆಯುತ್ತಿವೆಯೇ ಎಂದು ಕೇಳುವುದೂ ಅವಶ್ಯವಿದೆ. ಇಂಥ ಪ್ರಶ್ನೆಗಳಿಗೆ ಉತ್ತರ ದೊರೆತ ಹೊರತು ಕನ್ನಡ ಕಾದಂಬರಿಯ ವೈಶಿಷ್ಟ್ಯ ಏನು ಎನ್ನುವುದು ಗೊತ್ತಾಗುವಂತಿಲ್ಲ (ಆಮೂರ.ಜಿ.ಎಸ್., ೨೦೧೩, ಪುಟ–೧೬.) ಎಂದು ಜಿ.ಎಸ್. ಆಮೂರ ಅವರು ಕನ್ನಡ ಕಾದಂಬರಿಗಳ ಕುರಿತು ವಿಮರ್ಶಿಸುತ್ತಾರೆ. ಕನ್ನಡ ಕಾದಂಬರಿಗಳ ಉಗಮವನ್ನು ಗುರುತಿಸುವುದೆಂದರೆ ಅದು ಭಾರತೀಯ ಇತರ ಭಾಷೆಯ ಕಾದಂಬರಿಯ ಉಗಮದ ವ್ಯಾಪ್ತಿಯನ್ನು ಹೊಂದುತ್ತದೆ. ಕಾದಂಬರಿ ಪ್ರಕಾರವು ಭಾರತೀಯ ಸಾಹಿತ್ಯದಲ್ಲಿ ಮೊದಲು ಕಾಣಸಿಗುವುದು ಬಂಗಾಲಿ ಭಾಷೆಯ ಲೇಖಕ ತೇಕ್ ಚಂದ್ ಠಾಕೂರ್ ಅವರ 'ಆರಾತೀರ ಫರೇರ ದುಲಾಲ' (ಸುರೇಶ ಪಾಟೀಲ, ೨೦೦೮, ಪುಟ–೬೮.) ಕಾದಂಬರಿಯ ಮೂಲಕ. ಇದು ೧೮೫೭ರಲ್ಲಿ ಪ್ರಕಟವಾಯಿತು. ಇದು ಸಾಮಾಜಿಕವಾದ್ದರಿಂದ ಬಹುಶಃ ಮುಂದಿನ ಲೇಖಕರ ಮೇಲೆ ಈ ಕಾದಂಬರಿಯ ಪ್ರಭಾವವು ಕಡಿಮೆ ಎನ್ನಬಹುದು. ಆಧುನಿಕತೆಯ ಪ್ರಭಾವವು ಕನ್ನಡ ಸಾಹಿತ್ಯದಲ್ಲಿ ಕಾವ್ಯಕ್ಕಿಂತ ಮೊದಲು ಕಾದಂಬರಿಯಲ್ಲಿ ಕಾಣಿಸಿಕೊಂಡಿತೆನ್ನುವುದು ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಮಹತ್ತ್ವದ್ದಾಗಿದೆ. ಇಂಗ್ಲಿಷ್ ಶಿಕ್ಷಣದಿಂದ ನೇರವಾಗಿ ಬಂಗಾಲಿ ಹಾಗೂ ಮರಾಠಿಗಳಂಥ ಭಾರತೀಯ ಭಾಷೆಗಳಿಂದ

ಸುತ್ತಾಗಿ ಹರಿದುಬಂದ ಪಾಶ್ಚಾತ್ಯ ಪ್ರಭಾವವನ್ನು ಕನ್ನಡ ಸಾಹಿತ್ಯದಲ್ಲಿ ನಾವು ಕಾಣುತ್ತೇವೆ. ಇದನ್ನು ಜಿ.ಎಸ್. ಆಮೂರ, ಕೀರ್ತಿನಾಥ ಕುರ್ತಕೋಟಿ, ಜಿ.ಎಚ್. ನಾಯಕ, ಎಚ್.ಎಸ್. ವೆಂಕಟೇಶಮೂರ್ತಿ ಮೊದಲಾದ ಆಧುನಿಕ ವಿಮರ್ಶಕರು ಅನೇಕ ಸಂದರ್ಭದಲ್ಲಿ ವಿಶ್ಲೇಷಿಸಿರುವುದುಂಟು. ಆದರೆ ಪ್ರತ್ಯಕ್ಷದಲ್ಲಾಗಲಿ, ಪರೋಕ್ಷದಲ್ಲಾಗಲಿ ಪಾಶ್ಚಾತ್ಯ ಸಾಹಿತ್ಯದಲ್ಲಿ ಪ್ರಭಾವವಿದ್ದರೂ ಭಾರತೀಯ ಲೇಖಕರಲ್ಲಿ ತಮ್ಮದೇ ಸಾಂಸ್ಕೃತಿಕ ನೆಲೆಗಟ್ಟು, ಮನೋಧರ್ಮಗಳು, ಚಹರೆಗಳು ಕಾದಂಬರಿಯ ವಸ್ತುವಾಗಿ ವ್ಯಕ್ತವಾಗಿರುವುದನ್ನು ಕಾಣುತ್ತೇವೆ.

ಆರಂಭದ ಕನ್ನಡ ಸಾಹಿತ್ಯದಲ್ಲಿ ಇಂಗ್ಲಿಷ್ ಕಾದಂಬರಿಗಳ ಅನುವಾದ ನಡೆದಿವೆ. ೧೮೪೪ರಲ್ಲಿ ಬನಿಯನ್ 'ಪಿಲ್‌ಗ್ರಿಮ್ಸ್ ಪ್ರೊಗ್ರೆಸ್' ಎಂಬ ಕೃತಿಯು ಜಿ. ವೀಗಲ್ ಎಂಬುವರಿಂದ 'ಯಾತ್ರಸ್ಥನ ಸಂಚಾರ' ಎಂದು ಪ್ರಕಟಗೊಂಡಿತು. ೧೮೪೪ರಲ್ಲಿ ಡಿಫೋನ್ 'ರಾಬಿನ್‌ಸನ್ ಕ್ರೂಸೋ'ವನ್ನು ಕೃಷ್ಣಸ್ವಾಮಿ ಅಯ್ಯಂಗಾರ್ ಕನ್ನಡಿಸಿದರು. ೧೮೬೭ರಲ್ಲಿ 'ಹಿಸ್ಟರಿ ಆಫ್ ಲಿಟಲ್ ಹೆನ್ರಿ ಅಂಡ್ ಹಿಸ್ ಬೆರರ್' ಎಂಬ ಕಾದಂಬರಿಯನ್ನು ಮೊಗ್ಲಿಂಗ್ ಎನ್ನುವಾತ 'ಚಿಕ್ಕ ಹೆನ್ರಿ ಮತ್ತು ಅವನ ಬೊಯಿಯ ಕಥೆ' ಎಂದು ಅನುವಾದಿಸಿದರು. ಎಂ.ಎಸ್. ಪುಟ್ಟಣ್ಣನವರು 'ಸುಮತಿ ಮದನಕುಮಾರರ ಚರಿತ್ರೆ' ಎಂದು ಥಾಮಸ್ ಡೇಸ್ ಅವರ 'ಸ್ಯಾಂಡ್‌ಫರ್ಡ್ ಅಂಡ್ ಮರ್ಡನ್' ಕೃತಿಯನ್ನು ಅನುವಾದಿಸಿದರು. ೧೮೯೩ರಲ್ಲಿ 'ಕನ್ಯಾವಿತಂತು' ಆಂಗ್ಲಭಾಷೆಯ ಲೇಖಕ ಎಚ್. ಟೇಲರ್‌ನ 'ಎ ಸಿಸೀಲಿಯನ್ ಸಮರ್' ಕೃತಿಯ ಅನುವಾದವಾಗಿದೆ. ೧೯೦೨ರಲ್ಲಿ ಅಣ್ಣಾಜಿರಾವ್ ಎನ್ನುವವರು ಬುಲ್ವರ್ ಲಿಟನ್‌ನ 'ಹ್ಯಾರೋಲ್ಡ್' ಕೃತಿಯನ್ನು 'ಉಲ್ಲಾಸಿನಿ' ಎಂದು ಅನುವಾದಿಸಿದ್ದಾರೆ.(ಸುರೇಶ ಪಾಟೀಲ, ೨೦೦೮, ಪುಟ-೬೭) ಹೀಗೆ ಅನೇಕ ಕನ್ನಡ ಕಾದಂಬರಿಗಳು ಮೊದಮೊದಲು ಪಾಶ್ಚಾತ್ಯರ ಅನುಕರಣೆಯನ್ನು ಮಾಡಿದವಾದರೂ ಅದರಲ್ಲಿ ಕನ್ನಡದ ಸಾಂಸ್ಕೃತಿಕ ಪರಂಪರೆಯನ್ನು ವಸ್ತುವನ್ನಾಗಿ ಹೊಂದಿವೆ.

ಕನ್ನಡ ಸಾಹಿತ್ಯದಲ್ಲಿ ಕಾದಂಬರಿ ಪ್ರಕಾರವು ೧೯ನೆಯ ಶತಮಾನದಲ್ಲಿ ಮೂಡಿ, ೨೦ನೆಯ ಶಾತಮಾನದ ಕೊನೆಯಲ್ಲಿ ತನ್ನ ಪ್ರಭಾವವನ್ನು ಅಗ್ರಗಣ್ಯಗೊಳಿಸಿಕೊಂಡಿತು. ಸಾಮಾನ್ಯವಾಗಿ, ಕನ್ನಡ ಕಾದಂಬರಿಯ ಉಗಮವನ್ನು ಗುಳವಾಡಿ ವೆಂಕಟರಾಯರ 'ಇಂದಿರಾಬಾಯಿ' ೧೮೯೯, ಲಕ್ಷ್ಮಣ ಭೀಮರಾವ್ ಗದಗಕರ ಅವರ 'ಸೂರ್ಯಕಾಂತಾ' (೧೮೯೨), ವೆ.ತಿ. ಕುಲಕರ್ಣಿ (ಗಳಗನಾಥ) ಅವರ 'ಕುಮುದಿನಿ' (೧೯೧೦), ಬೋಳಾರ ಬಾಬೂರಾಯರ 'ವಾಗ್ದೇವಿ' (೧೯೦೮), ಕೆರೂರು ವಾಸುದೇವಾಚಾರ್ಯರರ 'ಇಂದಿರೆ' (೧೯೧೫), ಮೊದಲಾದ ಕಾದಂಬರಿಗಳಿಂದ ಗುರುತಿಸಬಹುದಾಗಿದೆ. "೧೮೭೫ ರಿಂದ ೧೯೩೦ರ ವರೆಗಿನ ಕಾಲವನ್ನು ಕನ್ನಡ ಕಾದಂಬರಿಯ ಉದಯದ ಕಾಲವೆಂದು

ಗುರುತಿಸಲಾಗಿದೆ." (ಜಿ.ಎಸ್. ಆಮೂರ, ೨೦೧೩, ಪುಟ-೨೧.) ಆದರೆ ಇದಕ್ಕೂ ಮೊದಲು ಕೆಂಪುನಾರಾಯಣನ 'ಮುದ್ರಾಮಂಜೂಷ' ಮತ್ತು ತುರಮರಿಯವರ 'ಬಾಣ ಕಾದಂಬರಿ' ಕೃತಿಗಳಲ್ಲಿ ಆಧುನಿಕ ಕಾದಂಬರಿಯ ಚಹರೆಗಳನ್ನು ಕಾಣಬಹುದು.

"ಕನ್ನಡದಲ್ಲಿ ಕಾದಂಬರಿ ಹುಟ್ಟುವದಕ್ಕಿಂತ ಮೊದಲು ಕನ್ನಡ ಗದ್ಯ ಪ್ರಕಾರವೊಂದು ಬೆಳೆದುಬರಬೇಕಾಗಿತ್ತು. ತಿರುಮಲಾರ್ಯನ 'ಚಿಕ್ಕದೇವರಾಜ ಬಿನ್ನಪ' ವಸ್ತು ಹಾಗೂ ಭಾಷೆ ಇವೆರಡು ದೃಷ್ಟಿಯಿಂದಲೂ ಪ್ರಾಚೀನ ಸಾಹಿತ್ಯರೂಪವಾಗಿದೆ. ಮುದ್ದಣನ 'ರಾಮಾಶ್ವಮೇಧ'ದ ನವೀನತೆ ಎಲ್ಲ ಶ್ರೇಷ್ಠ ಸಾಹಿತ್ಯಕ್ಕಿರುವ ಒಂದು ಲಕ್ಷಣವಾಗಿದೆ. ಅದರಲ್ಲಿ ಹೊಸ ಕಾದಂಬರಿಯ ರೂಪ-ರೇಷೆಗಳು ದೊರೆಯಲಾರವು. ಮುದ್ದಣ 'ಗೋದಾವರಿ' ಎಂಬ ಕಾದಂಬರಿಯನ್ನು ಅರ್ಧ ಮುಗಿಸಿದ್ದಾಗಿ ತಿಳಿದುಬಂದಿದೆ. ಕೆಂಪುನಾರಾಯಣನ 'ಮುದ್ರಾಮಂಜೂಷ'ದಲ್ಲಿಯ ಕಥನರೀತಿ ಕಾದಂಬರಿಗೆ ಹೆಚ್ಚು ಸಮೀಪವಾಗಿದೆ ಎನ್ನಬಹುದು. ಕಾದಂಬರಿಯನ್ನು ಬರೆಯದಿದ್ದರೂ, ಅದರ ಬರವಣಿಗೆಗೆ ಕನ್ನಡ ಗದ್ಯವನ್ನು ಹದಗೊಳಿಸಿದ ಶ್ರೇಯಸ್ಸು ಕೆಂಪುನಾರಾಯಣನಿಗೆ ಸಲ್ಲುತ್ತದೆ. ಹಳಗನ್ನಡದ ಭಾಷೆಯ ಬಿಗಿ ಕ್ರಮೇಣ ಸಡಿಲವಾಗುತ್ತ ಸರಳತೆ ಹಾಗೂ ಹೃದಯಂಗಮತೆಯ ಕಡೆಗೆ ತಿರುಗುವದನ್ನು ಮೊಟ್ಟಮೊದಲಿಗೆ 'ಮುದ್ರಾಮಂಜೂಷ'ದಲ್ಲಿ ಕಾಣುತ್ತೇವೆ" (ಕೀರ್ತಿನಾಥ ಕುರ್ತಕೋಟಿ, ೨೦೧೦, ಪುಟ-೧೮೨.) ಎಂದು ಕೀರ್ತಿನಾಥ ಕುರ್ತಕೋಟಿಯವರು ಕನ್ನಡ ಕಾದಂಬರಿಯ ಉಗಮವನ್ನು ದೇಸಿಯ ನೆಲೆಯಲ್ಲಿ ಹೇಳುತ್ತಾರೆ. ಇದರಲ್ಲಿ ಸತ್ಯಾಂಶವೂ ಇದೆ. ಏಕೆಂದರೆ ಕನ್ನಡ ಸಾಹಿತ್ಯವು ೧೫೦೦ ವರ್ಷಗಳ ಸುದೀರ್ಘವಾದ ಇತಿಹಾಸವನ್ನು ಹೊಂದಿದೆ. ಹಳಗನ್ನಡ ಕಾವ್ಯಗಳಲ್ಲಿನ ಗದ್ಯವನ್ನು ಗಮನಿಸುವದಾದರೆ ಅದರಲ್ಲಿ ಆಧುನಿಕ ಕಾದಂಬರಿಯ ಛಾಯೆ ಇರುವುದನ್ನು ಗುರುತಿಸಬಹುದು. "ವಸಾಹತುವಾದದ ಪರಿಣಾಮವಾಗಿ ಬಂದ ಹಲವಾರು ಆಶಯಗಳು, ವಿಧವಾ ವಿವಾಹ, ಬ್ರಿಟೀಷ್ ಆಡಳಿತದ ದುಷ್ಪರಿಣಾಮಗಳು, ವೇಶ್ಯಾ ಜೀವನ, ಜಮೀನ್‌ದಾರೀ ವ್ಯವಸ್ಥೆಯ ವಿಘಟನೆ, ಭಾರತೀಯ ಸ್ತ್ರೀ ಇತ್ಯಾದಿಗಳು ಕಾದಂಬರಿಗೆ ವಸ್ತು ಒದಗಿಸಿವೆ" (ಆಮೂರ.ಜಿ.ಎಸ್, ೨೦೧೩, ಪುಟ-೧೪.) ಎಂಬುದನ್ನು ಒಪ್ಪಿಕೊಂಡರೂ ಕಾದಂಬರಿಗೆ ಇಂಥದ್ದೇ ವಸ್ತುವೆಂದು ನಿಶ್ಚಿತವಾಗಿ ಹೇಳವಂತಿಲ್ಲ ಮತ್ತು ಹೇಳಲು ಬಾರದು. ಕಾದಂಬರಿಯ ಒಂದೆರಡು ಪುಟಗಳಲ್ಲಿ, ಒಂದೆರಡು ಸನ್ನಿವೇಶ, ಸಂದರ್ಭಗಳನ್ನು, ವ್ಯಕ್ತಿಗಳನ್ನು ಚಿತ್ರಿಸುವದಿಲ್ಲ. ಅದು ದೀರ್ಘವಾಗಿ ಒಂದು ಸಮಾಜದ, ಸಮುದಾಯದ, ಒಂದು ಘಟನೆಯ ಚಿತ್ರಣವನ್ನು ಸುದೀರ್ಘವಾಗಿ ಚಿತ್ರಿಸುತ್ತಾ ಹೋಗುತ್ತದೆ. ಹಾಗೆ ಚಿತ್ರಿಸುವಾಗ ಅನೇಕ ವಸ್ತುವಿಷಯಗಳು, ಮೌಲ್ಯಗಳು ಓದುಗನಲ್ಲಿ ಆಳವಾಗಿ ಬೇರೂರುವ ಸಾಧ್ಯತೆಗಳು ಹೆಚ್ಚು. ಹೀಗಾಗಿಯೇ "ಕಾದಂಬರಿಯುನ್ನು ಅದರ ಯಾವುದೇ ಒಂದು ರೂಪಕ್ಕೆ ಮಾತ್ರ ಅನ್ವಯಿಸಿದರೆ ಅದರ

ಪರಂಪರೆಗೆ ಹಾಗೂ ಚರ್ಚೆಗೆ ಹಾನಿಯುಂಟಾಗುತ್ತದೆ” (ಆಮೂರ. ಜಿ.ಎಸ್., ೨೦೧೩, ಪುಟ-೪.) ಎಂದು ರೇಮಂಡ್ ವಿಲಿಯಮ್ಸ್ ಹೇಳುತ್ತಾನೆ.

ಆರಂಭದ ಕನ್ನಡ ಕಾದಂಬರಿಕಾರರನ್ನು ಗುರುತಿಸುವುದಾದರೆ ಗುಳವಾಡಿ ವೆಂಕಟರಾಯ, ಬೋಳಾರ ಬಾಬೂರಾಯ, ಗಳಗನಾಥ, ಎಂ.ಎಸ್. ಪುಟ್ಟಣ್ಣ, ಕೆರೂರು ವಾಸುದೇವಾಚಾರ್ಯ ಮತ್ತು ಮುರುಘಾರಾಧ್ಯರು ಪ್ರಮುಖರಾಗಿದ್ದಾರೆ. ತದನಂತರದ ಮಾಸ್ತಿ, ಕುವೆಂಪು, ವಿ.ಕೃ. ಗೋಕಾಕ, ಅ.ನ.ಕೃ., ತ.ರಾ.ಸು. ಬಸವರಾಜ ಕಟ್ಟೀಮನಿ, ಕಾರಂತ, ದೇವುಡು, ಭೈರಪ್ಪ, ಗೋಪಾಲಕೃಷ್ಣ ಪೈ, ಸುದರ್ಶನ ದೇಸಾಯಿ, ಬಿ.ಜಿ.ಎಲ್. ಸ್ವಾಮಿ, ಯು.ಆರ್. ಅನಂತಮೂರ್ತಿ, ಚಂದ್ರಶೇಖರ ಕಂಬಾರ, ಶ್ರೀರಂಗ, ಚದುರಂಗ, ನಿರಂಜನ, ವ್ಯಾಸರಾಯ ಬಲ್ಲಾಳ, ವಿ.ಎಂ. ಇನಾಂದಾರ, ಶಂಕರ ಮೊಕಾಶಿ ಪುಣೇಕರ, ತ್ರಿವೇಣಿ, ಅನುಪಮಾ, ಎಂ.ಕೆ. ಇಂದಿರಾ, ಶ್ರೀನಿವಾಸ ವೈದ್ಯ, ಲಂಕೇಶ, ಯಶವಂತ ಚಿತ್ತಾಲ, ಶಾಂತಿನಾಥ ದೇಸಾಯಿ, ದೇವನೂರು ಮಹಾದೇವ ವೀಣಾ ಶಾಂತೇಶ್ವರ, ಸಾರಾ ಅಬೂಬಕ್ಕರ, ಬಿ.ಟಿ. ಲಲಿತಾ ನಾಯಕ, ರಾಘವೇಂದ್ರ ಪಾಟೀಲ, ಕುಂ.ವೀರಭದ್ರಪ್ಪ ಮೊದಲಾದ ಲೇಖಕರು ಕನ್ನಡ ಸಾಹಿತ್ಯದಲ್ಲಿ ಕಾದಂಬರಿಗಳನ್ನು ರಚಿಸಿ ಅದಕ್ಕೆ ಮಹತ್ವದ ಸ್ಥಾನವನ್ನು ಕಲ್ಪಿಸಿದ್ದಾರೆ.

ಹೀಗೆ ಗುಳವಾಡಿ ವೆಂಕಟರಾಯರಿಂದ ಹಿಡಿದು ದೇವನೂರು ಮಹಾದೇವರವರೆಗೆ ಹಬ್ಬಿದ ಕಾದಂಬರಿಕಾರರು ಕನ್ನಡ ಸಾಹಿತ್ಯಕ್ಕೆ ಅಪಾರವಾದ ಕೊಡುಗೆ ನೀಡಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಅಧ್ಯಯನದ ದೃಷ್ಟಿಯಿಂದ ಪ್ರಮುಖ ಪ್ರಗತಿಶೀಲ ಕಾದಂಬರಿಕಾರರ ಕೃತಿಗಳ ಮೂಲಕ ಸ್ವಾತಂತ್ರ್ಯದ ಬಗೆಗಿನ ಸ್ವರೂಪ, ದೇಶಾಭಿಮಾನದ ತುಡಿತವನ್ನು ಗುರುತಿಸುವ ಪ್ರಯತ್ನ ಇಲ್ಲಿದೆ. ವಾಸ್ತವವಾಗಿ ಪ್ರಗತಿಶೀಲ ಲೇಖಕರ ಎಲ್ಲ ಕಾದಂಬರಿಗಳನ್ನು ಇಲ್ಲಿ ಗಣನೆಗೆ ತೆಗೆದುಕೊಳ್ಳುವುದು ಸಾಧ್ಯವಾಗಿಲ್ಲ. ಅಲ್ಲದೇ ಅದರ ಅವಶ್ಯಕತೆಯೂ ನನ್ನ ಮಹಾಪ್ರಬಂಧದ ವ್ಯಾಪ್ತಿಗೆ ಬರುವುದಿಲ್ಲ. ಪ್ರಗತಿಶೀಲ ಲೇಖಕರ ಬಹುಮುಖ್ಯ ಆಶಯ ಸಾಮಾಜಿಕ ಸಮಾನತೆ. ಈ ಹಿನ್ನೆಲೆಯಲ್ಲಿ ಇರುವ, ಇಲ್ಲದವರ ಮಧ್ಯ ನಡೆಯುವ ಘರ್ಷಣೆಯನ್ನು ಅನೇಕ-ಕಥೆ ಕಾದಂಬರಿಗಳಲ್ಲಿ ಕಾಣುತ್ತೇವೆ. ಬ್ರಿಟೀಷರನ್ನು ಹೊಡೆದೋಡಿಸುವ ಹಂಬಲದಷ್ಟೇ ಜಮಿನ್ದಾರಿ ಪದ್ದತಿಯ ವಿರುದ್ಧ ಹೋರಾಟ ಕಂಡು ಬರುತ್ತದೆ. ಅದರೊಂದಿಗೆ ಬಂಡವಾಳ ಶಾಹಿ ಹಾಗೂ ಕಾರ್ಮಿಕ ವರ್ಗದ ನಡುವೆ ನಡೆಯುವ ಸಂಘರ್ಷವನ್ನು ಕಾಣುತ್ತೇವೆ.

### ಪ್ರಗತಿಶೀಲ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಹೋರಾಟ

ಕನ್ನಡದಲ್ಲಿ ಈ ಸ್ವಾತಂತ್ರ್ಯ ಮಹಾವಿಪ್ಲವಕ್ಕೆ ಸಂಬಂಧಿಸಿದ ಕೃತಿಗಳು ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಮೂಡಿಬಂದಿವೆ. ಕುವೆಂಪು ಮತ್ತು ಬೇಂದ್ರೆಯವರ ಕವಿತೆಯಲ್ಲಿ ವ್ಯಕ್ತವಾದ

ಸ್ವಾತಂತ್ರ್ಯಾಭೀಪ್ಸೆ, ತ್ಯಾಗ, ಬಲಿದಾನಗಳ ಭಾವಗಳು ವೀರ್ಯವತ್ತಾಗಿದ್ದು ಮೈನವಿರೇಳಿಸುವಂಥವು. ಇಂತಹ ಸ್ವಾತಂತ್ರ್ಯ ಮೌಲ್ಯಗಳು ಪ್ರಗತಿಶೀಲ ಲೇಖಕರಾದ ಬಸವರಾಜ ಕಟ್ಟೀಮನಿ, ಅನಕೃ, ತರಾಸು, ನಿರಂಜನ ಅವರ ಕಾದಂಬರಿಗಳಲ್ಲಿ ಗರಿಬಿಚ್ಚಿಕೊಂಡಿರುವುದನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ಗುರುತಿಸಬಹುದು. ಇಪ್ಪತ್ತನೆಯ ಶತಮಾನದಲ್ಲಿ ಸಮಗ್ರ ಭರತಖಂಡವನ್ನು ರೋಮಾಂಚನಗೊಳಸಿದ ಅಭೂತಪೂರ್ವವಾದ ಸ್ವಾತಂತ್ರ್ಯಾಂದೋಲನ ನೂರಾರು, ಸಾವಿರಾರು ಸಾಹಿತ್ಯದರ್ಪಣಗಳಲ್ಲಿ ಪ್ರತಿಬಿಂಬಿತವಾಗಿದೆ. (ದೇಜಗೌ ಮತ್ತು ಸಿಪಿಕೆ, ೧೯೬೯, ಪುಟ-೧೬೪)ಅದು ಕಾದಂಬರಿಗಳಲ್ಲಿ ಅಪಾರವಾಗಿರುವುದನ್ನು ಕಾಣುತ್ತೇವೆ.

ಪ್ರಗತಿಶೀಲ ಲೇಖಕರು ಕಾದಂಬರಿಗಳಿಗೆ ಸ್ವಾತಂತ್ರ್ಯ ಹೋರಾಟವನ್ನೇ ವಸ್ತುವಾಗಿಸಿಕೊಂಡು ಬರೆದು, ವಸಾಹತುವಿನಿಂದ ವಿಮೋಚನೆ ಹೊಂದಲು ಸ್ವಾತಂತ್ರ್ಯ ಚಳವಳಿಯಲ್ಲಿ ತೊಡಗಿಸಿಕೊಂಡರು. ರೈತರು, ಕಾರ್ಮಿಕರು, ಸಣ್ಣಪುಟ್ಟ ವ್ಯಾಪಾರಸ್ಥರು, ವಿದ್ಯಾರ್ಥಿಗಳು, ಸಾಹಿತಿಗಳು ಮುಂತಾದ ಸಾಮಾನ್ಯ ವರ್ಗವೇ ಸ್ವಾತಂತ್ರ್ಯ ಚಳವಳಿಯ ಮುಂದಾಳತ್ವವನ್ನು ವಹಿಸಿಕೊಂಡು ನಾಯಕರಂತೆ ಶೋಭಿಸಿದರು. ಇಂತಹ ಮಹನಿಯರಲ್ಲಿ ಕನ್ನಡ ಪ್ರಗತಿಶೀಲ ಸಾಹಿತಿಗಳಾದ ಅನಕೃ, ತರಾಸು, ಬಸವರಾಜ ಕಟ್ಟೀಮನಿ, ನಿರಂಜನ, ಚದುರಂಗ, ವಿ.ಎಂ. ಇನಾಂದಾರ ಪ್ರಮುಖರಾಗಿದ್ದಾರೆ. ಹೀಗಾಗಿ ಅವರ ಪ್ರಾತಿನಿಧಿಕ ಕಾದಂಬರಿಗಳನ್ನಷ್ಟೇ ಅಧ್ಯಯನಕ್ಕೆ ಬಳಸಿಕೊಂಡು, ಪ್ರಗತಿಶೀಲ ಕಾಲದ ಸ್ವಾತಂತ್ರ್ಯದ ಧೋರಣೆಗಳನ್ನು ಗುರುತಿಸುವ ಉದ್ದೇಶವನ್ನು ಹೊಂದಿದೆ.

**ಪ್ರಮುಖ ಪ್ರಗತಿಶೀಲ ಲೇಖಕರು ಮತ್ತು ಅವರ ಕಾದಂಬರಿಗಳು**

ನವೋದಯ, ಪ್ರಗತಿಶೀಲ, ನವ್ಯ ಮತ್ತು ಬಂಡಾಯ ಇವು ಆಧುನಿಕ ಕನ್ನಡ ಸಾಹಿತ್ಯದ ನಾಲ್ಕು ಘಟ್ಟಗಳು. ಈ ಸಾಹಿತ್ಯ ಪಂಥಗಳ ಚಾರಿತ್ರಿಕ ಕಾಲಗಳನ್ನು ಗಮನದಲ್ಲಿಟ್ಟುಕೊಂಡರೆ ಪ್ರಗತಿಶೀಲ ಸಾಹಿತ್ಯ ಇತರ ಮೂರು ಪಂಥದ ಸಾಹಿತ್ಯ ಚಳವಳಿಗಳಿಗೆ ಭಿನ್ನ. ಪ್ರಗತಿಶೀಲ ಸಾಹಿತ್ಯ ಹುಟ್ಟಿಕೊಂಡ ಚಾರಿತ್ರಿಕ ಕಾಲಕ್ಕೂ ನವೋದಯ, ನವ್ಯ, ಬಂಡಾಯ ಚಳವಳಿಗಳ ಕಾಲದ ಚಾರಿತ್ರಿಕ ಕಾಲಕ್ಕೂ ವ್ಯತ್ಯಾಸಗಳಿವೆ. ಪ್ರಗತಿಶೀಲ ಲೇಖಕರು ಸಮಾಜದ ಬಡತನ, ಸೂಳೆಗಾರಿಕೆ, ಹಸಿವು ಮುಂತಾದ ಸಾಮಾಜಿಕ ವಿಷಮತೆಗಳನ್ನು ಕುರಿತು ಬರೆಯತೊಡಗಿದರು. ಅದರಲ್ಲೂ ವಸಾಹತುಶಾಹಿ, ಸಾಮ್ರಾಜ್ಯಶಾಹಿ, ಪುರೋಹಿತಶಾಹಿ, ಬಂಡವಾಳಶಾಹಿಗಳ ವಿರುದ್ಧ ಸಾಮಾನ್ಯನು ತಲೆಯೆತ್ತಿ ವಿರೋಧಿಸಿದನು. ಇದಕ್ಕೆ ಪ್ರಭಾವ-ಪ್ರೇರಣೆಯಾಗಿ ಮಾರ್ಕ್ಸ್‌ವಾದ, ಜಯಪ್ರಕಾಶ ನಾರಾಯಣ, ಲೋಹಿಯಾವಾದದ ಚಿಂತನೆಗಳು ಹೋರಾಟಕ್ಕೆ ಮತ್ತಷ್ಟು ಪ್ರೇರೇಪಿಸಿದವು. ಇಂತಹ ಪ್ರಭಾವಕ್ಕೊಳಗಾಗಿ ಪ್ರಗತಿಶೀಲರಲ್ಲಿ ಹುಟ್ಟಿದ ಸ್ವಾತಂತ್ರ್ಯದ ಚಳವಳಿಯ

ಗಾಢವಾದ ಪ್ರಭಾವವು ಕಾದಂಬರಿಗಳಾಗಿ ರೂಪತಳೆದವು. ಅಂತಹ ಕೆಲವು ಲೇಖಕರು ಮತ್ತು ಅವರ ಕಾದಂಬರಿಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು.

**ಬಸವರಾಜ ಕಟ್ಟೀಮನಿ ಅವರ ಕಾದಂಬರಿಗಳು**

ಸ್ವಾತಂತ್ರ್ಯದೆಡೆಗೆ (೧೯೪೬), ಮಾಡಿಮಡಿದವರು (೧೯೫೦), ನರಗುಂದ ಬಂಡಾಯ (೧೯೫೬), ಸಂಗೊಳ್ಳಿರಾಯಣ್ಣ ನಾಯಕ (೧೯೬೮). ನಿರಂಜನವರ ಕಾದಂಬರಿಗಳು ಕಲ್ಯಾಣಸ್ವಾಮಿ (೧೯೫೬), ಸ್ವಾಮಿ ಅಪರಾಂಪರ (೧೯೬೨), ವಿಮೋಚನೆ (೧೯೫೩), ಚಿರಸ್ಮರಣೆ (೧೯೫೫), ಮೃತ್ಯುಂಜಯ (೧೯೭೬), ತರಾಸುರವರ ಕಾದಂಬರಿ ರಕ್ತತರ್ಪಣ (೧೯೪೬), ಅನಕೃ ಅವರ ಕಾದಂಬರಿಗಳು ಅಮರ ಅಗಸ್ಟ್, ಹೇಗಾದರೂ ಬದುಕೋಣ. ವಿ.ಎಂ. ಇನಾಂದಾರರವರ ಕಾದಂಬರಿಗಳು 'ಮೂರಾಬಟ್ಟೆ' (೧೯೪೬) 'ವಿಜಯ ಯಾತ್ರೆ' (೧೯೪೮), ಶಿವರಾಮ ಕಾರಂತರ ಕಾದಂಬರಿ 'ಔದಾರ್ಯದ ಉರುಳಲ್ಲಿ' (೧೯೪೭), ವ್ಯಾಸರಾಯ ಬಲ್ಲಾಳರ ಕಾದಂಬರಿಗಳು 'ಹೇಮಂತಗಾನ' ಬಂಡಾಯ ಚದುರಂಗರ ಕಾದಂಬರಿ 'ಸರ್ವಮಂಗಳ', ಶ್ರೀರಂಗರ ಕಾದಂಬರಿಗಳು 'ಪುರುಷಾರ್ಥ' 'ವಿಷಚಕ್ರವ್ಯೂಹ', ಮಿರ್ಜಿ ಅಣ್ಣಾರಾಯರ ಕಾದಂಬರಿಗಳು, ರಾಷ್ಟ್ರಪುರುಷ, ಪ್ರತಿಸರ್ಕಾರ, ಭಸ್ಮಾಸುರ. ದು.ನಿಂ. ಬೆಳಗಲಿ ಅವರ ಕಾದಂಬರಿ 'ಮೌನಕ್ರಾಂತಿ' (೧೯೯೨) ಹೀಗೆ ಪ್ರಗತಿಶೀಲ ಕಾದಂಬರಿಗಳಲ್ಲಿ ಸ್ವಾತಂತ್ರ್ಯತೆಯನ್ನು ಒಳಗೊಂಡ ಒಂದು ಸುದೀರ್ಘವಾದ ಪಟ್ಟಿಯನ್ನು ಮಾಡಬಹುದು.

**ಕಾದಂಬರಿಗಳ ವಿಂಗಡನೆ**

ಈ ಮೇಲಿನ ಪಟ್ಟಿಯಲ್ಲಿ ಸ್ವಾತಂತ್ರ್ಯ ಚಳುವಳಿಯ ವಸ್ತುವನ್ನೊಳಗೊಂಡ ಕನ್ನಡ ಕಾದಂಬರಿಗಳನ್ನು ಅಧ್ಯಯನದ ದೃಷ್ಟಿಯಿಂದ ಪ್ರಮುಖವಾಗಿ ಎರಡು ಘಟ್ಟಗಳಲ್ಲಿ ವಿಭಾಗಿಸಿಕೊಳ್ಳಬಹುದು. ಅವುಗಳೆಂದರೆ ಸ್ವಾತಂತ್ರ್ಯ ಪೂರ್ವದ ಅವಧಿಯ ಕಾದಂಬರಿಗಳು. ಸ್ವಾತಂತ್ರ್ಯಾ ನಂತರದ ಕಾದಂಬರಿಗಳು ಎಂದು ವಿಂಗಡಿಸಿಕೊಳ್ಳಬಹುದು.

ಮೊದಲ ಘಟ್ಟದಲ್ಲಿ ಪ್ರಮುಖವಾಗಿ ಬಸವರಾಜ ಕಟ್ಟೀಮನಿಯವರ 'ಸ್ವಾತಂತ್ರ್ಯದೆಡೆಗೆ' (೧೯೪೬), ವಿ.ಎಂ. ಇನಾಂದಾರರ 'ಮೂರಾಬಟ್ಟೆ' (೧೯೪೬), ತ.ರಾ.ಸು ಅವರ 'ರಕ್ತ ತರ್ಪಣ'(೧೯೪೬), ಶಿವರಾಮ ಕಾರಂತರ 'ಔದಾರ್ಯದ ಉರುಳಲ್ಲಿ' (೧೯೪೭) ಪ್ರಮುಖವಾಗಿವೆ.

ಎರಡನೆಯ ಘಟ್ಟದಲ್ಲಿ ಬಸವರಾಜ ಕಟ್ಟೀಮನಿಯವರ 'ಮಾಡಿ ಮಡಿದವರು' (೧೯೫೦), 'ನರಗುಂದ ಬಂಡಾಯ' (೧೯೫೬), 'ಸಂಗೊಳ್ಳಿರಾಯ ನಾಯಕ' (೧೯೮೬),

ವಿ.ಎಂ. ಇನಾಂದಾರರ 'ವಿಜಯ ಯಾತ್ರೆ' (೧೯೪೭), ಅನಕೃ ಅವರ 'ಅಮರ ಅಗಸ್ಟ್' (೧೯೫೦) ಮತ್ತು 'ಹೇಗಾದರೂ ಬದುಕೋಣ' (೧೯೬೪), ನಿರಂಜನರ 'ವಿಮೋಚನೆ' (೧೯೫೩), 'ಚಿರಸ್ಮರಣೆ' (೧೯೫೫), ಕಲ್ಯಾಣಸ್ವಾಮಿ (೧೯೫೬), ಸ್ವಾಮಿ ಅಪರಾಂಪರ (೧೯೬೭), 'ಮೃತ್ಯುಂಜಯ' (೧೯೭೬) ಮತ್ತು ವ್ಯಾಸರಾಯ ಬಲ್ಲಾಳರ 'ಬಂಡಾಯ' (೧೯೮೫) ಮತ್ತು 'ಹೇಮಂತಗಾನ' (೧೯೫೪), ಚದುರಂಗರ 'ಸರ್ವಮಂಗಳ' , ಶ್ರೀರಂಗರ 'ಪುರುಷಾರ್ಥ' ಮತ್ತು 'ವಿಷಚಕ್ರವ್ಯೂಹ', ಮಿರ್ಜಿ ಅಣ್ಣಾರಾಯರ ರಾಷ್ಟ್ರಪುರುಷ, ಪ್ರತಿಸರ್ಕಾರ, ಭಸ್ಮಾಸುರ ಪ್ರಮುಖವಾದವು.

### ೫.೧. ಸ್ವಾತಂತ್ರ್ಯ ಪೂರ್ವ ಘಟ್ಟದ ಕಾದಂಬರಿಗಳು

೧೯೪೭ಕ್ಕಿಂತ ಮೊದಲು ರಚನೆಗೊಂಡ ಕಾದಂಬರಿಗಳಲ್ಲಿ ತ್ಯಾಗ, ಬಲಿದಾನ, ಹೋರಾಟ, ಚಳುವಳಿಗಳ ಚಿತ್ರಣವನ್ನು ಹೆಚ್ಚಾಗಿ ಕಾಣುತ್ತೇವೆ. ಏಕೆಂದರೆ ಭಾರತ ಸ್ವಾತಂತ್ರ್ಯದ ಹಂಬಲವು ೧೯೪೨ರ ಅಗಷ್ಟ ಚಳುವಳಿಯಿಂದ ೧೯೪೭ರ ವರೆಗೆ ಉಚ್ಛ್ರಾಯ ಸ್ಥಿತಿಯನ್ನು ತಲುಪಿತ್ತು. ಭಾರತದ ಪ್ರತಿ ಹಳ್ಳಿಹಳ್ಳಿಯಲ್ಲಿ 'ಮಾಡು, ಇಲ್ಲವೆ ಮಡಿ' ಎಂಬ ಘೋಷವಾಕ್ಯವು ದಮನಿದಮನಿಗಳಲ್ಲಿ ತುಂಬಿಕೊಂಡಿತ್ತು. ಪರಕೀಯ ಸಾಮ್ರಾಜ್ಯಶಾಹಿತ್ವ, ವಸಾಹತುಶಾಹಿತ್ವದಿಂದ ಬೇಸತ್ತಿದ್ದ ಭಾರತೀಯರಲ್ಲಿ ಸ್ವಾತಂತ್ರ್ಯದ ಕಲ್ಪನೆ ಅಗಾಧವಾಗಿ ಬೆಳೆದಿತ್ತು. ಇದನ್ನು ಸ್ವತ: ಲೇಖಕರು ಕಂಡುಂಡವರಾಗಿ, ಚಳುವಳಿಗಳಲ್ಲಿ ಭಾಗವಹಿಸಿದ ಅನುಭವದಿಂದಾಗಿ ಪ್ರಭಾವಿತರಾಗಿದ್ದು ಅದನ್ನು ತಮ್ಮ ಸಾಹಿತ್ಯದ ವಸ್ತುವನ್ನಾಗಿ ಮಾಡಿಕೊಂಡಿದ್ದು ಆಚ್ಚರಿಯನ್ನೇನು ಉಂಟುಮಾಡುವುದಿಲ್ಲ. ಏಕೆಂದರೆ ಕವಿ, ಸಾಹಿತಿ ಇತರರಿಗಿಂತ ತನ್ನ ಸುತ್ತಲಿನ ಸಮಾಜಕ್ಕೆ ಅತಿ ವೇಗವಾಗಿ ಸ್ಪಂದಿಸುತ್ತಾನೆ. ಅಲ್ಲಿ ತಾನು ಕಂಡುಕೊಂಡ ಸತ್ಯಗಳನ್ನು ಸಾಹಿತ್ಯದಲ್ಲಿ ಬಿತ್ತರಿಸುತ್ತಾನೆ. ಕಾಲ್ಪನಿಕವಾಗಿ ತನ್ನ ಆದರ್ಶಗಳನ್ನು ಎತ್ತಿ ತೋರಿಸುತ್ತಾನೆ. ಹೀಗಾಗಿ ಕಾದಂಬರಿಗೆ ಸ್ವಾತಂತ್ರ್ಯಪೂರ್ವದ ಭಾರತದ ಚಿತ್ರಣವು ಬಹುಮುಖ್ಯವಾದ ವಸ್ತುವಾಗಿ ಪ್ರಗತಿಶೀಲ ಲೇಖಕರಲ್ಲಿ ಕಾಣಿಸುತ್ತದೆ. ಪ್ರಸ್ತುತ ಅಂತಹ ಕಾದಂಬರಿಗಳನ್ನು ಮಹಾಪ್ರಬಂಧದಲ್ಲಿ ಅಧ್ಯಯನಕ್ಕೆ ಒಳಪಡಿಸಿಕೊಂಡು ವಿಶ್ಲೇಷಿಸಲಾಗಿದೆ.

### ಬಸವರಾಜ ಕಟ್ಟೀಮನಿ ಅವರ ಸ್ವಾತಂತ್ರ್ಯ ಪೂರ್ವದ ಕಾದಂಬರಿಗಳಲ್ಲಿನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು

ಸ್ವಾತಂತ್ರ್ಯ ಪೂರ್ವದಲ್ಲಿ ನಾಡಿಗೆ ನಾಡೆ ಕೆಲವೊಂದು ಮಹತ್ವದ ಧ್ಯೇಯಗಳಿಗೋಸ್ಕರ ರೂಪಿಸಿಕೊಂಡಿದ್ದ ಆದರ್ಶದ ಕಾವು ಸ್ವಾತಂತ್ರ್ಯ ಲಭಿಸಿ

ತಣ್ಣಗಾದಮೇಲೆ ಇದುವರೆಗೂ ಆದರ್ಶದ ಮುಸುಕಿನಲ್ಲಿ ತಲೆಮರೆಸಿಕೊಂಡಿದ್ದಂಥ ಎಷ್ಟೋ ಅನಿಷ್ಟಗಳು ಎಚ್ಚರಗೊಳ್ಳುತ್ತಿದ್ದ ಜನತೆಯ ಕಣ್ಣು ಕುಕ್ಕತೊಡಗಿದವು. ಬಿಡುಗಡೆಯನ್ನು ಪಡೆದದ್ದೇ ದಡಬಡನೆದ್ದು ನಿಖತ ಜನತೆ ಬದುಕಿನ ಎಲ್ಲ ಕ್ಷೇತ್ರಗಳಲ್ಲೂ ತೀವ್ರತರ ಬದುಕಿನ ಎಲ್ಲ ಕ್ಷತ್ರಗಳಲ್ಲೂ ತೀವ್ರತರ ಬದಲಾವಣೆಯನ್ನು ಮುಖ್ಯವಾಗಿ ಶತಶತಮಾನದಿಂದ ಸಮಾಜದ ಅಂಗಾಂಗಗಳಿಗೆಲ್ಲ ಕಿಲುಬುಗಟ್ಟಿ ನಿಂತಿದ್ದ ಮೌಢ್ಯ, ಅನ್ಯಾಯ, ಅಧರ್ಮಗಳನ್ನು ಪ್ರತಿಭಟಿಸುತ್ತ, ಸಮಾಜ ಸುಧಾರಣೆಯ ವೀರಾವೇಶದಿಂದ ಬೆಳಗಾಗುವುದರಲ್ಲಿ ಪ್ರಗತಿಯ ಪವಾಡವನ್ನು ಕಾಣಲು ಚಡಪಡಿಸಿತು. ಇದರ ಫಲವಾಗಿ ಬದುಕಿನ ವಿವಿಧಾನುಭವಗಳಿಗೆ, ಅದರಲ್ಲೂ ಸಾಹಿತ್ಯ ಸಂವೇದನೆಗೆ ಒಂದು ಬಗೆಯ ಉತ್ಕಟತೆ ಸಹಜವಾಗಿಯೆ ಪ್ರಾಪ್ತವಾಯಿತು. ಇದ್ದುದನ್ನು ಬಿಟ್ಟು ಇರುದದರ ಕಡೆಗೆ ತುಡಿಯುತ್ತಿದ್ದ ಆದರ್ಶವಾದ ಬಣ್ಣಬಣ್ಣದ ಬುರುಜುಗಳನ್ನು ಸದೆಬಡಿಯುವುದರಡೊನೆ ಬದುಕಿನ ಕರಾಳಮುಖವನ್ನು ತೆರೆದು ತೋರಿಸ ಹೊರಟ ಈ ಪ್ರತಿಗಾಮಿಗಳ ವಾಸ್ತವಿಕ ಪ್ರಜ್ಞೆ ಮೆಚ್ಚುವಂಥದ್ದಾಗಿದೆ.

ಸ್ವಾತಂತ್ರ್ಯದ ಮೌಲ್ಯಗಳನ್ನು ಎತ್ತಿಹಿಡಿಯುವ ಪ್ರಯತ್ನಗಳಲ್ಲಿ ಕಾದಂಬರಿ ಕ್ಷೇತ್ರದಲ್ಲಿ ಬಸವರಾಜ ಕಟ್ಟೀಮನಿ ಅವರ ಹೆಸರು ಗಣ್ಯವಾಗಿ ಕಂಡುಬರುತ್ತದೆ. ಗಾಂಧೀಜಿಯವರ ನಾಯಕತ್ವದಲ್ಲಿ ನಡೆದ ಬಿಡುಗಡೆಯ ಹೋರಾಟದ ಕಥೆ ಅವರ ಕಾದಂಬರಿಗಳಲ್ಲಿ ಹೃದಯಸ್ಪರ್ಶಿಯಾಗಿ ಮೈದಳೆದು ನಿಂತಿದೆ. ಅವರ ಹೋರಾಟದಲ್ಲಿ ಸ್ವತಃ ಭಾಗವಹಿಸಿದವರಾಗಿದ್ದರಿಂದ, ಸ್ವಾನುಭವಜನ್ಯವಾದ ಸನ್ನಿವೇಶಗಳನ್ನು ಅವರ ಕಾದಂಬರಿಗಳಲ್ಲಿ ಗುರುತಿಸಬಹುದು. ಕಟ್ಟೀಮನಿಯವರ ರಾಷ್ಟ್ರೀಯ ಪ್ರಜ್ಞೆ, ದೇಶಾಭಿಮಾನ, ದೇಶಭಕ್ತಿ, ಸ್ವಾತಂತ್ರ್ಯಕ್ಕಾಗಿ ಮಾಡಿದ ಸಾಮಾನ್ಯನ ತ್ಯಾಗ, ಪ್ರಾಣ ಬಲಿದಾನಗಳು ವಿಶಿಷ್ಟತೆಯನ್ನು ಪಡೆದುಕೊಂಡಿವೆ. ಅಂತಹ ಕಾದಂಬರಿಗಳಲ್ಲಿ ಒಂದಾದ 'ಸ್ವಾತಂತ್ರ್ಯದೆಡೆಗೆ' ೧೯೪೬ ರಲ್ಲಿ ಪ್ರಕಟಗೊಂಡಿತು.

**ಸ್ವಾತಂತ್ರ್ಯದೆಡೆಗೆ: ೧೯೪೬**

'ಸ್ವಾತಂತ್ರ್ಯದೆಡೆಗೆ' ಕಾದಂಬರಿಯಲ್ಲಿ ಚಿತ್ರಿತವಾದ ಧ್ಯೇಯಗಳು ೧೯೫೦ರಲ್ಲಿ ಪ್ರಕಟಗೊಂಡ 'ಮಾಡಿಮಡಿದವರು' ಕಾದಂಬರಿಗೆ ಪೂರಕ ಇಲ್ಲವೆ ಎರಡೂ ಕಾದಂಬರಿಗಳಲ್ಲಿ ಸಾಮ್ಯತೆ ಇರುವುದನ್ನು ಕನ್ನಡ ವಿಮರ್ಶಾಲೋಕವು ಈಗಾಗಲೇ ಮೌಲ್ಯೀಕರಿಸಿದೆ. "ಎರಡಕ್ಕೂ ಸಮಾನವಾದ ಅಂಶ ನಾಯಕನ ಹೆಸರು ಮಾತ್ರ; ಅದನ್ನು ಬಿಟ್ಟರೆ ಕಥೆಯಲ್ಲಿ

ಹೊಂದಾಣಿಕೆಯಿಲ್ಲ. ವಸ್ತುತಃ 'ಸ್ವಾತಂತ್ರ್ಯದೆಡೆಗೆ' ಕಾದಂಬರಿಯೇ 'ಮಾಡಿಮಡಿದವರು' ಕಾದಂಬರಿಯ ಉತ್ತರಭಾಗ ಎನ್ನಬಹುದು, ತಾತ್ತ್ವಿಕವಾಗಿ. ಏಕೆಂದರೆ, 'ಸ್ವಾತಂತ್ರ್ಯದೆಡೆಗೆ' ಕಾದಂಬರಿಲ್ಲಿ ಲೇಖಕರು ಯಾರ ಆದರ್ಶವನ್ನು ಚಿತ್ರಿಸಿದ್ದಾರೊ ಅದು ಇಂದಿಗೂ ಪೂರ್ತಿಯಾಗಿ ಈಡೇರಿಲ್ಲ. ಭಾರತ ಇನ್ನೂ ಸ್ವಾತಂತ್ರ್ಯದೆಡೆಗೆ ಸಾಗುತ್ತಲೆ ಇದೆ. ಆದ್ದರಿಂದ 'ಸ್ವಾತಂತ್ರ್ಯದೆಡೆಗೆ' ಕಾದಂಬರಿಯ ಇಂದಿನ ಪರಿಸ್ಥಿತಿಗೆ ಅನ್ವಯಿಸುವ ನಿರೂಪಣೆಯೂ ಆಗಿದೆ." (ದೇಜಗೌ ಮತ್ತು ಸಿಪಿಕೆ, ೧೯೬೯, ಪುಟ-೧೬೫.)

ಕಾದಂಬರಿಯಲ್ಲಿ ಬರುವ ಶೇಖರ ಎಂಬುವವನು ಪೊಲೀಸ್ ಸಿಪಾಯಿ ಮಗ. ಗಾಂಧೀಜಿಯ ಬಂಧನದ ವಿರುದ್ಧ ಮೆರೆವಣಿಗೆಯಲ್ಲಿ ಭಾಗವಹಿಸಲು ಹಾತೊರೆಯುತ್ತಿರುತ್ತಾನೆ. ಒಂದು ಧ್ವಜವಂದನೆಗೆ ಹೋಗುವಾಗ ತಾನೂ ಅದರಲ್ಲಿ ಸೇರಿಕೊಳ್ಳುತ್ತಾನೆ. ಆ ಸಂದರ್ಭ ಇವನಿಗಿಂತ ಕಿರಿಯಳಾದ ಶಾಂತಾ ಎಂಬ ಹುಡುಗಿ ತನ್ನ ಕೈಯಲ್ಲಿನ ಧ್ವಜವನ್ನು ಇವನು ಕೇಳಿದಾಗ ಆತನಿಗೆ "ಬಕ್ಕ ತಲೆಯವರು ರಾಷ್ಟ್ರಧ್ವಜ ಹಿಡಿಯಬಾರದು ಅಂತ ಹೇಳುತ್ತಾಳೆ. ಗಾಂಧಿ ಟೋಪಿ ಹಾಕ್ಕೊಂಡು ಬಾ ಹೋಗು. ಆಮ್ಯಾಲೆ ಕೊಡುತ್ತೇನಂತೆ" (ಬಸವರಾಜ ಕಟ್ಟೀಮನಿ, ೧೯೪೬, ಪುಟ-೧೦.) ಎಂದು ಹೇಳುತ್ತಾಳೆ. ಇದು ಅವನ ಮೇಲೆ ಪ್ರಭಾವ ಬೀರಿ ತಾನು ಗಾಂಧೀ ಟೋಪಿ ಹಾಕಲೇಬೇಕೆಂದು ಹಟಹಿಡಿದು ತನ್ನ ತಂದೆಯನ್ನು ಕೇಳುತ್ತಾನೆ. ಅದಕ್ಕಾಗಿ ಅಪ್ಪನಿಂದ ಮೈ ಹಣ್ಣಾಗುವಂತೆ ಬಡಿಸಿಕೊಳ್ಳುತ್ತಾನೆ. ಇದೇ ದೊಡ್ಡದಾಗಿ ಬೆಳೆದು ತಂದೆಗೆ ವಿರುದ್ಧವಾಗಿ ಮನೆಬಿಟ್ಟು ಗೊತ್ತು ಗುರಿಯಿಲ್ಲದೆ ಹೊರ ಬೀಳುತ್ತಾನೆ.

ಮಾರ್ಗ ಮಧ್ಯದಲ್ಲಿ ಮಲ್ಲಣ್ಣನ ಪರಿಚಯವಾಗುತ್ತದೆ. ಅವನು ತನ್ನ ಊರಾದ ಕಲ್ಲಾಪೂರಕ್ಕೆ ಹೋಗುವ ಪೂರ್ವದಲ್ಲಿ ಕಿತ್ತೂರಿಗೆ ಈತನನ್ನು ಕರೆದುಕೊಂಡು ಹೋಗುತ್ತಾನೆ. ಆಗ ಚನ್ನಮ್ಮನ ಬಗೆಗೆ ಮಲ್ಲಣ್ಣನಿಂದ ಅನೇಕ ವಿಷಯಗಳನ್ನು ಶೇಖರ ತಿಳಿದುಕೊಳ್ಳುತ್ತಾನೆ. "ಇನ್ನೇನು ತಡಾ ಇಲ್ಲ ಬಿಡು. ಸಂಗೊಳ್ಳಿ ರಾಯಣ್ಣ ಹುಟ್ಟಿ ಬಂದಂಗ ಬಂದಾನ ನಮ್ಮಪ್ಪ ಈ ಗಾಂಧೆಪ್ಪ! ಕೆಂಪುಮೋತೀ ಸರ್ಕಾರನ್ನ ಒದ್ದು ಹೊರಗ ಹಾಕ್ತಾನ!" (ಬಸವರಾಜ ಕಟ್ಟೀಮನಿ, ೧೯೪೬, ಪುಟ-೪೦.) ಎಂದು ಹೋರಾಟದ ಛಲವನ್ನು ಮಲ್ಲಣ್ಣ ಶೇಖರನಲ್ಲಿ ತುಂಬುತ್ತಾನೆ. ಪ್ರಯಾಣ ಮಧ್ಯದಲ್ಲಿ ಅವರಿಬ್ಬರ ನಡುವೆ ಸ್ವಾತಂತ್ರ್ಯ ಹೋರಾಟದ ಅನೇಕ ವಿಚಾರಗಳು, ಗಾಂಧೀಜಿಯ ಬಂಧನದ ಸಂಗತಿಗಳು, ಚಳುವಳಿ, ಹರತಾಳ, ಮೆರವಣಿಗೆಗಳ ಬಗೆಗೆ ಮಲ್ಲಣ್ಣನು ವಿವರಿಸುತ್ತಾ ಸಾಗುತ್ತಾನೆ. ಇವರಿಬ್ಬರ ಸಂಭಾಷಣೆ ಮುಗಿಯುವಷ್ಟರಲ್ಲಿ ಕಲ್ಲಾಪೂರ ಬರುತ್ತದೆ. ಮುಂದೆ ಎಲ್ಲಿಗೆ ಹೋಗಬೇಕೆಂಬುದು ಗೊತ್ತಿಲ್ಲದ ಶೇಖರನ ಪೂರ್ವಾಪರ ತಿಳಿಯದೆ ಅವನಿಗೆ ಮಲ್ಲಣ್ಣ ಆಶ್ರಯವನ್ನು ಕೊಡುತ್ತಾನೆ.

ಮಲ್ಲಣ್ಣನ ಆಶ್ರಯದಲ್ಲಿ ಶೇಖರನು ಕಲ್ಲಾಪೂರದ ಪರಿಸರಕ್ಕೆ ಹೊಂದಿಕೊಳ್ಳುತ್ತಾನೆ. ಬೇಸಾಯ ಗೊತ್ತಿಲ್ಲದೆ ಹೋದರೂ ಹೊಲ-ಗದ್ದೆಗಳಲ್ಲಿ ದುಡಿಯಬೇಕಾಗುತ್ತದೆ. ಹಲವು ವರ್ಷಗಳ ನಂತರ ಕಲ್ಲಾಪೂರಕ್ಕೆ ಶೇಖರನ ತಂದೆಯು ಅಚಾನಕ್ ಆಗಿ ನೌಕರಿಯ ಮೇಲೆ ಬರುತ್ತಾನೆ. ಆಗ ಮಗನ್ನು ನೋಡಿ ಹರ್ಷವುಂಟಾಗುತ್ತದೆ. ಅವನನ್ನು ಜೊತೆಯಲ್ಲಿ ಕರೆದುಕೊಂಡು ಹೋಗಲು ಸಿದ್ಧನಾಗುತ್ತಾನೆ. ಇವರಿಬ್ಬರ ಸಂಭಾಷಣೆಯನ್ನು ಕಂಡ ಮಲ್ಲಣ್ಣನಿಗೆ ಆಶ್ಚರ್ಯವಾಗುತ್ತದೆ. ಕಾದಂಬರಿಲ್ಲಿ ಶೇಖರನ ತಂದೆ ಶಂಕರಪ್ಪನು ಬ್ರಿಟೀಷ್ ಸರಕಾರದಲ್ಲಿ ಸಿಪಾಯಿ ಆಗಿದ್ದರೂ ಫೌಜದಾರನ ವಿರುದ್ದ ದಂಗೆ ಏಳುತ್ತಾಳೆ. ಏಕೆಂದರೆ ಒಂದು ದಿನ ಫೌಜದಾರ ಕಂಠತುಂಬ ಕುಡಿದುಬಂದು "ಏ ಹರಾಮ್ ಖೋರ್, ಬದ್ಮಾಷ್ ಲಿಂಗಾಡ್ಯಾ!"(ಬಸವರಾಜ ಕಟ್ಟೀಮನಿ, ೧೯೫೬, ಪುಟ-೭೯.) ಎಂದು ಕೂಗಿಕೊಂಡ. ಇದು ಶಂಕರಪ್ಪನಿಗೆ ಕೋಪ ಬರುವಂತೆ ಮಾಡುತ್ತದೆ. ತಾನು ಯಾವ ತಪ್ಪು ಮಾಡದಿದ್ದರೂ ಸುಮ್ಮಸುಮ್ಮನೆ ಬೈಸಿಕೊಳ್ಳುವುದು ಅವನಿಗೆ ಅವಮಾನವನ್ನುಂಟು ಮಾಡುತ್ತದೆ. ಅದನ್ನು ಸಹಿಸದೆ ತನ್ನ ಚಪ್ಪಲಿಯಿಂದ ಫೌಜದಾರನಿಗೆ ಹೊಡೆಯುತ್ತಾನೆ. ಇವನ ಸಾಹಸವನ್ನು ಕಂಡ ಅಲ್ಲಿದ್ದ ಸಿಪಾಯಿಗಳು "ಬಹಾದ್ದೂರ ಮಗ. ಚಲೋ ಮರ್ಯಾದೆ ಮಾಡಿದ! ಈ ಲಫಂಗ ಫೌಜದಾರಗ, ಇಂಥ ಹಲ್ಕಟ್ಟ ಮನುಷ್ಯಗ ಹೀಗ ಚಪ್ಪಲ್ ಹೊಡೆತ ಬೀಳ್ತಾ ಇರಬೇಕು ದಿನಾಲೂ" (ಬಸವರಾಜ ಕಟ್ಟೀಮನಿ, ೧೯೫೬, ಪುಟ-೭೯) ಎಂದು ತಮ್ಮ ರೊಚ್ಚನ್ನು ತೋರಿಸುತ್ತಾರೆ.

ತಂದೆಯೊಂದಿಗೆ ಮರಳಿ ತನ್ನ ಊರು ಬೆಳಗಾವಿಗೆ ಬಂದು ದಲಿತ ಕೇರಿಯಲ್ಲಿ ವಾಸವಾಗುತ್ತಾನೆ. ಇಲ್ಲಿಯ ಅನುಭವ ಅವನಿಗೆ ಮುಜುಗರವನ್ನುಂಟು ಮಾಡುತ್ತದೆ. "ಇಂಥ ಹೊಲಸು ಸ್ಥಳದಲ್ಲಿ ಇರುವುದಾದರೂ ಹೇಗೇ? ಇವರೆಲ್ಲ ಇಲ್ಲಿ ಹೇಗೆ ಬದುಕುತ್ತಿದ್ದಾರೋ! ತಾನಂತೂ ಇಲ್ಲಿರುವುದು ಸಾಧ್ಯವಿಲ್ಲ" (ಬಸವರಾಜ ಕಟ್ಟೀಮನಿ, ೧೯೫೬, ಪುಟ-೮೫.) ಎಂದುಕೊಂಡರೂ ತಂದೆಯ ಸಣ್ಣ ಸಂಬಳದಲ್ಲಿ ಜೀವನ ಸಾಗಿಸುವುದು ಕಷ್ಟವೆಂದು ಅರಿತು ಆ ವಿಚಾರವನ್ನು ತಾತ್ಪೂರ್ತಿಕವಾಗಿ ಮರೆಯುತ್ತಾನೆ. ಇಲ್ಲಿ ರಾಜ ಎಂಬ ಕಮ್ಯುನಿಷ್ಟನ ಪರಿಚಯವಾಗುತ್ತದೆ. "ಶ್ರೀಮಂತರನ್ನೆಲ್ಲಾ ಸುಲಿದು ಲೂಟಿ ಮಾಡಿ ಅವರ ಆಸ್ತಿಪಾಸ್ತಿ ಎಲ್ಲಾ ಬಡವರಿಗೆ ಹಂಚಿಕೊಟ್ಟು ಕೂಲಿಗಾರ ಕೆಲಸಗಾರರ ರಾಜ್ಯ ಸ್ಥಾಪಿಸೋದು. ಅದೇ ಕೆಲಸಕ್ಕಾಗಿ ನಾವೆಲ್ಲ ದುಡೀತಾ ಇದೇವ, ನಮ್ಮದು ಕೂಲಿಕಾರರ ರಾಜ್ಯ?... ನಾವೆಲ್ಲಾ ಕಮ್ಯೂನಿಷ್ಟರು! ಇನ್ಕಿಲಾಬ್ ಜಿಂದಾಬಾದ್!"(ಬಸವರಾಜ ಕಟ್ಟೀಮನಿ, ೧೯೫೬, ಪುಟ-೯೨.) ಎಂದು ಉತ್ಸಾಹದಿಂದ ರಾಜನು ಮಾತಾಡುವದನ್ನು ಕೇಳಿಸಿಕೊಂಡ ಶೇಖರನಿಗೆ ಮಿಂಚೊಂದು ಸಂಚರಿಸಿದಂತಾಗುತ್ತದೆ. ಬಾಲ್ಯದಲ್ಲಿ 'ಇನ್ಕಿಲಾಬ್ ಜಿಂದಾಬಾದ್' ಎಂಬ ಘೋಷಣೆಯನ್ನು ಕೇಳಿದ್ದ, ಆದರೆ ಅದರ ಅರ್ಥ, ಹಿಂದು-ಮುಂದು ಗೊತ್ತಿರಲಿಲ್ಲ. ಈಗ ಅವನಿಗೆ ಸಾಕಷ್ಟು

ಚಳುವಳಿಯ, ಹರತಾಳದ ಅನುಭವವಿದ್ದು ಆ ಘೋಷಣೆ ಹೊಸ ಸಂಚಲನವನ್ನು ಉಂಟುಮಾಡಿತ್ತು. ರಾಜ ಕಮ್ಯೂನಿಷ್ಟರ ಬಗ್ಗೆ ಅದರ ಹುಟ್ಟು ಬೆಳವಣಿಗೆ ಮತ್ತು ಅದರ ಮುಖ್ಯ ಉದ್ದೇಶಗಳನ್ನು ವಿವರವಾಗಿ ತಿಳಿಸಿಕೊಡುತ್ತಾನೆ. ಅವನ ಸಲಹೆಗಳಂತೆ ಶೇಖರನು "ಬಡವರ ರಾಜ್ಯ ಕಟ್ಟೋದ ಆದರ ನಾನೂ ಕಮ್ಯುನಿಸ್ಟ ಆಗಲಿಕ್ಕೆ ತಯಾರಿದೀನಿ" (ಬಸವರಾಜ ಕಟ್ಟೀಮನಿ, ೧೯೪೬, ಪುಟ-೯೪.) ಎಂದು ರಾಜನಿಗೆ ಹೇಳುತ್ತಾನೆ. ಆಗ ರಾಜ "ಇಂದಿನಿಂದ ನೀ ಬರೀ ಶೇಖರ ಅಲ್ಲ ನನಗ. ಕಾಮ್ರೇಡ್ ಶೇಖರ. ನಾ ನಿನಗ ಕಾಮ್ರೇಡ್ ರಾಜ ತಿಳೀತೇನು? ಕಾಮ್ರೇಡ್ ಅಂದರ ಬಂಧು; ಸೋದರ, ಭಾಯಿ. ನಮ್ಮ ಮಂತ್ರ ಇನ್‌ಕಿಲಾಬ್ ಜಿಂದಾಬಾದ್!" (ಬಸವರಾಜ ಕಟ್ಟೀಮನಿ, ೧೯೪೬, ಪುಟ-೯೪.) ಎಂದು ಶೇಖರನಿಗೆ ಹೊಸ ಹೋರಾಟದ ಹಾದಿಯನ್ನು ತೋರಿಸುತ್ತಾನೆ.

"ಗಾಂಧೀಜಿಯವರ ಗುರಿ ಕೇವಲ ರಾಜಕೀಯ ಸ್ವಾತಂತ್ರ್ಯವಾಗಿರಲಿಲ್ಲ; ಅಜ್ಞಾನ, ಅಸಮತೆ, ದಾರಿದ್ರ್ಯಗಳಿಂದ ನಾಡು ವಿಮುಕ್ತವಾಗಬೇಕು, ರಾಮರಾಜ್ಯವಾಗಬೇಕು ಎಂಬುದು ಅವರ ಕನಸಾಗಿತ್ತು. ರಾಜಕೀಯ ಸ್ವಾತಂತ್ರ್ಯ ಆ ಪೂರ್ಣ ಸ್ವಾತಂತ್ರ್ಯದ ಒಂದು ಅಂಗ ಮಾತ್ರ ಎಂದು ಭಾವಿಸಿದ್ದರು ಗಾಂಧೀಜಿ. ಈ ಕಲ್ಪನೆಯನ್ನೇ ಕಟ್ಟೀಮನಿಯವರು 'ಸ್ವಾತಂತ್ರ್ಯದೆಡೆಗೆ'ಯಲ್ಲಿ ಮಂಡಿಸಿದ್ದಾರೆ. ಇದರ ಕಥಾನಾಯಕ ಶೇಖರ ಗ್ರಾಮೀಣ ಜನತೆಯಲ್ಲಿ ಮನೆಮಾಡಿಕೊಂಡಿರುವ ಅಜ್ಞಾನ, ಬಡತನಗಳನ್ನು ನಿವಾರಿಸಿ ಅವರನ್ನು ಎಲ್ಲ ಬಗೆಯ ಸುಲಿಗೆ ಶೋಷಣೆಗಳಿಂದ ಬಿಡುಗಡೆಗೊಳಿಸಲು ಹೆಣಗಾಡುತ್ತಾನೆ. ಹೀಗಾಗಿ ರಾಜಕೀಯ ಸಂಗ್ರಾಮ ಈ ಕಾದಂಬರಿಯ ಪ್ರಮುಖ ವಸ್ತುವಾಗದ ಹಿನ್ನಲೆಯಲ್ಲೇ ನಿಂತುಕೊಂಡಿದೆ" (ದೇಜಗೌ ಮತ್ತು ಸಿಪಿಕೆ, ೧೯೬೯, ಪುಟ-೧೬೬.) ಎನ್ನಬಹುದು. ಕಾದಂಬರಿಯುದ್ದಕ್ಕೂ ಹಳ್ಳಿ, ಸ್ಲಂಗಳ ಅಂಧಕಾರದ, ಮೌಢ್ಯಗಳ ಚಿತ್ರ ಕಾಣಿಸುತ್ತದೆ. ಸಾಮಾಜಿಕ ವ್ಯವಸ್ಥೆಯಲ್ಲಿನ ಮೇಲು ಕೀಳುಗಳು ತುಂಬಾ ಪ್ರಭಾವವನ್ನು ಕಾದಂಬರಿಗೆ ಒದಗಿಸಿವೆ. ಶೇಖರನು ಸರಕಾರಿ ಸಿಪಾಯಿ ಮಗನಾದರೂ ಬಡತನ-ಸಿರಿತನದ ಎರಡನ್ನೂ ಕಾಣುತ್ತಾನೆ. ಸಾಮಾಜಿಕವಾಗಿ ಇಲ್ಲಿ ಬಸವರಾಜ ಕಟ್ಟೀಮನಿಯವರ ಅನುಭವವು ಮೈದುಂಬಿ ಹರಿದಿದೆ.

ಗಾಂಧೀಜಿಯ ಬಂಧನದಿಂದ ಬೆಳಗಾವಿಯಲ್ಲಿ ನಡೆದ ಹರತಾಳದ ವರ್ಣನೆಯಿಂದ ಕಾದಂಬರಿ ಪ್ರಾರಂಭವಾಗುತ್ತದೆ. ಮೆರವಣಿಗೆಯಲ್ಲಿ ಸಹಸ್ರ ಕಂಠಗಳು ಹಾಡಿದ ಧ್ವಜಗೀತೆ 'ಸಮುದ್ರದ ಗಂಭೀರ ಗರ್ಜನೆಯಂತೆ, ದೇವಾಲಯದ ಘಂಟಾನಾದದಂತೆ' ಕೇಳಿ ಬರುತ್ತದೆ. ಪೋಲೀಸ್ ಸಿಪಾಯಿಯೊಬ್ಬನ ಮಗನಾದ ಹನ್ನೆರಡು ವರ್ಷದ ಹುಡುಗ ಶೇಖರ ಅದಕ್ಕೆ ಮಾರುಹೋಗಿ ಹರತಾಳದಲ್ಲಿ ಭಾಗವಹಿಸಿ ಪೋಲೀಸರಿಂದ ಪೆಟ್ಟು ತಿನ್ನುತ್ತಾನೆ. ತನ್ನ ನೌಕರಿಗೆ ಕಲ್ಲು ಬಿದ್ದೀತೆಂದು ಹೆದರಿದ ತಂದೆಯ ಆಗ್ರಹಕ್ಕೆ ಮನೆಬಿಟ್ಟು ಕಲ್ಲಾಪುರವೆಂಬ ಹಳ್ಳಿಯನ್ನು

ಸೇರುತ್ತಾನೆ. ಅಲ್ಲಿ ಒಂದು ರೈತ ಕುಟುಂಬದೊಡನೆ ಬೆರೆತು ಅವರ ಸುಖದುಃಖಗಳಲ್ಲಿ ಪಾಲ್ಗೊಳ್ಳುತ್ತಾನೆ. ಕಡೆಗೆ ಅಲ್ಲಿಯೇ ನೆಲಸಿ ಆ ಗ್ರಾಮದಲ್ಲಿ ನಾನಾ ಮುಖವಾದ ಸುಧಾರಣೆಗಳನ್ನು ಕೈಗೊಳ್ಳುತ್ತಾನೆ. ಜಮೀನ್ದಾರರು, ಸಾಹುಕಾರರು, ಪರಕೀಯ ಸರಕಾರ–ಈ ಮೂವರ ವಿರುದ್ಧವೂ ರೈತ ಹೋರಾಟ ನಡೆಸಬೇಕಾಗಿದೆಯೆಂಬುದನ್ನು ಮನಗಾಣಿಸುತ್ತಾನೆ. ಅವರನ್ನು ವಿವಿಧ ಯತ್ನಗಳಿಂದಾಗಿ, ಅಜ್ಞಾನ ನಿದ್ರೆಯಲ್ಲಿ ಮುಳುಗಿದ್ದ ದಲಿತ ಜನ ಎದ್ದುನಿಂತು ತಮ್ಮನ್ನು ಬಿಗಿದ ಸಂಕೋಲೆಗಳನ್ನೆಲ್ಲ ಮುರಿದು ಸ್ವಾತಂತ್ರ್ಯದೆಡೆಗೈದಲು ಸಿದ್ಧರಾಗುತ್ತಾರೆ. ಅಷ್ಟರಲ್ಲಿ ನಲವತ್ತೆರಡರ ಚಳುವಳಿ ಮೊದಲಾಗುತ್ತದೆ; 'ಮಾಡಿ, ಇಲ್ಲವೆ ಮಡಿಯಿರಿ' ಎಂಬ ಘೋಷಣೆ ಮೊಳಗುತ್ತದೆ. ಶೇಖರ ಅದರಲ್ಲಿ ಧುಮುಕುತ್ತಾನೆ. ಇಷ್ಟು ಈ ಕಾದಂಬರಿಯ ಸಾರಾಂಶವಾಗಿದೆ.

'ಸ್ವಾತಂತ್ರ್ಯದೆಡೆಗೆ' ಕಾದಂಬರಿ ನಮಗೆ ಸ್ವಾತಂತ್ರ್ಯಪೂರ್ವದ ಹಳ್ಳಿಯ ಮತ್ತು ಪಟ್ಟಣದ ಒಬ್ಬ ತರುಣ ಮತ್ತು ಅವನ ಕುಟುಂಬವು ಹೇಗೆ ಸ್ವಾತಂತ್ರ್ಯದೆಡೆಗೆ ಬೆಳೆಯುತ್ತಾ ಹೋಗುವ ಚಿತ್ರಣವನ್ನು ಬಿಚ್ಚಿಡುತ್ತದೆ. ಇಲ್ಲಿ ಲೇಖಕರು ಪೊಲೀಸ ಸಿಪಾಯಿಯೊಬ್ಬನ ಮಗನು ಹೇಗೆಲ್ಲಾ ಹೋರಾಟದ ಹಾದಿಗಳನ್ನು ತುಳಿಯುತ್ತಾ ತನ್ನ ಹೋರಾಟದ ಮನೋಭಾವಗಳನ್ನು, ಚಳುವಳಿಯ ಛಲವನ್ನು ತೋರುತ್ತಾನೆಂಬುದನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಮುಖ್ಯ ಪಾತ್ರದಲ್ಲಿರುವ ಶೇಖರ ತನ್ನ ಸುತ್ತಲಿನ ಪರಿಸರಕ್ಕೆ, ಸಾಮಾಜಿಕ ಚಳುವಳಿಗೆ ಸ್ಪಂದಿಸುತ್ತಾ ಸ್ವಾತಂತ್ರ್ಯದೆಡೆಗೆ ಸಾಗಲು ಹಾತೊರೆಯುತ್ತಾನೆ. ಜೊತೆಗೆ ತನ್ನ ಸುತ್ತಲಿನವರನ್ನೂ ಅತ್ತ ನೋಡುವಂತೆ ಮಾಡುತ್ತಾನೆ. ಪ್ರಗತಿಶೀಲ ಮನೋಭಾವದ ಶೇಖರನು ಪುರೋಹಿತಶಾಹಿ, ಯಜಮಾನ್ಯ ಸಂಸ್ಕೃತಿಗಳನ್ನು, ಜಮೀನುದಾರಿಕೆಯನ್ನು ವಿರೋಧಿಸುವ ಕಮ್ಯೂನಿಸ್ಟರ ಗುಂಪು ಸೇರಿ ಭಾರತೀಯ ನೆಲದ ರಾಜಕೀಯ ಮತ್ತು ಸಾಮಾಜಿಕ ಚಿಂತನೆಗಳಿಗೆ ಮಹತ್ವ ಕೊಡುತ್ತಾನೆ. ಇಲ್ಲಿಯ ಶೇಖರನ ವಿಚಾರಗಳು ಲೇಖಕ ಕಟ್ಟೀಮನಿಯವರ ಚಿಂತನೆಗಳೇ ಆಗಿವೆ. ಕಾದಂಬರಿಯ ಮೊದಲಿನಿಂದ ಕಟ್ಟೀಮನಿಯವರ ತಮ್ಮ ಬಾಲ್ಯದ ಸ್ವಾತಂತ್ರ್ಯ ಹೋರಾಟದ, ಚಳುವಳಿಯ ಅನುಭವಗಳನ್ನು ಶೇಖರನ ರೂಪದಲ್ಲಿ ಹೇಳುತ್ತಾ ಹೋಗಿರುವದನ್ನು ಗುರುತಿಸಬಹುದು. ಕಾದಂಬರಿಯ ಕೊನೆಯು ಮಲ್ಲಣ್ಣನ ಮಗಳು ಗೌರಿ ಮತ್ತು ಶೇಖರನ ಮದುವೆಯೊಂದಿಗೆ ಮುಗಿಯುತ್ತದೆ. ಸಿಪಿಕೆಯವರು ವಿಮರ್ಶಿಸುವಂತೆ "ವಸ್ತುತಃ 'ಸ್ವಾತಂತ್ರ್ಯದೆಡೆಗೆ' ಕಾದಂಬರಿಯೇ 'ಮಾಡಿಮಡಿದವರು' ಕಾದಂಬರಿಯ ಉತ್ತರಭಾಗ" ಈ ಕಾದಂಬರಿಯಾಗಿ ಬಿತ್ತರಗೊಂಡಿದೆ.

ದೇಶದ ಸ್ವಾತಂತ್ರ್ಯ ಸ್ವಾಭಿಮಾನ ಹಾಗು ಅದರ ಏಳಿಗೆಯನ್ನು ತಮ್ಮ ಕಾಳಜಿಯನ್ನಾಗಿರಿಸಿಕೊಂಡಿದ್ದರು. ಬಸವರಾಜ ಕಟ್ಟೀಮನಿಯವರು ಬಹುತೇಕ ತಮ್ಮ

ಕಾಳಜಿಯನ್ನು ಸ್ವಾತಂತ್ರ್ಯದೆಡೆಗೆ ಮತ್ತು ಮಾಡಿಮಡಿದವರು ಕಾದಂಬರಿಗಳಲ್ಲಿ ಪ್ರಬಲವಾಗಿ ಹಿಡಿದಿಟ್ಟುಕೊಂಡಿದ್ದಾರೆ.

## ವಿ.ಎಂ. ಇನಾಂದಾರ ಅವರ ಸ್ವಾತಂತ್ರ್ಯ ಪೂರ್ವದ ಕಾದಂಬರಿಗಳಲ್ಲಿನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು

ಕನ್ನಡದ ಪ್ರಮುಖ ಲೇಖಕರಲ್ಲೊಬ್ಬರಾದ ವಿ.ಎಂ. ಇನಾಂದಾರ್ (೧೯೧೨-೧೯೮೬) ಅವರು ಮಹತ್ವದ ಪ್ರಗತಿಶೀಲ ಧೋರಣೆಯುಳ್ಳ ಕಾದಂಬರಿಕಾರರಾಗಿ ಗೋಚರಿಸುತ್ತಾರೆ. ಇಂಗ್ಲಿಷ್ ಪಾಂಡಿತ್ಯದ ಫಲವಾಗಿರುವ ಅಭ್ಯಾಸಪೂರ್ಣವಾದ ತಂತ್ರವನ್ನು ಅವರ ಕಾದಂಬರಿಗಳಲ್ಲಿ ಅಳವಡಿಸಿಕೊಂಡಿದ್ದನ್ನು ಕಾಣುತ್ತೇವೆ. ಒಟ್ಟು ಹದಿನೆಂಟು ಕಾದಂಬರಿಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಮೂರಾಬಟ್ಟೆ (೧೯೪೬), ಕನಸಿನ ಮನೆ (೧೯೪೭), ವಿಜಯ ಯಾತ್ರೆ (೧೯೫೧), ಶಾಪ (೧೯೪೯), ಮುಗಿಯದ ಕತೆ (೧೯೫೩), ನವಿಲು ನಾಕೆ (೧೯೭೧), ಯಾತ್ರಿಕರು (೧೯೭೬) ಪ್ರಮುಖವಾದವುಗಳು.

'ಮೂರಾಬಟ್ಟೆ' ೧೯೪೬ರಲ್ಲಿ ಪ್ರಕಟಗೊಂಡ ಮಹತ್ವದ ಕಾದಂಬರಿಯಾಗಿದೆ. ಇದಕ್ಕೊಂದು ಹಿನ್ನೆಲೆಯನ್ನು ಅವರು "ಎರಡು ಧ್ರುವ"ವನ್ನು ಓದಿದ ವಿಮರ್ಶಕ ಮಿತ್ರರೊಬ್ಬರು ಹತ್ತುವರ್ಷ ನೀವು ಏನೂ ಬರೆಯಬೇಡಿ ಅಂತ ಹೇಳಿದರಂತೆ. ಆ ಮಾತನ್ನು ಅವರು ಅಭಿಮಾನಕ್ಕೆ ಕುಂದೆಣಿಸದೆ ಸಂಯಮದಿಂದ ಪಾಲಿಸಿದರು. ಆ ದಿನಗಳಲ್ಲಿ ಜಯಂತಿ, ತ್ರಿವೇಣಿ, ಆರ್ಯನಪಾಥ, ಪಿ.ಇ.ಎನ್. ಪತ್ರಿಕೆಯಲ್ಲಿ ಕನ್ನಡ ಪುಸ್ತಕಗಳನ್ನು ವಿಮರ್ಶಿಸುವ ಕೆಲಸವನ್ನು ಕೈಗೊಂಡರು. 'ವಿಹಾರಿ' ಎಂಬ ಹೆಸರಿನಿಂದ ಬರೆಯುತ್ತಿದ್ದ ಅಂದಿನ ವಿಮರ್ಶೆಗಳೆಲ್ಲ ಬಹು ಕಟುವಾಗಿಯೇ ಇದ್ದವು. ಅವು ಹಲವರ ಮನಸ್ಸನ್ನು ನೋಯಿಸುತ್ತಿದ್ದವು. ಇಂತಹ ವಿಮರ್ಶೆಗೆ ಟೀಕೆಗಳು ಬರುತ್ತಿದ್ದವು. ಧಾರವಾಡದ ಜಿ.ಬಿ. ಜೋಷಿಯವರು ಒಮ್ಮೆ ಇನ್ನೊಬ್ಬರ ಪುಸ್ತಕ ಬಯ್ಯುವುದು ಬಹಳ ಸುಲಭ; ಬರೆಯುವುದು ಬಹಳ ಕಷ್ಟ. ಎಂದು ಹೇಳಿದರಂತೆ ಅದಕ್ಕೆ ಸವಾಲಾಗಿ ಮೂರಾಬಟ್ಟೆ ೧೯೪೬ರಲ್ಲಿ ಸ್ವತಂತ್ರ ಕೃತಿಯನ್ನು ಬರೆದರು. ಆ ಮಾತನ್ನು ಅವರು ಹೇಳದೆ ಇದ್ದಿದ್ದರೆ ಬಹುಶಃ ನಾನು ಸ್ವತಂತ್ರ ಕಾದಂಬರಿಕಾರನಾಗಿ ಕೆಲಸವನ್ನೇ ಪ್ರಾರಂಭ ಮಾಡುತ್ತಿರಲಿಲ್ಲ" (ಇನಾಂದಾರ. ವಿ.ಎಂ. ಪುಟ-೧೫-೧೬) ಎಂದು ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ.

ಪ್ರಸ್ತುತ 'ಮೂರಾಬಟ್ಟೆ' ಬೇರೆ ಬೇರೆ ವರ್ಗಗಳಿಗೆ ಸಂಬಂಧಿಸಿದ ಕಲೆ-ಜೀವನ, ಸೌಂದರ್ಯ-ರಸಿಕತೆ, ಬುದ್ಧಿ-ಭಾವನೆ, ಕಾಮ-ಪ್ರೇಮ, ದೇಶಾಭಿಮಾನ-ಹೋರಾಟ,

ಸ್ವಾತಂತ್ರ್ಯದ ತುಡಿತ-ಮಿಡಿತಗಳನ್ನು ಚಿತ್ರಿಸಿರುವುದನ್ನು ಕಾಣುತ್ತೇವೆ. ಸ್ವಾತಂತ್ರ್ಯ ಪೂರ್ವ ಭಾರತದ ಚಿತ್ರಣವನ್ನು ಪ್ರಸ್ತುತ ಮೂರಾಬಟ್ಟೆ ಕಾದಂಬರಿ ಕಟ್ಟಿಕೊಡುತ್ತದೆ.

**ಮೂರಾಬಟ್ಟೆ: ೧೯೪೬**

ಇದು ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಕಾದಂಬರಿ ಮೂರಾಬಟ್ಟೆ; ಇಲ್ಲಿ ಮೂರು ಪಾತ್ರಗಳು ಬರುತ್ತವೆ. ಮೂರು ಪಾತ್ರಗಳು ಮೂರು ದಿಕ್ಕಿನಲ್ಲಿ ಚಿಂತಿಸುತ್ತವೆ. ಮೂರೂ ಚಿಂತೆಗಳು ಸಮಾಜದಲ್ಲಿನ ಸಮಸ್ಯೆಗಳಿಗೆ ಬೇರೆ ಬೇರೆಯದಾದ ಆಯಾಮಗಳನ್ನು ಕಲ್ಪಿಸುವಲ್ಲಿ ಗೊಂದಲಗಳನ್ನು ಸೃಷ್ಟಿಸಲು ಕಾರಣವಾಗುತ್ತವೆ. ಆಗ ಈ ಮೂರು ಪಾತ್ರಗಳಲ್ಲಿನ ಸೂಕ್ಷ್ಮ ಸಂಬಂಧಗಳು ಒಡೆದು ಮೂರಾಬಟ್ಟೆಗೆ ದಾರಿಯಾಗುತ್ತದೆ. ಕಾದಂಬರಿಯಲ್ಲಿನ ಕಥೆಗೂ ಕಾದಂಬರಿಗೆ ಇಟ್ಟ ಹೆಸರಿಗೂ ತುಂಬಾ ಸಾಮ್ಯತೆಯಿದೆ. ಮೂರು ಪಾತ್ರಗಳಲ್ಲಿ ಸ್ವಾತಂತ್ರ್ಯತೆಯ ವಿಭಿನ್ನ ಮುಖಗಳನ್ನು ಚಿತ್ರಿಸುತ್ತವೆ. ಇಲ್ಲಿ ಕಾದಂಬರಿಯನ್ನು ಓದಿ ಮುಗಿಸುವಷ್ಟರಲ್ಲಿ ಸಹೃದಯನ ಮನಸ್ಸಿನಲ್ಲಿ ಮೂಡುವ ಮೂರಾಬಟ್ಟೆಯ ಚಿತ್ರಣವು ಕಣ್ಣಮುಂದೆ ಕಟ್ಟುತ್ತದೆ.

ಗಾಂಧೀಜಿಯ ಧ್ಯೇಯಾದರ್ಶಗಳನ್ನು ನಂಬಿದ ಶಾಮಣ್ಣನೆಂಬ ಬಡ ಯುವಕನೊಬ್ಬನ ಕಥೆ, ಶಾಮಣ್ಣ, ರಾಮಣ್ಣರು ಬಾಲ್ಯ ಸ್ನೇಹಿತರು. ಸುಖ ಜೀವನವನ್ನೇ ಗುರಿಯಾಗಿಸಿಕೊಂಡ ರಾಮಣ್ಣ ತನ್ನ ಸ್ವ ಸಾಮರ್ಥ್ಯದಿಂದ ಮುಂಬಯಿಯಲ್ಲಿ ಉಚ್ಚ ವರ್ಗದ ವಕೀಲನಾಗುತ್ತಾನೆ. ಜೊತೆಗೆ ನಾನಾ ಸಾಹೇಬರ ಮಗಳು ನಿರ್ಮಲೆಯ ಪ್ರೀತಿಯೂ ದೊರೆಯುತ್ತದೆ. ಶಾಮಣ್ಣ ಕಾರ್ಯಾರ್ಥವಾಗಿ ಮುಂಬಯಿಗೆ ತನ್ನ ಮಿತ್ರ ರಾಮಣ್ಣನಲ್ಲಿಗೆ ಹೋಗಿದ್ದಾಗ ಅಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಬ್ರಿಟಿಷರ ವಿರುದ್ಧ ಭಾಷಣ ಮಾಡಿದುದಕ್ಕಾಗಿ ಜೈಲು ಸೇರುತ್ತಾನೆ. ನಿರ್ಮಲೆ ಮದುವೆಗೆ ಮುನ್ನ ಗರ್ಭಿಣಿಯಾದುದರಿಂದ ರಾಮಣ್ಣನನ್ನು ತಿರಸ್ಕರಿಸುತ್ತಾಳೆ. ರಾಮಣ್ಣನಿಗೆ ನಿರ್ಮಲೆಯಿಲ್ಲದೆ ತನ್ನ ಜೀವನ ವ್ಯರ್ಥ ಎನ್ನುವ ನಿರಾಶೆಯಾಗುತ್ತದೆ. ಶಾಮಣ್ಣ ಮಾತೃವಾತ್ಸಲ್ಯವನ್ನು ಕಡೆಗಣಿಸಲಾರದೆ, ತನ್ನ ಆದರ್ಶವನ್ನು ಬಲಿಕೊಟ್ಟು ಕ್ಷಮಾಪತ್ರ ಬರೆದು ಕೊಡುತ್ತಾನೆ. ಕೊನೆಗೆ ತಾಯಿಯ ದರ್ಶನ ಭಾಗ್ಯವೂ ದೊರೆಯದೆ ಅತ್ತ ಆದರ್ಶವನ್ನೂ ಉಳಿಸಲಾಗದ ಸ್ಥಿತಿಯಲ್ಲಿ ಕಾದಂಬರಿ ಮುಕ್ತಾಯಗೊಳ್ಳುತ್ತದೆ.

"ಅಜ್ಞಾನದ ಕತ್ತಲೆಯಲ್ಲಿ ಮೂರು ತಲೆಮಾರೋ, ಹತ್ತು ತಲೆಮಾರೋ ಮುಳುಗಿದ್ದವರಿಗೆ ಬೆಳಕೊಂದು ಕನಸೇ ಸರಿ. ಆದರೂ ಬೆಳಕೆಂಬುದೊಂದು ಇದೆ ಎಂಬ ಕಲ್ಪನೆಯನ್ನಾದರೂ ಅವರ ತಲೆಯಲ್ಲಿ ಸೇರಿಸಿದರೂ ಅದೊಂದು ದೊಡ್ಡ ಕೆಲಸವಾದಂತೆ...." (ಇನಾಂದಾರ. ವಿ.ಎಂ. ೧೯೭೩, ಪುಟ-೩೯. ನಾಲ್ಕನೆ ಮುದ್ರಣ) ಇಲ್ಲಿಯ ಶಾಮಣ್ಣನ ಮಾತುಗಳು ಎಷ್ಟು

ಪ್ರಸ್ತುತವೆನಿಸುತ್ತವೆ ಎಂದರೆ; ಸ್ವಾತಂತ್ರ್ಯದಿಂದ ತಮ್ಮ ಬಾಳು ಕತ್ತಲೆಯಿಂದ ಹೊರ ಬರಬಹುದೆಂಬ ಆಶಯವನ್ನು ಹೊಂದಿದ್ದರು. ಸ್ವ ಹಿತಾಸಕ್ತಿಯನ್ನು ಕಡೆಗಣಿಸಿ ಆಂದೋಲನದಲ್ಲಿ ಧುಮಿಕಿದವರಿಗೆ ಬರಬಹುದಾದ ತೊಡಕನ್ನು ಕಾದಂಬರಿಯಲ್ಲಿ ಗಮನಿಸಬಹುದು. ಇಲ್ಲಿಯ ಶಾಮಣ್ಣ ಅಂದರೆ ಅವನಂತೆ ದೇಶಪ್ರೇಮಿಯಾದ ಪ್ರತಿಯೊಬ್ಬ ಭಾರತೀಯನೂ ಎದುರಿಸಬೇಕಾದ ಸವಾಲುಗಳು ಎರಡು. ತನ್ನ ಆತ್ಮೀಯರ ಸಂಬಂಧ ಮತ್ತು ತನ್ನ ನಾಡಿನ ಸಂಬಂಧವೆರಡರ ತಾಕಲಾಟದಲ್ಲಿ ಉದ್ದೇಶ ಆದರ್ಶಗಳು ಹೇಗೆ ದುರ್ಬಲಗೊಳಳುತ್ತವೆ ಎಂಬುದನ್ನು ಕಾದಂಬರಿ ತಿಳಿಸುತ್ತದೆ. ಇಲ್ಲಿ ವ್ಯಕ್ತಿ ವ್ಯಕ್ತಿ ಸಂಬಂಧವನ್ನು ಮರೆತು ವ್ಯಕ್ತಿ ದೇಶಗಳ ಸಂಬಂಧವನ್ನು ಎತ್ತಿ ಹಿಡಿಯಬೇಕೆಂಬುದೇ ಕಾದಂಬರಿಕಾರರ ನಿಲುವು. ||

ಮಾತೃವಾತ್ಸಲ್ಯ, ತನ್ನ ನಾಡಿನ ಪ್ರೀತಿ, ದೇಶಪ್ರೇಮ, ದೇಶಭಕ್ತಿ ಇವುಗಳ ನಡುವಿನ ಘರ್ಷಣೆಯಲ್ಲಿ ಮಾತೃವಾತ್ಸಲ್ಯಕ್ಕಾಗಿ ಶಾಮಣ್ಣನ ಆದರ್ಶವು ಬೀದಿಪಾಲು ಆಗುತ್ತದೆ. ವೈಯಕ್ತಿಕ ಗುರಿಯನ್ನು ಹೊಂದುವುದಕ್ಕಾಗಿ ತಮ್ಮ ವ್ಯಕ್ತಿಗತ ಧೋರಣೆಗಳನ್ನು ಕಳೆದುಕೊಳ್ಳುವ ಸಂದರ್ಭಗಳನ್ನು ಶಾಮಣ್ಣನಂತವರು ಎದುರಿಸಬೇಕಾಗುತ್ತದೆ. ಇಲ್ಲಿ ವೈಯಕ್ತಿಕ ಸಂಬಂಧಗಳು, ಹಿತಾಸಕ್ತಿಗಳಿಗೆ ಬೆಲೆಯಿಲ್ಲದೆ ಹೋಗುತ್ತದೆ. ಅಲ್ಲದೆ ಕಟ್ಟಾ ಆದರ್ಶವಾದಿ ಶಾಮಣ್ಣನೇ ದೇಶಸೇವೆಗೆ ವಿಮುಖವಾದ ಹಾಗೆಯೇ ಎಷ್ಟೋ ಭಾರತೀಯರು ವೈಯಕ್ತಿಕ ಆಸೆ, ಆಕಾಂಕ್ಷೆಗಳಿಗೆ ಬಲಿಯಾಗುತ್ತಾರೆ.

ಕಾದಂಬರಿಯಲ್ಲಿ ಬರುವ ಮುಖ್ಯ ಪಾತ್ರಗಳು ಮೂರು: ಒಂದು ಕಥೆಯ ನಾಯಕನಂತೆ ಶೋಭಿಸುವ ಶಾಮಣ್ಣ, ಎರಡು ಪ್ರತಿನಾಯಕನಂತೆ ತೋರುವ ರಾಮಣ್ಣ, ಹಾಗೂ ಮೂರನೆಯದಾಗಿ ನಿರ್ಮಲೆ. ಇಲ್ಲಿಯ ಮೂರು ಪಾತ್ರಗಳು ಮೂರು ಧ್ಯೇಯಗಳತ್ತ ಚಿತ್ರಿತವಾಗಿವೆ. ರಾಮಣ್ಣನು ತನ್ನ ಸುಖಕ್ಕಾಗಿ, ಸ್ವಾರ್ಥಕ್ಕಾಗಿ ತನ್ನ ಸ್ನೇಹವನ್ನು, ಪ್ರೇಮವನ್ನು, ಸಂಬಂಧವನ್ನು ಬಲಿಕೊಡುವ ಸ್ವಭಾವದವನು. ಹಣವೆಂದರೆ ಬಾಯಿಬಿಡುವ ದುಷ್ಟತನಕ್ಕೆ ಕೈಹಾಕುವ ಲಂಪಟತನವನ್ನು ಮೈಗೂಡಿಸಿಕೊಂಡಿರುತ್ತಾನೆ. ನಿರ್ಮಲೆ ರಾಮಣ್ಣನ ಪ್ರೀತಿಗಾಗಿ ಹಂಬಲಿಸಿ. ಸುಖ ಕಾಣುವ ವಿಲಾಸಿನಿ. ಪ್ರೇಮದ ಬಗ್ಗೆ ರಮ್ಯ ಕನಸುಗಳನ್ನು ಹೆಣೆಯುತ್ತಿದ್ದ ನಿರ್ಮಲೆಗೆ ವಿವಾಹಕ್ಕೆ ಮೊದಲೇ ಬಂದ ಬಯಸದ ತಾಯಿತನದಿಂದ ಬಾಳು ಬರಡೆನಿಸುತ್ತದೆ. ಶಾಮಣ್ಣ ತನ್ನ ವಯಕ್ತಿಕ ಆಕಾಂಕ್ಷೆಗಳನ್ನು ಬದಿಗೊತ್ತಿ. ದೇಶ ರಕ್ಷಣೆಗಾಗಿ ಪ್ರಾಣವನ್ನೇ ಪಣವಿಟ್ಟ ಆದರ್ಶವಾದಿ ಅವನ ದೇಶ ಪ್ರೇಮ ಗುರಿಯನ್ನು ಸೇರದೆ ತಾಯಿಯನ್ನು ಉಳಿಸಿಕೊಳ್ಳಲಾಗದೆ ವಿಫಲಗೊಳ್ಳುತ್ತದೆ. (ಮೋಹನ್ ಕುಂಟಾರ್, ೧೯೯೪, ಪುಟ-೧೩-೧೬.)

ಹೀಗೆ ನೈತಿಕವಾಗಿ ರಾಮಣ್ಣನ ದೈಹಿಕವಾಗಿ ನಿರ್ಮಲೆ, ಭಾವನಾತ್ಮಕವಾಗಿ ಶಾಮಣ್ಣ ಬದುಕಿನಲ್ಲಿ ಮುಗ್ಗರಿಸುತ್ತಾರೆ. ಮೂವರ ಬದುಕು ಸಹ ಮೂರು ವಿಧದಲ್ಲಿ ಮೂರಾಬಟ್ಟೆಯಾಗುತ್ತದೆ.

ಕಾದಂಬರಿಯ ಪುಟ ೧೨೦ ರಿಂದ ೧೪೦ರ ವರೆಗೆ ಸ್ವಾತಂತ್ರ್ಯ ಚಳುವಳಿ ರೋಮಾಂಚನಕಾರಿಯಾಗಿ ಮೂಡಿಬಂದಿದೆ. ಮುಂಬೈಯಲ್ಲಿ ಶಾಮಣ್ಣ ಬಂಧಿತನಾಗುವ ದಿನದ ಗಲಭೆಯು ನೈಜವಾಗಿ ಮೂಡಿಬಂದಿದೆ. ತನ್ನ ಗೌರವಕ್ಕೆ ಕುಂದುಬಾರದಂತೆ ರಾಮಣ್ಣನು ತನ್ನ ಸ್ನೇಹಿತನಾದ ಶಾಮಣ್ಣನ ವಿರುದ್ಧ ಸರ್ಕಾರಿ ವಕೀಲನಾಗಿ ವಾದಿಸಬೇಕಾದ ಅನಿರ್ವಾಯತೆ ಬರುತ್ತದೆ. ಶಾಮಣ್ಣನ ತಾಯಿ ಹಾಗೂ ತಂಗಿಯರನ್ನು ಕರೆಯಿಸಿ ಅವರನ್ನು ರಕ್ಷಿಸಬೇಕಾದ ಜವಾಬ್ದಾರಿ ರಾಮಣ್ಣ ಮೇಲೆ ಬೀಳುತ್ತದೆ. ಕೊನೆಯಲ್ಲಿ ನಿರ್ಮಲೆಯು ಇಲ್ಲವಾಗುವ ದುಃಸ್ಥಿತಿ ಬರುತ್ತದೆ. ಇವುಗಳ ಚಿತ್ರಣವನ್ನು ಕಾದಂಬರಿಕಾರ ವಿ.ಎಂ. ಇನಾಂದಾರರ ಲೇಖನಿಯ ಸಾಮರ್ಥ್ಯವನ್ನು ಎತ್ತಿ ಹಿಡಿಯುತ್ತವೆ.

ಕಾದಂಬರಿಯಲ್ಲಿ ಬರುವ ಸಂಗಪ್ಪಗೌಡ ರಾಜಕೀಯದಿಂದ ಶಾಮಣ್ಣನ ಜೈಲು ಶಿಕ್ಷೆಗೆ ಇನ್ನಷ್ಟು ಒತ್ತುಕೊಟ್ಟರೂ ಅವನ ಅಪ್ಪ ಒತ್ತೆ ಇಟ್ಟ ಆಸ್ತಿಯನ್ನು ಸೆಳೆದು ಶಾಮಣ್ಣನ ತಾಯಿ ಹಾಗೂ ತಂಗಿಯರನ್ನು ಬೀದಿಪಾಲು ಮಾಡಬೇಕೆಂಬ ಅವನ ಯೋಜನೆಯನ್ನು ವೆಂಕಪ್ಪ ಮಾಸ್ತರರಂಹ ಬಡವನ ಧೈರ್ಯ ಎಲ್ಲವನ್ನು ಬುಡಮೇಲು ಮಾಡುತ್ತದೆ. ಶಾಮಣ್ಣನ ತಾಯಿ ರಿಂದವ್ವ ಮಗನನ್ನು ಕಾಣಬೇಕೆಂದು ಹಂಬಲಿಸಿ ಪ್ರಾಣಬಿಡುವ ಸನ್ನಿವೇಶವನ್ನು ಕರಳು ಹಿಂಡುವಂತೆ ಮಾಡುತ್ತದೆ. ಪ್ರೀತಿಯು ದೈಹಿಕ ಸಂಪರ್ಕವನ್ನು ಪಡೆದು ಗರ್ಭಧರಿಸಲು, ಪ್ರೇಮದ ಬಗ್ಗೆ ತಿರಸ್ಕಾರ ಮೂಡಿ ಹೇಸಿಗೆಯಿಂದ ಪಾರಾಗಲು ನಿರ್ಮಲೆ ರಾಮಣ್ಣನಿಂದ ದೂರವಾದಳು. ಕಾಮ ರಹಿತವಾದ ಪ್ರೇಮ ಶಾಶ್ವತ. ಕಾಮ ವಾಸನೆಯುಳ್ಳ ಪ್ರೇಮ ನಿರಾಸೆ. ಅಲ್ಲದೇ ಸೋಲಿನಲ್ಲಿ ಕೊನೆಗೊಳ್ಳುತ್ತದೆ ಎಂಬಂತೆ ಚಿತ್ರಿಸಿದ ಈ ಪಾತ್ರದ ಪರಿವರ್ತನೆ ಪರಿಣಾಮಕಾರಿ ಎನಿಸಿದೆ. ಇಲ್ಲಿ ಬರುವ ಕೌಟುಂಬಿಕ ಚಿತ್ರಣವು ಕಾದಂಬರಿಯ ಬೇರೊಂದು ಮುಖವನ್ನು ವ್ಯಕ್ತಪಡಿಸುತ್ತದೆ. ದೇಶಪ್ರೇಮಕ್ಕೆ ಸಿಕ್ಕ ಶಾಮಣ್ಣನು ಜೈಲನ್ನು ಸೇರುವ ಸಂದರ್ಭ ಒಂದು ಚಿತ್ರಿತವಾದರೆ ಮತ್ತೊಂದು ಕಡೆ ಅವನ ಕುಟುಂಬವು ಸಮಾಜ ದುಷ್ಟ ಶಕ್ತಿಯಂತೆ ಗೋಚರಿಸುವ ಸಂಗಪ್ಪ ಮತ್ತು ವೆಂಕಪ್ಪನಂತವರಿಂದ ಪಾರಾಗಲು ಸಾಧ್ಯವಾಗದೇ ಸಂಕಟಕ್ಕೆ ಸಿಲುಕುವ ಚಿತ್ರಣವು ಪ್ರಕಟಗೊಂಡಿದೆ.

ಸ್ವಾತಂತ್ರ್ಯ ಚಳುವಳಿಯನ್ನು ಪ್ರಮುಖ ವಸ್ತುವನ್ನಾಗಿ ಆಯ್ದುಕೊಂಡರೂ ಜೊತೆಗೆ ಪ್ರೇಮ ಕಥೆಯೊಂದನ್ನು ಹೊಂದಿಸಿಕೊಂಡು ಹೋಗುವಲ್ಲಿ ವಿ.ಎಂ. ಇನಾಂದಾರರ ಸಾಮರ್ಥ್ಯವಿದೆ.

ಕಲ್ಪನೆಯ ಕುದುರೆಯನ್ನು ಏರದೇ ವಾಸ್ತವಾದಿತನವನ್ನು, ಪ್ರಗತಿಶೀಲ ಧೋರಣೆಯನ್ನು ತೋರುತ್ತದೆ. ಸಂದರ್ಭೋಚಿತವಾಗಿ ಪ್ರಕೃತಿ ವರ್ಣನೆ, ಬದುಕಿನ ಸ್ಥೂಲ ಚಿತ್ರಣವು ದೊರೆಯುತ್ತದೆ. ಕಾದಂಬರಿಲ್ಲಿ ಗಾಂಧೀ, ನೆಹರೂ, ಸರ್‌ದಾರ್ ಪಟೇಲ್ ಮೊದಲಾದವರ ಭಾಷಣಗಳು ರಾಷ್ಟ್ರಕಲ್ಪನೆಯ ಜೀವಂತ ಚಿತ್ರಣವನ್ನು ಕೊಡುತ್ತವೆ. ಎದುರಿಸಬೇಕಾದ ಸನ್ನಿವೇಶದ ಪ್ರಬಲತೆಯಿಂದಲೋ ಅಲ್ಲಿನ ಮಾನಸಿಕ ದೌರ್ಬಲ್ಯದಿಂದಲೋ ವ್ಯಕ್ತಿ ತನ್ನ ಉದ್ದೇಶದಿಂದ ವಿಮುಖನಾಗಬೇಕಾದ ದುಃಸ್ಥಿತಿ ಹೇಳಿ ಸ್ವಾತಂತ್ರ್ಯ ಹೋರಾಟಗಾರರ ಹೀನ ಸ್ಥಿತಿಯನ್ನು ವಿವರಿಸುತ್ತದೆ. ಇದನ್ನು ಮೀರಿ ನಿಲ್ಲಬೇಕಾದ ಅನಿವಾರ್ಯತೆಯನ್ನು ಕಾದಂಬರಿಕಾರರು ಧ್ವನಿಸುತ್ತಾರೆ. ಕಾದಂಬರಿಯ ಉದ್ದೇಶ ಸಾಧನೆಯಲ್ಲಿ ಕಾದಂಬರಿಗಳ ಪಾತ್ರಗಳು ಸೋತರೂ ಕಾದಂಬರಿಕಾರರು ಗೆಲುವನ್ನು ಸಾಧಿಸುತ್ತಾರೆ.

ಕಾದಂಬರಿಯು ಲೇಖಕರ ಪರವಾಗಿ ಗೆದ್ದಿತು ಎನ್ನುವಾಗ ಮುಖ್ಯವಾಗಿ ಅವರ ಪ್ರಗತಿಶೀಲ ಮನಸ್ಸು ಅಲ್ಲಿ ಕೆಲಸ ಮಾಡಿದೆ. ಕಾದಂಬರಿಯ ಉದ್ದಕ್ಕೂ ವಾಸ್ತವತೆಗೆ, ನೈಜತೆಗೆ ಹೆಚ್ಚು ಒತ್ತು ಕೊಟ್ಟಿರುವುದರಿಂದ ಇಲ್ಲಿನ ಪಾತ್ರಗಳು ಮೂರು ಮುಖವನ್ನು ತೋರುತ್ತವೆ. ಮೂರೂ ಪಾತ್ರದಲ್ಲಿ ಒಂದೊಂದು ಪಾತ್ರವೂ ಮೂರು ಮುಖವನ್ನು ಹೊಂದಿವೆ. ಒಟ್ಟು ಒಂಭತ್ತು ಮುಖಗಳು ಸೇರಿ 'ಮೂರಾಬಟ್ಟೆ'ಗೆ ಕಾರಣವಾಗುತ್ತವೆ. "'ಮೂರಾಬಟ್ಟೆ'ಯಲ್ಲಿನ ಶಾಮಣ್ಣನ ಬದುಕಿನ ದುಃಸ್ಥಿತಿಯ ಬಗ್ಗೆ ಸಾಕಷ್ಟು ವಿವರಣೆಯಿದ್ದು ಅವನ ಸೋಲಿನೊಂದಿಗೆ ಕಾದಂಬರಿ ಕೊನೆಗೊಳ್ಳುತ್ತದೆ" (ಮೋಹನ್ ಕುಂಟಾರ್, ೧೯೯೪, ಪುಟ-೧೯.)ಎಂಬಂಥ ವಿಮರ್ಶೆಗಳು ಸರಿ ಎನಿಸುತ್ತವೆ.

### ತ.ರಾ.ಸು ಅವರ ಸ್ವಾಂತಂತ್ರ್ಯ ಪೂರ್ವದ ಕಾದಂಬರಿಗಳಲ್ಲಿನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು

ಸ್ವಾತಂತ್ರ್ಯಕ್ಕೆ ಸಂಬಂಧಿಸಿದಂತೆ ತರಾಸು ಅವರು ಬರೆದ ಏಕೈಕ ಕಾದಂಬರಿ ಎಂದರೆ 'ರಕ್ತತರ್ಪಣ' ಇದು ೧೯೪೬ರಲ್ಲಿ ಪ್ರಕಟಗೊಂಡಿತು. ೧೯೪೨ರ ಅಗಸ್ಟ ಕ್ರಾಂತಿ ಚಿತ್ರವನ್ನು ತಾನು ಕಂಡ ರೀತಿಯಲ್ಲಿ ನೀಡಿದ್ದಾಗಿ ಲೇಖಕರು ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ಆ ಚಳುವಳಿಯ ಕಾಲಕ್ಕೆ ವಿದ್ಯಾರ್ಥಿಯಾಗಿದ್ದ ತರಾಸು ಅವರು 'ರಕ್ತತರ್ಪಣ' ಕಾದಂಬರಿ ಮೂಡಿ ಬರಲು ತಮಗೆ ಇದ್ದ ಪ್ರೇರಣೆಯ ಕುರಿತು "ನಾನಿಲ್ಲಿ ಪಳಗಿದ ದೇಶನಾಯಕನೊಬ್ಬನನ್ನು ಚಿತ್ರಿಸುತ್ತಿಲ್ಲ. ಕ್ರಾಂತಿಯ ಮಹಾಪೂರ ಕೊಚ್ಚಿ ತಂದ ಘಟನಾ ಪ್ರಭಾವದಿಂದ ನಾಯಕತ್ವ ವಹಿಸಬೇಕಾಗಿ ಬಂದ ಅನುಭವ ಸಾಲದ ಬಿಸಿ ನೆತ್ತರ ವಿದ್ಯಾರ್ಥಿಯೊಬ್ಬನನ್ನು ಚಿತ್ರಿಸಿದ್ದೇನೆ" (ಸುರೇಶ ಪಾಟೀಲ, ೨೦೦೮, ಪುಟ-೮೧) ಎಂದು ಹೇಳಿಕೊಂಡಿದ್ದಾರೆ.

೧೯೪೨ರ ಅಗಸ್ಟ್ ೯ನೇ ದಿನ, ಹಗಲು ಹರಿಯುವ ಮೊದಲು ಬ್ರಿಟಿಷರು ಕಳ್ಳರಂತೆ ಗಾಂಧೀಜಿಯೇ ಮೊದಲಾದ ನಾಯಕರನ್ನು ದಸ್ತಗಿರಿ ಮಾಡಿದ್ದು ಅದಾದ ಮೇಲೆ ದೇಶದಲ್ಲಿ ಹರಿದ ನೆತ್ತರು ಕೋಡಿಯ ಕಥೆ; ಅಂಥ ಸಂದರ್ಭ, ಒಂದು ಸಾಮಾನ್ಯ ಹಳ್ಳಿ ಸೋಮಲಾಪುರಕ್ಕೆ ರಾತ್ರಿಯ ಹೊತ್ತು ಗಾಯಗೊಂಡು ಅನಿರೀಕ್ಷಿತವಾಗಿ ಬರುವ ಬಿಸಿ ರಕ್ತದ ಕ್ರಾಂತಿಕಾರಿ ಮನೋಭಾವದ ಯುವಕ ಚಂದ್ರಶೇಖರನಿಗೆ ಸಿಕ್ಕುವ ಪ್ರೀತಿ, ವಿಶ್ವಾಸ, ಬಳಿಕ ಅಲ್ಲಿಯೇ ಅವನು ಆರಂಭಿಸುವ ಕ್ರಾಂತಿಯ ಪ್ರವಚನ, ಜನಜಾಗೃತಿಯ ಭಾಷಣ; ಅಜ್ಜಿಗ ಮತ್ತು ಅವನ ಯುವಕ ಮಿತ್ರರು, ಬಸವ, ಚೆನ್ನಿ ಮುಂತಾದವರು ಅದನ್ನು ಮಂತ್ರಮುಗ್ಧರಾಗಿ ಆಲಿಸಿ, ಶೋಷಣೆ ಮತ್ತು ಪರಕೀಯ ಆಡಳಿತದ ವಿರುದ್ಧ ಎಚ್ಚರಗೊಳ್ಳುವುದು; ಆ ಜಡವಾದ ಹಳ್ಳಿಯಲ್ಲಿ ಮೂಡಿದ ಇಂಥ ಅಸಹನೆ, ರೋಷಗಳನ್ನೇ ಶಕ್ತಿಯನ್ನಾಗಿ ಮಾರ್ಪಡಿಸಿ ಅವರನ್ನು ಕಾರ್ಯಪ್ರವೃತ್ತರನ್ನಾಗಿಸುವ ಚಂದ್ರಶೇಖರನ ಪ್ರಯತ್ನ" (ಸುರೇಶ ಪಾಟೀಲ, , ಪುಟ-೮೨.) ಇಲ್ಲಿ ರಕ್ತತರ್ಪಣವಾಗಿ ಚಿತ್ರಣಗೊಂಡಿದೆ.

ಈ ಕಾದಂಬರಿಯಲ್ಲಿ ಗಂಭೀರವಾದ ಅಂಶಗಳು ವ್ಯಕ್ತವಾಗದಿದ್ದರೂ; ಇಲ್ಲಿ ಬರುವ ಪಾತ್ರಗಳಾಗಲಿ, ಘಟನೆಗಳಾಗಲಿ ಸ್ವಾತಂತ್ರ್ಯದ ಪ್ರಖರತೆಯನ್ನು ಪಡೆಮೂಡಿಸುವಲ್ಲಿ ಸ್ವಲ್ಪಮಟ್ಟಿನ ಪ್ರಯತ್ನವನ್ನು ತೋರಿಸುತ್ತವೆ. ಸ್ವಾತಂತ್ರ್ಯ ಪೂರ್ವ ಕಾಲದಲ್ಲಿನ ಚಾರಿತ್ರಿಕ ಹಿನ್ನೆಲೆ, ರಾಜಕೀಯ ಘಟನಾವಳಿಗಳು, ಬ್ರಿಟಿಷ್ ಸರ್ಕಾರದ ದಬ್ಬಾಳಿಕೆಗಳು ಮತ್ತಿತರ ವಿವರಗಳೊಂದಿಗೆ ಸ್ವಾತಂತ್ರ್ಯದ ಚಿತ್ರಣಗಳನ್ನು ಬೆಸೆದಿರುವುದು ಕಾಣುತ್ತದೆ. ಪ್ರಸ್ತುತ ಮಹಾಪ್ರಬಂಧದ ಅಧ್ಯಯನದ ಆಶಯಗಳನ್ನು ಸ್ವಲ್ಪ ಮಟ್ಟಿಗಾದರೂ ಇದು ಒಳಗೊಂಡಿರುವುದರಿಂದ ಅಧ್ಯಯನದ ವ್ಯಾಪ್ತಿಗೆ ಇದನ್ನು ಒಳಪಡಿಸಿಕೊಳ್ಳಲಾಗಿದೆ.

**ರಕ್ತತರ್ಪಣ: ೧೯೪೬**

ಮಹಾತ್ಮ ಗಾಂಧಿ ಅವರ ಚಳುವಳಿಯ ಸಂದರ್ಭದಲ್ಲಿ ತೆರೆಕಂಡ 'ರಕ್ತತರ್ಪಣ' ಸಾಮಾಜಿಕ ಬದಲಾವಣೆಯ ಜೊತೆಯಲ್ಲಿಯೇ ದೇಶದ ಸ್ವಾತಂತ್ರ್ಯವನ್ನು ಬಯಸಿದ ಬಹು ನಿರೀಕ್ಷಿತ ಕಾದಂಬರಿ. ಕ್ರಿಶ. ೧೯೪೦ರಿಂದ ೧೯೪೭ರ ವರೆಗೆ ಗಾಂಧೀಜಿಯವರು ಸ್ವದೇಶಿ ಚಳುವಳಿಯ ಮೂಲಕ ಪಾಶ್ಚಾತ್ಯ ದಬ್ಬಾಳಿಕೆಯನ್ನ ಪ್ರತಿರೋಧಿಸಿದರು. ಗಾಂಧೀಜಿಯವರ ಧ್ಯೇಯ-ಧೋರಣೆಗಳ ಪ್ರಭಾವಕ್ಕೆ ಒಳಗಾದ ಬಹುತೇಕ ಯುವಕರು ದೇಶಿ ಚಳುವಳಿಯಲ್ಲಿ ಪಾಲ್ಗೊಂಡರು. ಇಂತಹದೊಂದು ದೊಡ್ಡ ಮಾದರಿ 'ರಕ್ತತರ್ಪಣ'ದಲ್ಲಿ ಕಂಡುಬರುತ್ತದೆ.

ಸೋಮಲಾಪುರ ಅಷ್ಟು ದೊಡ್ಡ ಊರೇನಲ್ಲ. ದೇಶದಲ್ಲಿ ನಡೆಯುತ್ತಿರುವ ಚಳುವಳಿ ಮೊದಲಾದ ಸಂಗತಿಗಳಿಗೆ ನೇರವಾಗಿ ಮೈಯೊಡ್ಡದಿದ್ದರೂ. ಚಂದ್ರಶೇಖರನ ಆಗಮನದಿಂದ

ದೇಶದ ಹೋರಾಟಗಳಿಗೆ ಸ್ವಾಗತ ನೀಡಿತು. ಗಾಯಾಳು ಚಂದ್ರಶೇಖರ ಶಾನುಭೋಗರ ಮನೆಯಲ್ಲಿ ಮೈಗೆ ಮಲಾಮು ಪಡೆಯುತ್ತಾ ದೇಹಾರೋಗ್ಯಹೊಂದುವದರೊಂದಿಗೆ ಸೋಮಲಾಪುಂದ ಅಜ್ಞಾನವನ್ನು ಬಿಡಿಸಿ ಅಲ್ಲಿನ ಯುವಕರ ಬಿಸಿರಕ್ತಕ್ಕೆ ಹೋರಾಟದ ಚಳುವಳಿಯ ದಿಕ್ಸೂಚಿ ನೀಡಿದ. ಮೊಮ್ಮಕ್ಕಳಿಲ್ಲದ ಗೌರಜ್ಜಿ ಚಂದ್ರಶೇಖರನಲ್ಲಿ ಆ ಭಾವ ಕಂಡರೆ, ಲಕ್ಷ್ಮಿಯಮ್ಮನಂತೂ ತೆರೆದ ಮನಸ್ಸಿನಿಂದ ಚಂದ್ರಶೇಖರನ ವ್ಯಕ್ತಿತ್ವಕ್ಕೆ ಮಾರು ಹೋದವರು. ಅಜ್ಜಿಗ ಬೊಮ್ಮಯ್ಯ –ಚೆನ್ನಿ ಮೊದಲಾದವರಿಗೆ ಚಂದ್ರಶೇಖರ ಒಬ್ಬ ಮಾದರಿ ವ್ಯಕ್ತಿಯಾಗಿ ಕಂಡರು.

ಈ ಕಾದಂಬರಿಯಲ್ಲಿ ಬರುವ ಬಾಪಾರೆಡ್ಡಿಯು ಕುತಂತ್ರಿಯಾಗಿ ತೋರುತ್ತಾನೆ. ಊರಿನಲ್ಲಿ ನಡೆಯುವ ಪ್ರತಿ ಘಟನೆಗಳನ್ನು ಅವಲೋಕಿಸುತ್ತಾ "ಈ ಮಕ್ಳು ಗಲಾಟೆ ಮಾಡ್ತವ್ರಂತೆ. ಉಫ್ ಅಂದ್ರೆ ಗಾಳೀಗೋಗೋರಿಗ್ಯಾಕೆ ಬೇಕೇಳು ಈ ಇಲ್ಲದ ಪಟ್ರಂಗ. ಕಳ್ಳೂಳೆ ಮಕ್ಳು, ತಿಂದು ಕೊಬ್ಬಿದೆ, ಚರ್ಮ ಸುಲ್ಸಿದ್ರೆ ಬುದ್ಧಿ ಬರ್ತದೆ. ಆರಾಡ್ಲೇಳು, ಥೂತ್!" (ತ.ರಾ.ಸು., ೨೦೦೬, ಪುಟ–೩೭.) ಎಂದು ಹೋರಾಟಗಾರರನ್ನು ಕೀಳಾಗಿ ಬೈಯುತ್ತಿರುತ್ತಾನೆ. ಇದಕ್ಕೆ ಸಾರಾಯಿ ಅಂಗಡಿ ಬಾಲಪ್ಪನೂ ಸಾಥ್ ಕೊಡುತ್ತಾನೆ. ಕಾದಂಬರಿಯುದ್ದಕ್ಕೂ ಇಬ್ಬರಿಬ್ಬರು ಅನೇಕ ಕುತಂತ್ರಗಳನ್ನು ಮಾಡುತ್ತಾ ಊರಿನಲ್ಲಿ ಯಾವುದೇ ಹೋರಾಟಗಳನ್ನು ನಡೆಯದಂತೆ ಅವರಲ್ಲಿ ಒಡಕು ಮೂಡುವಂತೆ ಮಾಡುತ್ತಾರೆ. ಆದರೆ ಇದ್ಯಾದುವಕ್ಕೂ ಅಜ್ಜಿಗ, ಬೊಮ್ಮಯ್ಯ, ಹುಸೇನ ಸಾಬಿ, ಚೆನ್ನಿ ಹೆದರದೆ ಮುನ್ನುಗ್ಗುತ್ತಾರೆ.

ಈ ಮಧ್ಯೆ ಚಂದ್ರಶೇಖರ ಊರಿನ ಯುವಕರನ್ನು ಒಂದಡೆ ಸೇರಿಸಿ ಸ್ವಾತಂತ್ರ ಹೋರಾಟದ ರೂಪುರೇಷೆಗಳ ಮನವರಿಕೆ ಮಾಡಿ ಅಹಿಂಸಾ ಮಾರ್ಗದಿಂದಲೇ ಎಲ್ಲವೂ ನಡೆಯಬೇಕೆಂಬ ಕರಾರು ಹಾಕಿದ. ಹೋರಾಟದ ಮುನ್ನುಡಿಯಾಗಿ ಬಾಪಾರೆಡ್ಡಿ ಸರಾಯಿ ಅಂಗಡಿಯ ಮುಂದೆ ಪಿಕೇಟಿಂಗ್ ಮಾಡುವುದಾಗಿ ನಿರ್ಧರಿಸಿದರು. ಇಲ್ಲಿ ನಡೆದ ಪಿಕೇಟಿಂಗ್‌ನಲ್ಲಿ ಹುಸೇನಿ ಮನಪರಿವರ್ತನೆಯಾಗಿ ಚಂದ್ರಶೇಖರನ ದೊಡ್ಡ ಅನುಯಾಯಿಯಾದುದು ಪವಾಡವೇ ಸರಿ. ಕಾಲುವೆ ಹಳ್ಳದ ಕಣಿವೆಯಲ್ಲಿ ತಲೆಮರೆಸಿಕೊಂಡು ಚಂದ್ರಶೇಖರನ ಅನುಪಸ್ಥಿತಿಯಲ್ಲಿ ಸೀತಾರಾಮಯ್ಯ ಮತ್ತು ಅಜ್ಜಿಗ ಬಂಧನಕ್ಕೊಳಗಾಗಿ ಚಿತ್ರಹಿಂಸೆ ಅನುಭವಿಸುತ್ತಾರೆ. ಸುದ್ದಿ ತಿಳಿದ ಚಂದ್ರಶೇಖರ ಸೋಮಲಾಪೂರಕ್ಕೆ ಬಂದ ದಫೇದಾರ ಬಾಲಾಜಿಸಿಂಗನ ಕ್ರೌರ್ಯ ದರ್ಶನ ಮೂಡುತ್ತದೆ. ಚೆನ್ನಿಯ ಮಾನ ಕಾಪಾಡುವುದರೊಂದಿಗೆ ಚಂದ್ರಶೇಖರ ದಫೇದಾರನ ಗುಂಡಿಗೆ ಬಲಿಯಾಗಿ ಭುವಿಗೆ ರಕ್ತ ತರ್ಪಣ ಮಾಡುತ್ತಾನೆ. ಈ ಘಟನೆಗೆ ಸೋಮಲಾಪೂರವೇ ಕಣ್ಣೀರು ಸುರಿಸುತ್ತದೆ. ಇದಾದ

ಎರಡು ವರ್ಷಗಳ ನಂತರ ಸೋಮಲಾಪೂರದಲ್ಲಿ ತ್ರಿವರ್ಣಧ್ವಜ ಹಾರಾಡುತ್ತದೆ. ಸೀತಾರಾಮಯ್ಯ –ಅಜ್ಜಿಗರು ಬಂಧ ಮುಕ್ತರಾಗುತ್ತಾರೆ. ಹೀಗೆ ಕಾದಂಬರಿ ಶಾಂತಿಯೊಂದಿಗೆ ತೆರೆ ಕಾಣುತ್ತದೆ.

ಸರಾಯಿ ಅಂಗಡಿಯನ್ನು ಬಂದುಮಾಡಲು ಹೋರಾಟಗಾರರೆಲ್ಲ ಒಂದೆಡೆ ಸೇರಿ ಪಿಕೇಟಿಂಗ್‌ನ್ನು ಆರಂಭಿಸಿದರು. ಏನಾದರೂ ಆಗಲಿ ಪಿಕೇಟಿಂಗ್ ಮಾತ್ರ ನಿಲ್ಲಕೂಡದು ಎಂದು ಚಂದ್ರಶೇಖರ ಮತ್ತು ಅಜ್ಜಿಗರು ಪಣತೊಡುತ್ತಾರೆ. ಆದರೆ ಇದನ್ನು ಮುರಿದು ಹೇಗಾದರೂ ಮಾಡಿ ಮತ್ತೆ ಸರಾಯಿ ಕುಡಿಯುವಂತೆ ಯುವಕರನ್ನು ಪ್ರೋತ್ಸಾಹಿಸುವಲ್ಲಿ ಬಾಪಾರೆಡ್ಡಿ ಅನೇಕ ಉಪಾಯಗಳನ್ನು ಮಾಡಿ ಸೋಲುತ್ತಾನೆ. ಮನೆ ಮನೆಗೆ ಹೋಗಿ ಹೆಂಡವನ್ನು ಕೊಡಲು ಬಾಲಯ್ಯ ಹೋಗುತ್ತಾನೆ. ಆಗ ಅಲ್ಲಿನ ಹೆಂಗಸರು ಎಚ್ಚೆತ್ತುಕೊಳ್ಳುತ್ತಾರೆ; "ಇನ್ನೊಂದ್ಸಲ ನಮ್ಮನೇತಾವೇನಾದ್ರು ಬಂದ್ರೆ ಕಸಬರ್ಕೇಲಿ ಒಡೆದ್ಬುಡ್ತೀನಿ ನೋಡು" (ತ.ರಾ.ಸು., ೨೦೦೬, ಪುಟ–೪೭–೪೮.) ಎಂದು ಗದರಿಸಿ ಕಳಿಸುತ್ತಾರೆ. ಹೀಗೆ ಕಾದಂಬರಿಯಲ್ಲಿ ಮಹಿಳೆಯರು ಹೋರಾಟಕ್ಕೆ ತಮ್ಮದೇ ಆದ ಬೆಂಬಲವನ್ನು ನೀಡುತ್ತಾರೆ.

ಗೌರಜ್ಜಿ, ಲಕ್ಷ್ಮೀದೇವಮ್ಮ, ಚೆನ್ನಿ, ಬಸಮ್ಮ ಎಂಬ ಸ್ತ್ರೀ ಪಾತ್ರಗಳು ಕಾದಂಬರಿಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ಚಂದ್ರಶೇಖರನನ್ನು ಪೋಲೀಸರು ಬೆನ್ನತ್ತಿದಾಗ ಅವನನ್ನು ರಕ್ಷಣೆ ಮಾಡುವಲ್ಲಿ ಇವರು ಸಫಲರಾಗುತ್ತಾರೆ. ಆದರೆ ಸೀತಾರಾಮನನ್ನು ಪೋಲೀಸರು ಹಿಡಿದ ಕೂಡಲೇ ಗೋಳಾಡುತ್ತಾರೆ. ತಮ್ಮ ಊರಿಗೆ ಪೋಲೀಸರು ಬಂದಾಗ ಊರಿನ ಹೆಣ್ಮಕ್ಕಳಿಗೆ ಎದೆ ನಡಗುತ್ತದೆ. ನಮ್ಮ ಅಣ್ಣ–ತಮ್ಮಂದಿರನ್ನು, ಗಂಡಂದಿರನ್ನು ಇವರು ಜೈಲಿಗೆ ಎಳದೊಯ್ಯಲು ಬಂದಿದ್ದಾರೆ ಎಂಬ ಸಂಶಯದಲ್ಲಿ ಮೊದಮೊದಲು ಬಾಯಿ ಬಿಡುವುದಿಲ್ಲ. "ಯಾಕ್ರಣ್ಣಾ, ನಮ್ಮುಡ್ಗ ಏನ್ತಪ್ಪು ಮಾಡವ್ನೇಂತ ಇಡ್ಕೊಂಡೋಗ್ತಿರ?" ಎಂದು ಪ್ರಶ್ನಿಸುತ್ತಾರೆ. ಮುಂದುವರೆದು "ಗಂಡಸು ಮನ್ಯಾಗಿಲ್ಲಣ್ಣ ಬರ್ಲಿ ತಡಿ" (ತ.ರಾ.ಸು., ೨೦೦೬, ಪುಟ–೬೬) ಎಂದು ಕಾನ್‌ಸ್ಟೇಬಲ್‌ನು ತನ್ನ ದರ್ಪದ ಮಾತುಗಳನ್ನು ಕೇಳಿ ಕಣ್ಣೀರು ಹಾಕ್ತಾರೆ. ಆದರೆ ತಾಯಿಯನ್ನು ಪೋಲೀಸ್ ಕಾನ್‌ಸ್ಟೇಬಲ್ ಬೈದುದನ್ನು ಅಜ್ಜಿಗ ಸರ್ಪದಂತೆ ಕೆರಳಿ "ಇಲ್ನೋಡು, ಇನ್ನೊಂದ್ಸಲ ನಮ್ಮವ್ವನ್ನೇನಾದ್ರೂ ಬೊಯ್ದೊನೋಡ್ಕೊ! ಹಿಡ್ಕೊಂಡ್ಹೋಗೋಹಾಗಿದ್ರೆ ಹಿಡ್ಕೊಂಡ್ಹೋಗು. ನಾಲ್ಗೆ ಹರೀ ಬಿಡಬ್ಯಾಡ" (ತ.ರಾ.ಸು., ೨೦೦೬, ಪುಟ–೬೬)ಎನ್ನುತ್ತಾನೆ.

ಈ ಮೇಲಿನ ಸಂಭಾಷಣೆಯಲ್ಲಿ ಪೋಲೀಸಿನವರ ದರ್ಪದ ಮಾತುಗಳು ಹೋರಾಟಕ್ಕೆ ಸ್ತ್ರೀಯರನ್ನು ಬಡಿದೇಳಿಸುತ್ತವೆ. ನಮ್ಮ ನೆಲ, ನಮ್ಮ ಜಲ, ನಮ್ಮ ಅನ್ನವನ್ನು ಕಸಿದುಕೊಂಡು, ಉಂಡು ನಮಗೇ ಕೊಂಕಿನಿಂದ ಮಾತನಾಡುತ್ತಾರಲ್ಲ ಇವನ್ನು ಮಟ್ಟಹಾಕಬೇಕೆಂದು ಕಟ್ಟೆಹಾಕಿ

ನಿಲ್ಲುವದನ್ನು ಕಾದಂಬರಿಕಾರರು ಚಿತ್ರಿಸುತ್ತಾರೆ. ಮಗ ಮತ್ತು ತಾಯಿಯ ಸಂಬಂಧದಲ್ಲಿ ಹೋರಾಟಕ್ಕೆ ಮತ್ತಷ್ಟು ಪ್ರೇರಣೆ ಪಡೆಯುತ್ತದೆ.

ಚೆನ್ನಿ, ಸೀತಾರಾಮಯ್ಯ ತಾಯಿ ಗೌರಜ್ಜಿಯರು ಕಾದಂಬರಿಯ ಕೊನೆಯವರೆಗೂ ಕಾಣಿಸುತ್ತಾರೆ. ಕೊನೆಯಲ್ಲಿ ದಫೇದಾರನು ಬೊಮ್ಮಯ್ಯನನ್ನು ಗುಂಡಿಟ್ಟು ಕೊಲ್ಲುವಾಗ ಬಸವ್ವನ ಆಕ್ರಂಧನ "ಅವ್ವಾ ಹೋದ್ನೇ" ಎಂದು ಮುಗಿಲು ಮುಟ್ಟುತ್ತದೆ. ಚಂದ್ರಶೇಖರನು "ಅದೆಷ್ಟು ಜನಾನ್ನ ಕೊಲ್ಬೇಕೂಂತಿದೀರೋ ಕೊಂದ್ಬುಡಿ" (ತ.ರಾ.ಸು., ೨೦೦೬, ಪುಟ-೧೧೦.) ಎಂದು ಗುಂಡಿಗೆ ಎದೆಗೊಟ್ಟು ನೆಲಕ್ಕೆ ಉರುಳಿಬಿದ್ದ. ತನ್ನ ಅರೆಗಣ್ಣಿನಲ್ಲಿಯೇ ಗೌರಜ್ಜಿಯನ್ನು ನೋಡಬೇಕೆಂದು ಹಂಬಲಿಸುತ್ತಾನೆ. ಅವಳು ಬಂದಾಗ "ಅಜ್ಜೀ.... ದಂದ್ಯಾ, ಲಕ್ಷಕ್ಕ ಎಲ್ಲಿ?" ಚೆನ್ನಕ್ಕ ಎಲ್ಲಿ? ಎನ್ನುತ್ತಾ "ನಾನು ಹೋಗ್ತೀನಿ, ಮರೀಬ್ಯಾಡ. ತಂಗೀ...." (ತ.ರಾ.ಸು., ೨೦೦೬, ಪುಟ-೧೧೧.) ಎಂದು ಪ್ರಜ್ಞೆ ತಪ್ಪಿ ಬೀಳುತ್ತಾನೆ. ಈ ದೃಶ್ಯವನ್ನು ಕಂಡು ಊರಿಗೆ ಊರೇ ಅಳುತ್ತದೆ. ಚಂದ್ರಶೇಖರ ಕನವರಿಕೆಯಲ್ಲಿಯೂ "ಯುದ್ಧ... ಮರೀಬ್ಯಾಡ್ರಿ.... ಸ್ವಾತಂತ್ರ್ಯ.... ಭಾರತಮಾತೆ.... ಗಾಂಧೀಜೀ....." (ತ.ರಾ.ಸು., ೨೦೦೬, ಪುಟ-೧೧೧.) ಎನ್ನುತ್ತಾ ರಕ್ತದ ಮಡುವಿನಲ್ಲಿ ಮರೆಯಾಗುತ್ತಾನೆ. "ಮೂಡಲಿಲ್ಲ ಸೂರ್ಯ ರಕ್ತರಥದಲ್ಲಿ ಕುಳಿತು ಬಂದ" ಎಂದು ಲೇಖಕರು ವಿಷಾದಿಸುತ್ತಾರೆ.

ಇಲ್ಲಿ ಚಂದ್ರಶೇಖರ ಕಾದಂಬರಿಯ ಮುಖ್ಯ ಪಾತ್ರ. ಅವನು ಹೋರಾಡಿ ಮಡಿಯುವಾಗ ಗೌರಜ್ಜಿ, ಚಿನ್ನಕ್ಕ, ಲಕ್ಷ್ಮಕ್ಕ ಎಂದು ಕರೆದು ಅವರನ್ನು ನೋಡುವ ಹಂಬಲ ವ್ಯಕ್ತಪಡಿಸುತ್ತಾನೆ; ಅಂದರೆ ಅವರು ಈ ಹೋರಾಟದಲ್ಲಿ ಎಷ್ಟೊಂದು ಮಹತ್ವದ ಕೆಲಸವನ್ನು ನಿಭಾಯಿಸಿದ್ದಾರೆ ಎಂದು ಸ್ಪಷ್ಟವಾಗುತ್ತದೆ. ಹೋರಾಟದಲ್ಲಿ ಅಸುನೀಗುವಾಗ ಅವನ ಕಣ್ಣಿಗೆ ಸ್ವಾತಂತ್ರ್ಯವನ್ನು, ಭಾರತಮಾತೆಯನ್ನು ಕಂಡಷ್ಟೇ ಸಂತೋಷ ವ್ಯಕ್ತವಾಗುತ್ತದೆ. ಹೋರಾಟವನ್ನು ನಿಲ್ಲಿಸಬೇಡಿ ಎಂದು ಅವರಲ್ಲಿ ಕೇಳಿಕೊಳ್ಳುವ ಚಂದ್ರಶೇಖರ ಕಣ್ಣಲ್ಲಿ ಭವ್ಯ ಭಾರತದ ಭವಿಷ್ಯವು ಮಹಿಳೆಯರಿಂದ ಉಜ್ವಲಗೊಳ್ಳಲಿ ಎಂಬ ಆಶಯವು ಎದ್ದು ಕಾಣುತ್ತದೆ.

ಕಾದಂಬರಿಯಲ್ಲಿ ಹೋರಾಟದ ಆರಂಭವು ಪಟ್ಟಣಕ್ಕೆ ಹೋಗಿ ಬಂದ ಅಜ್ಜಿಗನಿಂದ ಶುರುವಾಗುತ್ತದೆ. ಅಲ್ಲಿನ ಹೆಂಡದಂಗಡಿಯ ಮುಂದೆ ಪಿಕೆಟಿಂಗ್‌ನಡೆಸಿದ ಯುವಕರ ಮೇಲೆ ಪೋಲೀಸರ ದರ್ಪ, ದೌರ್ಜನ್ಯಗಳು ಒಬ್ಬನ ಸಾವಿಗೆ ಕಾರಣವಾಗುತ್ತವೆ. ಸಾವಿಗೀಡಾದ ಯುವಕ ಚಂದ್ರಶೇಖರನ ಸ್ನೇಹಿತನಾಗಿರುತ್ತಾನೆ. ಅವನಿಗೆ ಸಹಾಯ ಮಾಡುವುದು ಬಿಟ್ಟು ಓಡಿ ಬಂದು ನನಗೆ ಸುದ್ದಿ ಹೇಳುತ್ತಿರುವೆಯಾ ಎಂದು ಅಜ್ಜಿಗನ ಮೇಲೆ ಸಿಡಿಮಿಡಿಗೊಂಡು ಪಟ್ಟಣಕ್ಕೆ ಹೋಗಲು ಸಿದ್ಧನಾಗುತ್ತಾನೆ. ಅಜ್ಜಿಗನಿಗೆ ಹೋರಾಟದ ಛಲ ಮೂಡಿ ತನ್ನ ಊರಿನ ಹತ್ತಾರು

ಯುವಕರನ್ನು ಸೇರಿಸಿ ಪೋಲೀಸರ ವಿರುದ್ಧ ಹೋರಾಡಲು ಪ್ರತಿಜ್ಞೆಯನ್ನು ಮಾಡುತ್ತಾನೆ. ಈ ಯುವ ಪಡೆಯನ್ನು ಹತ್ತಿಕ್ಕಲು ಸರಾಯಿ ಅಂಗಡಿಯ ಮಾಲಿಕ ಬಾಪುರೆಡ್ಡಿ ಅನೇಕ ತಂತ್ರ, ಕುತಂತ್ರ ಮಾಡುತ್ತಾನೆ. ಅದರಲ್ಲಿ ವಿಫಲವಾಗುತ್ತಾನೆ. ಏಕೆಂದರೆ ಸೋಮಲಾಪುರದ ಯುವಕರಲ್ಲಿನ ಒಗ್ಗಟ್ಟು ಮತ್ತು ಹೋರಾಟದ ಛಲ ಇಲ್ಲಿ ವ್ಯಕ್ತವಾಗಿದೆ.

೧೯೪೨ರ ಚಳುವಳಿಯು ಭಾರತದ ಇತಿಹಾಸದಲ್ಲಿ ಜನತಾ ಆಂದೋಲನವನ್ನೇ ಹುಟ್ಟುಹಾಕಿತ್ತು. ಇದರ ಪ್ರಭಾವವು ಕಾದಂಬರಿಯ ಮೇಲೆ ಕಾಣಿಸುತ್ತದೆ. ಬ್ರಿಟಿಷರ ವಿರುದ್ಧ ಹೋರಾಡಿ ಅವರನ್ನು ಭಾರತದಿಂದ ಹೊರಹಾಕಿ ದೇಶವನ್ನು ಮುಕ್ತಗೊಳಿಸಬೇಕು ಎಂಬ ಛಲವುಳ್ಳ ಯುವಕನು ತಾನು ಸ್ವತಂತ್ರ ನಾಯಕನಾಗಿ ಜವಾಬ್ದಾರಿ ಮತ್ತು ಹೊಣೆಗಾರಿಕೆಯಿಂದ ನಡೆದುಕೊಳ್ಳಲು ಪ್ರಯತ್ನಿಸುತ್ತಾನೆ. ಸ್ವಾತಂತ್ರ್ಯ ಪರಿಕಲ್ಪನೆ ಭಾರತಿಯರಲ್ಲಿ ಆರಂಭವಾದುದೇ ಸ್ವಾಭಿಮಾನದಿಂದ. ಸ್ವಾಭಿಮಾನ ಮತ್ತು ದೇಶಪ್ರೇಮ ಎರಡೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಬ್ರಿಟಿಷರು ವ್ಯಾಪಾರಿಗಳಾಗಿ ಭಾರತಕ್ಕೆ ಕಾಲಿಟ್ಟ ನಂತರ ಅವರ ವ್ಯವಹಾರಿಕ ಬುದ್ಧಿಯು ಭಾರತೀಯರ ಸಾಮಾಜಿಕ, ಸಾಂಸ್ಕೃತಿಕ ಜೀವನದ ಮೇಲೆ ಪ್ರಭಾವವನ್ನು ಬೀರತೊಡಗಿತು. ಬ್ರಿಟೀಷರು ಕಾಲಕ್ರಮೇಣ ದೇಶದ ಚುಕ್ಕಾಣಿ ಹಿಡಿದು, ದೇಶದ ಆಳರಸರನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಪ್ರಯತ್ನಿಸಿದರು. ಇದರ ಪರಿವೇ ಇಲ್ಲದೇ ಇಲ್ಲಿನ ಆಳರಸರು ವರ್ತಿಸಿದರು.

ಗಾಂಧೀಜಿಯವರ ಪ್ರೇರಣೆ–ಪ್ರಭಾವಗಳಿಗೆ ಒಳಗಾದ ಜನರು ದೇಶೀಯ ಚಿಂತನೆಗಳನ್ನು ನಡೆಸಲು ಆರಂಭಿಸಿದರು. ನಮ್ಮ ದೇಶ, ನಮ್ಮ ನೆಲ, ನಮ್ಮ ಬೆಳೆ ಎಲ್ಲವೂ ನಮ್ಮವೇ ಆಗಿರುವಾಗ ಅದರ ಒಡೆತನ ಮಾತ್ರ ಅವರಿಗೇಕೆ? ನಾವೇ ನಮ್ಮನ್ನು ಆಳಿಕೊಳ್ಳಬಾರದೇಕೆ? ಎಂಬಿತ್ಯಾದಿ ಪ್ರಶ್ನೆಗಳಿಗೆ ಹುಡುಕಾಟ ನಡೆಸಿದರು. ಚಂದ್ರಶೇಖರ ಇಂಥ ಹೋರಾಟಗಳಲ್ಲಿ ಪಾಲ್ಗೊಂಡು ಪೊಲೀಸರ ಲಾಠಿ–ಏಟಿಗೆ ತಲೆಕೊಟ್ಟು ಸಿಕ್ಕಿಕೊಳ್ಳುತ್ತಾನೆ. ಸ್ವಾತಂತ್ರ್ಯ ಹೋರಾಟಗಾರರು ತಲೆ ಮರೆಸಿಕೊಂಡರೂ ಸುಮ್ಮನಿರುವವರಲ್ಲ. ಮುಂದಿನ ಹೋರಾಟದ ನೀಲನಕ್ಷೆ ತಯಾರಿಸಿಕೊಳ್ಳುತ್ತಾರೆ. ಇಲ್ಲಿಯ ಚಿತ್ರಣವನ್ನು ಗಮನಿಸಿದರೆ ಲೇಖಕರು 'ರಕ್ತತರ್ಪಣ' ಕಾದಂಬರಿಯ ಮುನ್ನುಡಿಯಲ್ಲಿ "ಆಗಸ್ಟ್ ಕ್ರಾಂತಿಯ ಚಿತ್ರ ನನಗೆ ಕಂಡಿದ್ದು ಆ ರೀತಿ. ಅದರಲ್ಲಿ ನೇರವಾಗಿ ಭಾಗವಹಿಸಿದ ನನಗೆ ಕ್ರಾಂತಿಯ ಆದರ್ಶ ಕಂಡಿದ್ದು ಆ ರೀತಿ" ಎಂದು ಶೀರ್ಷಿಕೆಯ ಕುರಿತು ಹೇಳಿದ್ದು ಗಮನಿಸಿದರೆ ಲೇಖಕರೇ ಚಂದ್ರಶೇಖರನ ಪಾತ್ರ ನಿಭಾಯಿಸಿದಂತೆ ತೋರುತ್ತದೆ.

ಪ್ರಸ್ತುತ ಕಾದಂಬರಿಯಲ್ಲಿ ಹೋರಾಟಗಾರರಲ್ಲಿಯೇ ಎರಡು ಗುಂಪುಗಳು ಕಾಣಸಿಗುತ್ತವೆ. ಒಂದು ಸೌಮ್ಯಮಾರ್ಗದಲ್ಲಿರುವ ಹಿರಿಯರು ಮತ್ತು ಅದನ್ನು ವಿರೋಧಿಸುವ ಕಿರಿಯರ ಗುಂಪು. ಅಜ್ಜಿಗನ ಹರಿದ ಮುಖವು ಯುವಕರಲ್ಲಿ ರೋಷಾವೇಶವನ್ನು ಉಕ್ಕಿಸುತ್ತದೆ. ಅದಕ್ಕಾಗಿ ಬಾಪಾರೆಡ್ಡಿಯನ್ನು ಬೆಂಕಿಹಾಕಿ ಸುಡಬೇಕೆಂದು ತಮ್ಮದೇ ಆದ ಸಭೆಯೊಂದನ್ನು ನಡೆಸಿ "ಅವನ ತಲೇನ ಒಡೆಯಬೇಕು, ನಮ್ಮ ಪ್ರಾಣ ಹೋದ್ರೂ ಹೋಗಲಿ ಅವನ್ನ ಉಳಿಸಬಾರದು" (ತ.ರಾ.ಸು., ೨೦೦೬, ಪುಟ-೮೬.) ಎಂದು ಒಬ್ಬನೆಂದರೆ ಮತ್ತೊಬ್ಬ "ಅವನ ಮನೇಗೆ ಬೆಂಕಿ ಹಚ್ಚಿ ಅದರಲ್ಲೇ ಅವನನ್ನು ಸುಟ್ಟುಬಿಡಬೇಕು" (ತ.ರಾ.ಸು., ೨೦೦೬, ಪುಟ-೮೬.) ಎನ್ನುತ್ತಾನೆ. ಇವರ ಮಾತುಗಳಲ್ಲಿ ಹೋರಾಟದ ಕಿಚ್ಚು ಎಷ್ಟರ ಮಟ್ಟಿಗೆ ಉತ್ತುಂಗಕ್ಕೇರಿತ್ತು ಎಂದು ತಿಳಿಯಬಹುದು. ಅದು ಹುಸೇನ ಸಾಬಿಯು ಹೇಳುವಂತೆ "ನಿಮ್ಮ ಮಾತುಗೀತು ನನಗೆ ಆಗೋಕಿಲ್ಲ. ಮಾತಾಡೋದೆಲ್ಲ ಔರತ್, ಗಂಡಸ್ತು ಜರೂತ್ನಿಂದ ಕೆಲ್ಸ ಮಾಡ್ಬೇಕು. ನೀವು ಕಣಿ ಕೇಳೋದಿದ್ರೆ ಓಗಿ, ನಾನೊಬ್ನೇ ಆ ಕೆಲಸ ಖತಂ ಮಾಡ್ತೀನಿ" (ತ.ರಾ.ಸು., ೨೦೦೬, ಪುಟ-೮೬.) ಎಂದು ತನ್ನ ಕೆಚ್ಚನ್ನು ವ್ಯಕ್ತಪಡಿಸುತ್ತಾನೆ. ಇಲ್ಲಿ ಕಾದಂಬರಿಕಾರ ಸ್ವಾತಂತ್ರ್ಯದ ತುಡಿತವು ಸೋಮಲಾಪುರದ ಯುವಕರಲ್ಲಿ ಹೇಗೆ ಹುದುಗಿಕೊಂಡಿದೆ ಎಂದು ಈ ಮಾತುಗಳ ಮೂಲಕ ವಿಸ್ತರಿಸುತ್ತಾರೆ.

ಜನರನ್ನು ಹುರಿದುಬಿಸುವ ಒಂದೆರಡು ಮಾತುಗಳು ಮಸೆದ ಮಚ್ಚಿನಂತೆ ಕಾಣುತ್ತಿದ್ದವು. ಬಾರ್ಡೋಲಿ, ಸಿರಸಿ, ಸಿದ್ದಾಪೂರದಂಥ ಸತ್ಯಾಗ್ರಹಗಳಲ್ಲಿ, ಜಲಿಯನ್ ವಾಲಾಬಾಗಾ ಹತ್ಯಾಕಾಂಡ, ಅಮೃತಸರದ ಹೋರಾಟ, ಭಗತ್‌ಸಿಂಗ್, ರಾಜಗುರು ಸುಖದೇವ್, ಸೊಲ್ಲಾಪೂರ ಧನಶೆಟ್ಟಿ, ಮಲ್ಲಪ್ಪ ಮೊದಲಾದವರನ್ನು ಗಲ್ಲಿಗೇರಿಸುವ ಪ್ರಸಂಗಗಳನ್ನು ಹೇಳುವಾಗ ಹೋರಾಟಗಾರರ ಕಣ್ಣೀರು ಉಕ್ಕುತ್ತಿದ್ದವು. ಹೀಗೆ ನೆಲಕ್ಕೆ ಬಿದ್ದ ಕಣ್ಣೀರು ಭೂಮಿಯನ್ನು ಹದಗೊಳಿಸುತ್ತಿತ್ತು. ಹದಗೊಂಡ ಭೂಮಿಗೆ ಚಂದ್ರಶೇಖರ ಸ್ವಾಭಿಮಾನದ ಬೀಜ ಬಿತ್ತಿದ. ಆ ಬೀಜ ಹುಸಿಯಾಗಲಿಲ್ಲ. ಮೊಳಕೆಯೊಡೆದು ಹೆಮ್ಮರದಂತೆ ಬೆಳೆಯತೊಡಗಿತು. ಅದರಲ್ಲಿ ದೇಶ ಪ್ರೇಮ ಕುದಿಯುತ್ತಿತ್ತು. ಆ ಕರುಳಿನ ಕುದಿಗೆ ಬಾಣ ನೆಟ್ಟ ಸೋಮಲಾಪೂರದ ಬಾಪಾರೆಡ್ಡಿಯ ಸರಾಯಿ ಅಂಗಡಿಗೆ ಬೀಗ ಜಡಿದರಷ್ಟೇ ಅಲ್ಲ. ಸರಾಯಿ ಪಾಕೆಟ್‌ಗಳಿಗೆ ಬೆಂಕಿ ಹಚ್ಚಿ ಸರಾಯಿ ಮುಕ್ತ ಗ್ರಾಮ ಮಾಡಲು ಮುನ್ನಡೆದರು. ಸ್ವಾಭಿಮಾನಕ್ಕಾಗಿಯೇ ಶಾನುಭೋಗರು ಮತ್ತು ಅಜ್ಜುಗ ಬಂಧನಕ್ಕೆ ಒಳಗಾಗಿಯೇ ಚಿತ್ರ ಹಿಂಸೆ ಪಡೆದರು. ಅಜ್ಜಿಗನ ಮೈ ಮೇಲೆ ರಕ್ತ ಜಿನುಗುತ್ತಿದ್ದರೂ ತನ್ನ ಸ್ವಾಭಿಮಾನವನ್ನು ಬಿಟ್ಟು ಕೊಡಲಿಲ್ಲ.

## ಶಿವರಾಮ ಕಾರಂತರ ಅವರ ಸ್ವಾತಂತ್ರ್ಯ ಪೂರ್ವದ ಕಾದಂಬರಿಗಳಲ್ಲಿನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು

"ಶಿವರಾಮ ಕಾರಂತರು ಸಹಜವಾಗಿ ಪ್ರಗತಿಶೀಲ ಸಾಹಿತ್ಯ ಚಳುವಳಿಯಲ್ಲಿ ಗುರುತಿಸಿಕೊಂಡರೂ ಅನಕೃ ಅವರ ದ್ವಂದ್ವ ಮನಸ್ಥಿತಿಯನ್ನು ಕಂಡು ಹೊರನಡೆದರು." (ಕನ್ನಡದಲ್ಲಿ ಪ್ರಗತಿಶೀಲ ಚಳವಳಿ, ಪುಟ–೬೩) ಆದರೂ ಕಾರಂತರು ಪ್ರಗತಿಶೀಲ ಚಳವಳಿಯ ಕಾವಿನಲ್ಲಿ ಅನೇಕ ಕಾದಂಬರಿಗಳನ್ನು ಬರೆದರು. "ಕನ್ನಡದ ಮಹತ್ವದ ಮತ್ತು ಶ್ರೇಷ್ಠ ವಾಸ್ತವವಾದೀ ಕಾದಂಬರಿಕಾರರು. ವೈಜ್ಞಾನಿಕ ದೃಷ್ಟಿ, ವಸ್ತುನಿಷ್ಠತೆ, ಚಿಕಿತ್ಸಕ ಪ್ರವೃತ್ತಿ, ಮಾನವತಾವಾದಿ ಇವು ಅವರ ವಾಸ್ತವವಾದದ ಮುಖ್ಯಾಂಶಗಳಾಗಿವೆ." (ಸುರೇಶ ಪಾಟೀಲ, ೨೦೦೮, ಪುಟ–೯೦.) ಪ್ರಸ್ತುತ ೧೯೪೭ರಲ್ಲಿ ಪ್ರಕಟವಾದ ಅವರ 'ಔದಾರ್ಯದ ಉರುಳಲ್ಲಿ' ಕಾದಂಬರಿಯು ಸ್ವಾತಂತ್ರ್ಯ ಪೂರ್ವದ ಹೋರಾಟದ ಪ್ರಭಾವವುಳ್ಳ ಕಾದಂಬರಿಗಳಲ್ಲಿ ಪ್ರಮುಖವಾದುದು. ರಾಷ್ಟ್ರೀಯವಾದದ ತುಮುಲುಗಳನ್ನುಳ್ಳ ಭಿನ್ನವೂ, ವಿಶಿಷ್ಟವೂ ಆದ ಕಾದಂಬರಿಯೆನಿಸಿಕೊಂಡಿದೆ. ನಿಜವಾದ ಬುದ್ಧಿವಾದ ಹಾಗೂ ಹೃದಯವಂತಿಕೆಗಳ ಸಂಯೋಗದಿಂದ ಮನುಷ್ಯನ ಹಲವಾರು ದುಃಖಗಳನ್ನು ಸಹಜವಾಗಿ ತೊಡೆದು ಹಾಕಬಹುದೆಂಬ ಶ್ರದ್ಧೆ ಕಾರಂತರಲ್ಲಿ ಕಾಣುತ್ತದೆ. ಗಾಂಧೀಜಿಯವರ ಸತ್ಯಾನ್ವೇಷಣೆ, ಸತ್ಯಾಗ್ರಹಗಳ ಪ್ರಭಾವವು ಅವರನ್ನು ಬೆಂಬಿಡದೇ ಕಾಡಿದೆ. ಗಾಂಧೀ ಯುಗದ ಆದರ್ಶಪ್ರಿಯತೆಯನ್ನು ಅವರು ಮೈಗೂಡಿಸಿಕೊಂಡಿದ್ದರು. ಅನೇಕ ದೃಷ್ಟಿಯಿಂದ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಛಾಪು ಮೂಡಿಸಿದ 'ಔದಾರ್ಯದ ಉರುಳಲ್ಲಿ' ಕಾದಂಬರಿಯಲ್ಲಿನ ಸ್ವಾತಂತ್ರ್ಯ ಹೋರಾಟದ ಚಹರೆಗಳೊಂದಿಗೆ ಅಂದಿನ ಭಾರತದ ಸಾಮಾಜಿಕ, ಸಾಂಸ್ಕೃತಿಕ ಮನೋಧೋರಣೆಗಳನ್ನು ಸಹ ಕಾಣಬಹದು.

"ತಮ್ಮ ಪ್ರಖರವಾದ ಚಿಂತನೆಗಳಿಂದ, ದೃಷ್ಟಾಂತದ ಮುನ್ನೋಟಗಳಿಂದ ಶಿವರಾಮ ಕಾರಂತರು ತಮ್ಮ ಅನೇಕ ಕೃತಿಗಳಲ್ಲಿ ತಾವು ಬರೆದಿದ್ದ ಕಾಲಕ್ಕಿಂತ ಎಷ್ಟೋ, ಎಷ್ಟೋ ದಶಕಗಳ ತನಕವೂ ಮುಂದಿದ್ದರು. ಎಂಬ ಸತ್ಯವನ್ನು ಗ್ರಹಿಸಲು ನಮಗೆ ಸಾಧ್ಯವಾದಲ್ಲಿ ಕಾರಂತರ ಕೃತಿಗಳ ಬಗ್ಗೆ ಪ್ರಸ್ತುತ ಮತ್ತು ಅಪ್ರಸ್ತುತ ಎಂಬ ವಾದ ಮಂಡಿಸುವುದು ಅರ್ಥಹೀನ ಎಂಬುದರ ಮನವರಿಕೆ ನಮಗಾಗುತ್ತದೆ" (ಶಿವರಾಮ ಕಾರಂತ, ೨೦೦೮, ಮುನ್ನುಡಿ ಪುಟ–೭.) ಎಂದು ಬಿ. ಮಾಲಿನಿ ಮಲ್ಯ ಅವರು ಕಾದಂಬರಿಯ ಮುನ್ನುಡಿಯಲ್ಲಿ ಹೇಳುತ್ತಾರೆ. ಮುಂದುವರೆದು ನಮ್ಮ ಸಾರ್ವಜನಿಕ ಬದುಕಿನಲ್ಲಿ ಇಂದು ವ್ಯಾಪಕವಾಗಿ ಹಬ್ಬಿರುವ ಕೊಳಚೆ, ನೀತಿಬಾಹಿರ ಮತ್ತು ಸ್ವಾರ್ಥಪರ ಚಟುವಟಿಕೆಗಳನ್ನು ಸ್ವಾತಂತ್ರ್ಯ ಪೂರ್ವದಲ್ಲಿ ಬರೆದಿರುವ ಔದಾರ್ಯದ ಉರುಳಲ್ಲಿ ಚಿತ್ರಿಸಿದ್ದ ಕಾರಂತರು ಸ್ವಾತಂತ್ರ್ಯ ದೊರೆತ ಬಳಿಕ ಐದು ದಶಕಗಳತನಕ ಬದುಕಿದ್ದರೂ.

ಜನಜೀವನದಲ್ಲಿ ವ್ಯಾಪಕವಾಗಿ ಹಬ್ಬಿಕೊಳ್ಳುತ್ತಲೇ ಸಾಗಿದೆ" (ಶಿವರಾಮ ಕಾರಂತ, ೨೦೦೮, ಮುನ್ನುಡಿ ಪುಟ-೮.) ಎನ್ನುತ್ತಾರೆ.

ಸ್ವತಃ ಕಾರಂತರೆ "ನಾನು ೧೯೨೧ರ ಸುಮಾರಿಗೆ ಅಸಹಕಾರ ಚಳುವಳಿಗೆ ಧುಮುಕಿ, ಸ್ವಾತಂತ್ರ್ಯ ಉದಯದ ತನಕ ಸಾಗಿದ ನನ್ನ ಸ್ವಂತ ಬದುಕಿನ ಮತ್ತು ಅದನ್ನು ಸುತ್ತುವರಿದ ಸಾಮಾಜಿ ವ್ಯಕ್ತಿ, ಸಂಸ್ಥೆ, ರೀತಿ-ನೀತಿಗಳ ಅನುಭವದ ಪ್ರತೀಕ ಇದು" (ಸುರೇಶ ಪಾಟೀಲ, ೨೦೦೮, ಪುಟ-೮೮.) ಎನ್ನುತ್ತಾರೆ.

ಈ ಕಾದಂಬರಿಯು ೧೯೨೧ ರಿಂದ ಅಸಹಕಾರ, ೧೯೩೦ರ ಉಪ್ಪಿನ ಸತ್ಯಾಗ್ರಹ ಮತ್ತು ೧೯೪೨ರ 'ಚಲೇಜಾವ್' ಚಳುವಳಿ ಹೀಗೆ ಮೂರು ಮುಖ್ಯ ಚಳುವಳಿಗಳ ಸುತ್ತ ರಚಿತವಾಗಿದೆ. ಎಂದರೆ ೧೯೨೧ ರಿಂದ ಆರಂಭಿಸಿ ಮುಂದಿನ ೨೫ ವರ್ಷಗಳ ಕಾಲವ್ಯಾಪ್ತಿ ಇದರದು. ಮತ್ತು ಇದರ ಕಾರ್ಯಕ್ಷೇತ್ರ ಮುಖ್ಯವಾಗಿ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗಳು. ಸ್ವಲ್ಪಮಟ್ಟಿಗೆ ಮುಂಬಯಿ ಸ್ವಾತಂತ್ರ್ಯ ಚಳುವಳಿಯ ಚಿತ್ರಣದ ಜೊತೆಗೇ ಈ ಎರಡು ಜಿಲ್ಲೆಗಳ ಜನಜೀವನ, ಸಾಮಾಜಿಕ, ರಾಜಕೀಯ ಸ್ಥಿತಿಗತಿಗಳ ಬೆಳವಣಿಗೆ ಈ ಅಂಶಗಳ ನಿರೂಪಣೆಯನ್ನು ಕಾದಂಬರಿಯಲ್ಲಿ ನೋಡುತ್ತೇವೆ. (ಸುರೇಶ ಪಾಟೀಲ, ೨೦೦೮, ಪುಟ-೮೮.) ಶಿವರಾಮ ಕಾರಂತರ ಇನ್ನಿತರ ಕಾದಂಬರಿಗಳಿಗಿಂತ ಇದು ೨೩ ಅಧ್ಯಾಯಗಳನ್ನೊಳಗೊಂಡ ೪೬೬ ಪುಟಗಳ ಬೃಹತ್ ಸ್ವಾತಂತ್ರ್ಯ ಪೂರ್ವದ ಸ್ವಾತಂತ್ರ್ಯ ಚಳುವಳಿಯ ಏಕೈಕ ಕಾದಂಬರಿಯಾಗಿದೆ.

**ಔದಾರ್ಯದ ಉರುಳಲ್ಲಿ (೧೯೪೭)**

ಕಾದಂಬರಿಯಲ್ಲಿ ಬರುವ ಪ್ರಮುಖ ಪಾತ್ರಗಳಾದ ರಾಧಾಕೃಷ್ಣ ಮತ್ತು ಅವನ ಹೆಂಡತಿ ಸತ್ಯಭಾಮೆ ಇಬ್ಬರೂ ಗಾಂಧೀಜಿಯವರ ಸತ್ಯ, ಅಹಿಂಸೆ, ಸತ್ಯಾಗ್ರಹ, ಚಳುವಳಿ, ಹೋರಾಟದ ದಾರಿಯನ್ನು ಅನುಸರಿಸಿದ್ದಾರೆ. ಗಾಂಧೀಜಿಯವರ ಉಪನ್ಯಾಸಗಳು, ಹೇಳಿಕೆಗಳು, ಘೋಷಣೆಗಳು ಇವರಿಗೆ ಮುಖ್ಯವೆನಿಸುತ್ತವೆ. ಗಾಂಧೀಜಿ ನುಡಿದಂತೆ ಬದುಕಿದರು. ಅವರು ಬದುಕಿದಂತೆ ರಾಧಾಕೃಷ್ಣ ಮತ್ತು ಸತ್ಯಭಾಮೆ ದಂಪತಿಗಳು ಅನುಸರಿಸಿದರು ಎಂಬುದನ್ನು ಈ ಕಾದಂಬರಿಯಲ್ಲಿ ಚಿತ್ರಿಸಲಾಗಿದೆ.

೧೯೨೧ರ ಚಳುವಳಿಯಲ್ಲಿ ಗಾಂಧೀಜಿಯ ಕರೆಯ ಮೇರೆಗೆ ಚಳುವಳಿಯಲ್ಲಿ ಉತ್ಸಾಹದಿಂದ ಧುಮುಕಿದ ಆದರ್ಶವಾದಿ ನಿಸ್ವಾರ್ಥಿ ಯುವಕ ರಾಧಾಕೃಷ್ಣ ಕಾಲೇಜನ್ನು ಅರ್ಧಕ್ಕೆ ನಿಲ್ಲಿಸುತ್ತಾನೆ ರಾಷ್ಟ್ರಸೇವೆಗೆ ತನ್ನ ತಂದೆಯನ್ನು ಎದುರು ಹಾಕಿಕೊಳ್ಳುತ್ತಾನೆ. ಆಗಬೇಕೆಂದುಕೊಂಡಿದ್ದ ಮದುವೆಯನ್ನು ತಿರಸ್ಕರಿಸುತ್ತಾನೆ ಎನ್ನುವದಕ್ಕಿಂತ "ನಿಮ್ಮ ಹುಡುಗ

ಶಾಲೆ ಬಿಟ್ಟಿದ್ದಾನೆ. ಅವನು ಉಂಡಾಡಿಯಂತೆ ಗಾಂಧೀ ಲೆಕ್ಚರು ಕೊಟ್ಟು ಜೈಲಿಗೆ ಹೋಗುವ ಗತಿ ಬಂದರೆ" (ಶಿವರಾಮ ಕಾರಂತ, ೨೦೦೮, ಮುನ್ನುಡಿ ಪುಟ-೪.) ಎಂದು ಹೆಣ್ಣಿನ ಅಪ್ಪ ಇವನನ್ನು ತಿರಸ್ಕರಿಸುತ್ತಾನೆ. ಇದಾವುದಕ್ಕೂ ಬಗ್ಗದೇ ತನ್ನ ಅಚಲ ಹೋರಾಟಕ್ಕಾಗಿ ಮನೆಮನೆಗೆ ತೆರಳಿ ಗಾಂಧೀಜಿಯವರ ಆದರ್ಶಗಳನ್ನು, ರಾಷ್ಟ್ರಪ್ರಜ್ಞೆಯನ್ನು ಬಿತ್ತುತ್ತಾನೆ. ಜನರು ಇವನ ಸ್ವರಾಜ್ಯಗಳ ಮಾತುಗಳನ್ನು ಆಲಿಸುತ್ತಾರೆ. ಆದರೆ ಬೇಗನೆ ಅತ್ತ ಎಚ್ಚೆತ್ತುಕೊಳ್ಳುವುದಿಲ್ಲ. "ಹಾ! ಗಾಂಧೀ ಸಂಬಳ ಕೊಡುವವನೇ? ಇವರಿಂದಲೇ ಫಂಡು ಕೂಡಿಸಿ ಅವನು ತರಿಸಿಕೊಳ್ಳುವಾಗ! ನನಗೆ ಯಾವುದೂ ತಿಳಿಯುವುದಿಲ್ಲ. ಇವರ ಸ್ವರಾಜ್ಯವೂ ಆಯಿತು, ಇವನೂ ಆಯಿತು. ನಮ್ಮ ಕಾಲ ಹೀಗೆಯೇ ಹೋದರೆ ಸಾಕು. ಆ ಸ್ವರಾಜ್ಯವೊಂದು ಇಲ್ಲದೆ ನಮಗೇನು ಕಡಿಮೆಯಾಗಿದೆಯೆಂದು ಬೇಡವೆ? ಇಷ್ಟೆಲ್ಲ ಸರ್ಕಾರದ ಬಿಗು ಇರುವಾಗಲೇ ಒಬ್ಬರಿಗೆ ಇನ್ನೊಬ್ಬರನ್ನು ನೋಡಿದರೆ ಆಗುವುದಿಲ್ಲ. ಇನ್ನು ಸ್ವರಾಜ್ಯ ಬಂದರೆ ಒಬ್ಬರು ಇನ್ನೊಬ್ಬರನ್ನು ಹಿಡಿದು ನುಂಗಿಯೇ ಬಿಡುತ್ತಾರೆ" (ಶಿವರಾಮ ಕಾರಂತ, ೨೦೦೮, ಮುನ್ನುಡಿ ಪುಟ-೫.) ಎಂಬಂಥ ಮಾತುಗಳನ್ನು ರಾಧಾಕೃಷ್ಣ ಆರಂಭದಲ್ಲೇ ಎದುರಿಸಬೇಕಾಗುತ್ತದೆ.

"ರಾಧಾಕೃಷ್ಣನೊಂದಿಗೆ ಮೊದಲು ಚಳುವಳಿಯ ಕಾರ್ಯರಂಗಕ್ಕಿಳಿದವರೆಂದರೆ ಸದಾನಂದ ಮತ್ತು ಸುಖರಾಮ. ಆದರೆ ಅವರಿಗೆ ಆರಂಭದಲ್ಲಿದ್ದ ಉತ್ಸಾಹ ಮೂರು ತಿಂಗಳಲ್ಲಿ ಕರಗಿಹೋಗಿ ರಾಧಾಕೃಷ್ಣನಿಗೆ ಕೈಕೊಟ್ಟು ಓದನ್ನು ಮುಂದುವರೆಸಿ ಬದುಕಿನಲ್ಲಿ ತಮ್ಮದೇ ನೆಲೆ ತಲುಪುತ್ತಾರೆ. ಸ್ನೇಹಿತರು ಹೊರಟು ಹೋದ ಮೇಲೆ ಏಕಾಕಿಯಾದ ರಾಧಾಕೃಷ್ಣನಿಗೆ ಸಂಚಾರದ ವೇಳೆ ಕುಂದಾಪುರದಲ್ಲಿ ತಕ್ಕ ಮನ್ನಣೆ ಸಿಕ್ಕದೆ ಹೋದರೂ ರಕ್ತ ಸಂಬಂಧಿ ಡಾ. ಕೃಷ್ಣಪ್ಪನವರ ಸಹಾಯ ಲಭಿಸುತ್ತದೆ. ಆಮೇಲೆ ಏಕಾಕಿಯಾಗಿಯಾದರೂ ಗಾಂಧೀಜಿ ಬೋಧಿಸಿದ ಕೆಲವು ಚಟುವಟಿಕೆಗಳನ್ನಾದರೂ ಕಾರ್ಯಗತಗೊಳಿಸಲು ಅವನು ಆಲೆಮನೆ ಮಂಜಯ್ಯನ ನೆರವು ಪಡೆಯುತ್ತಾನೆ. ಮುಂದೆ ಮಂಜಯ್ಯನವರ ಒಡನಾಟದಲ್ಲಿ ಅವರ ಹಿರಿಯ ಮಗಳು ಸತ್ಯಭಾಮಳ ಸಾನಿಧ್ಯ ದೊರೆತು ಅವಳ ಮೇಲೆ ಒಲಮೆ ಬೆಳೆಯಲು ಕಾರಣವಾಗುತ್ತದೆ." (ಸುರೇಶ ಪಾಟೀಲ, ೨೦೦೮, ಪುಟ-೮೯.) ಜಾತಕ ಸರಿಹೋಗದೇ ಇರುವುದರಿಂದ ಮಂಜಯ್ಯನವರ ವಿರೋಧವನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಆದರೂ ಮದುವೆ ನಿಲ್ಲುವುದಿಲ್ಲ. ರಾಧಾಕೃಷ್ಣ ಮತ್ತು ಸತ್ಯಭಾಮೆ ದಂಪತಿಗಳಾಗುತ್ತಾರೆ. ಅವರಲ್ಲಿನ 'ಔದಾರ್ಯ'ವು 'ಉರುಳಾಗಿ' ಸಾಲಕ್ಕೆ ಸಿಲಿಕಿಸುತ್ತದೆ. ಸತ್ಯಭಾಮೆ ಗಂಡನಿಗೆ ಹೆಗಲಿಗೆ ಹೆಗಲುಕೊಟ್ಟು ಸಹಕರಿಸುತ್ತಾಳೆ. ಹೀಗೆ ಕೆಲವು ದಿನಗಳು ಕಳೆಯುತ್ತವೆ. ಇದು ರಾಧಾಕೃಷ್ಣನಿಗೆ ತೃಪ್ತಿಯನ್ನು ತಂದುಕೊಡುವುದಿಲ್ಲ. ತನ್ನ ಹೋರಾಟದ, ಸ್ವರಾಜ್ಯದ ಆದರ್ಶ ಗುರಿಯನ್ನು ತಲುಪಲು ಒಂದೆಡೆಗೆ ಕುಳಿತು ಸಂಸಾರದಲ್ಲಿ ಸಿಲುಕಿ ಕಾಲಹರಣ ಮಾಡುವುದು ಸರಿಕಾಣದೆ ಮತ್ತೆ

ಊರೂರು ಸುತ್ತುತ್ತಾನೆ. ಇದೇ ಸಂದರ್ಭದಲ್ಲಿ ಗಾಂಧೀಜಿಯವರು ಉಪ್ಪಿನ ಸತ್ಯಾಗ್ರಹವನ್ನು ಹುಟ್ಟು ಹಾಕುತ್ತಾರೆ. ತನ್ನ ಜಿಲ್ಲೆಯಾದ ಉತ್ತರ ಕನ್ನಡದಲ್ಲಿ ಈ ಹೋರಾಟದ ಸ್ವರೂಪ ತೀವ್ರವಾಗಿರುವದನ್ನು ಕಂಡು ಅದರಲ್ಲಿ ಪಾಲ್ಗೊಳ್ಳುತ್ತಾನೆ. ಈ ಹೋರಾಟದಲ್ಲಿ ಜೈಲು ಸೇರಿದವರ ಕುಟುಂಬಗಳನ್ನು ಸಂಪರ್ಕಿಸಿ ಅವರಿಗೆ ಸಹಾಯ ಮಾಡುತ್ತಾನೆ.

ಇತ್ತ ಆರಂಭದಲ್ಲಿ ಇವನ ಜೊತೆ ಕೈ ಜೋಡಿಸಿದ್ದ ಸ್ನೇಹಿತ ನಂದ ಕಾಂಗ್ರೆಸ್ ಪಕ್ಷದ ಮುಂದಾಳು ಆಗಿ ಪ್ರಸಿದ್ಧಿಗೆ ಬಂದಿರುತ್ತಾನೆ. ಇವನಿಗೊಬ್ಬ ಸಮತಾವಾದಿ ಪತ್ರಕರ್ತ ಪ್ರಭುದೇವ ಇರುತ್ತಾನೆ. ಮಂಗಳೂರಿನಲ್ಲಿ ನಡೆದ ಪ್ರಥಮ ಸಮಾಜವಾದಿ ಸಮ್ಮೇಳದಲ್ಲಿ ಡಾ. ನಂದ ತನ್ನ ಫಾರ್ಮಸೂಟಿಕಲ್ಸ್ ಕಾರ್ಖಾನೆಯನ್ನು ತೆರೆಯಲು ಒಪ್ಪಿಗೆ ಸಿಕ್ಕಿದ್ದರಿಂದ ಅದೇ ಖುಷಿಯಲ್ಲಿ "ಭತರ ಖಂಡದಲ್ಲಿ... ಜಗತ್ತನ್ನು ಸ್ಪರ್ಧಿಸಬಲ್ಲ ಉತ್ತಮ ಔಷಧ ತಯಾರಾಗಬೇಕು. ಶಾಸ್ತ್ರೀಯ ಸಂಶೋಧನೆಯಾಗಬೇಕು. ಬಡ ಜನರ ಎಟುಕಿಗೆ ಸಿಗುವಷ್ಟು ಅಗ್ಗವಾಗಿ, ಧಾರಾಳವಾಗಿ ಔಷಧಗಳು ಪೂರೈಕೆಯಾಗಬೇಕೆಂಬ ಹಂಬಲದಿಂದ ನಾವು ಈ ಸಂಸ್ಥೆಯನ್ನು ತೆರೆದುದಾಗಿದೆ" (ಶಿವರಾಮ ಕಾರಂತ, ೨೦೦೮, ಮುನ್ನುಡಿ ಪುಟ–೧೯೬.) ಎಂದು ರಾಜಕೀಯ ಭಾಷಣವನ್ನು ಮಾಡಿದರು. ಇದರ ಹಿಂದಿನ ಉದ್ದೇಶವೇ ಬೇರೆ ಎಂಬುದು ರಾಧಾಕೃಷ್ಣನಂಥವರಿಗೆ ಮಾತ್ರ ವೇದ್ಯವಾಗುವಂತದ್ದು.

ಮತ್ತೊಂದೆಡೆ ಈ ಸಮಾರಂಭದಲ್ಲಿ ಭಾಗವಹಿಸಲು ಆಹ್ವಾನವಿಲ್ಲದೆ ಇದ್ದರೂ ಮೊದಲಿನಿಂದ ಡಾ. ನಾರಿಯಲ್‌ವಾಲ್ ಎಂಬ ಕೇರಳದ ಶ್ರೀಮಂತ ಸಮತಾವಾದಿಯ ಪರಿಚಯವಿದ್ದ ಪ್ರಭುದೇವನ ಆಕ್ರೋಶದ ಚಿತ್ರಣವಿದೆ. ಆದರೆ ಉದ್ದೇಶ ಪೂರ್ವಕವಾಗಿ ಅವನನ್ನು ದೂರ ಇಟ್ಟಿದ್ದ ನಂದನ ಮೇಲಿನ ಹೊಟ್ಟೆ ಕಿಚ್ಚಿಗೆ ಮಾತನಾಡುವ ಪತ್ರಕರ್ತ ಪ್ರಭುದೇವನು "ಡಾ. ನಾರಿಯಲ್‌ವಾಲರು ನಾನು ನೋಡಿದ ಜನರಲ್ಲಿ ಅದ್ವಿತೀಯ ಮೇಧಾವಿ. ಏನು ವಿಚಾರಗಳು ಅವರವು! ಅವರು ಹೇಳುವ ಕ್ರಾಂತಿ ಮಾರ್ಗವನ್ನು ಹಿಡಿದರೆ ನಮಗೆ ಮೂರೇ ಮೂರು ದಿನಗಳಲ್ಲಿ ಸ್ವಾತಂತ್ರ್ಯ ಖಂಡಿತ. ಅದರ ಬದಲು ಗಾಂಧೀಜಿಯವರ ದಾರಿ ಹಿಡಿದರೆ ಒಂದು ಶತಮಾನ ಕಳೆದೀತು"(ಶಿವರಾಮ ಕಾರಂತ, ೨೦೦೮, ಮುನ್ನುಡಿ ಪುಟ–೧೯೭.) ಎನ್ನುತ್ತಾನೆ. ಹೀಗೆ ವಿಭಿನ್ನ ಮನೋಧೋರಣೆಯ ಇವರಿಬ್ಬರ ಔದಾರ್ಯದ ಜಾಲದಲ್ಲಿ ಸಿಕ್ಕಿಕೊಳ್ಳುತ್ತಾನೆ ರಾಧಾಕೃಷ್ಣ. ಹೀಗೆ "ಔದಾರ್ಯದ ಉರುಳಲ್ಲಿ" ಕಾದಂಬರಿಯಲ್ಲಿ ಒಬ್ಬ ಯುವ ಹೋರಾಟಗಾರ ತನ್ನ ಆದರ್ಶಗಳನ್ನು ಉಳಿಸಿಕೊಳ್ಳಲು ಅನೇಕ 'ಉರುಳು'ಗಳಲ್ಲಿ ಬಿದ್ದು ಒದ್ದಾಡುತ್ತಾನೆ.

ಕಾದಂಬರಿಯಲ್ಲಿ ಬರುವ ಮತ್ತೊಂದು ಮಹತ್ವದ ಪಾತ್ರ ದಯಾನಂದರಾಯರದು. ಈ ಕುರಿತು ಪಾ.ವೆಂ. ಆಚಾರ್ಯ ಅವರು "ಅಲೋಚನಾ ರಹಿತ ತ್ಯಾಗಕ್ಕೆ ಕಾರಂತರಿಂದ ಗೌರವ ಸಿಕ್ಕಂತೆ ಕಾಣುವುದಿಲ್ಲ... ದಯಾನಂದರಾಯರನ್ನು ಚಿತ್ರಿಸಿದ ರೀತಿಯಿಂದ ಹೇಳುವುದಾದರೆ ಅದು ಗೌರವಕ್ಕಿಂತಲೂ ಹೆಚ್ಚಾಗಿ ಸಹಾನುಭೂತಿಯಂತೆ ಕಾಣುತ್ತದೆ. ತಮ್ಮ ತ್ಯಾಗದ ವಿನಿಯೋಗ ಹೇಗಾಗುತ್ತದೆಯೆಂಬ ಯೋಚನೆಯಿಲ್ಲದೆ ಮಾಡುವ ತ್ಯಾಗದಿಂದ ಯಾವ ಘನವಾದ ಮೌಲ್ಯಕ್ಕೂ ಒತ್ತಾಸೆ ಸಿಗಲಾರದು. ದಯಾನಂದರಾಯರ ಮುಖಸ್ತುತಿ ಮಾಡಿ ಮಾಡಿ, ಅವರಿಂದ ತ್ಯಾಗ ಮಾಡಿಸಿ ಅದರ ಪ್ರಯೋಜನ ಪಡೆದವರೆಲ್ಲ ಅವರ ಕೈ ಖಾಲಿಯಾದೊಡನೆ ಅವರಿಗೆ ದ್ರೋಹ ಬಗೆಯುತ್ತಾರೆ..... ದಯಾನಂದರಾಯರು ಇದನ್ನೆಲ್ಲ ನೋಡಿದರೂ ಅದನ್ನು ತಡೆಯುವ, ತಿದ್ದುವ ಶಕ್ತಿಯಾಗಲಿ, ಸಾತ್ವಿಕ ಕಠೋರತೆಯಾಗಲಿ ಅವರಲ್ಲಿಲ್ಲ. ತದ್ವಿರುದ್ಧವಾಗಿ ಅವರ ಆರ್ಥಿಕ ಆಶ್ರಯದಲ್ಲೇ ಸಣ್ಣ ರೀತಿಯಲ್ಲಿ ಸೇವಾಕಾರ್ಯ ಮಾಡುತ್ತಿರುವ ರಾಧಾಕೃಷ್ಣ ನಮ್ಮ ಗಮನ ಸೆಳೆಯುತ್ತಾನೆ.... ಕಾರಂತರಿಗೆ ಕಾದಂಬರಿ ಬರೆಯುವಾಗ ಏನು ಉದ್ದೇಶವಿತ್ತೋ ತಿಳಿಯದು. ಆದರೆ ಕಾದಂಬರಿ ಓದಿ ಮುಗಿಸಿದ ಮೇಲೆ ನನಗೆ ಕಾರಂತರು ಮುನ್ನುಡಿಯಲ್ಲಿ ಉಲ್ಲೇಖಿಸಿದ 'ಸೋಲಿನ ಹಿರಿಮೆ' ದಯಾನಂದರಾಯರದ್ದಲ್ಲ, ಅವರಿಗಿಂತ ಗಾತ್ರದಲ್ಲಿ ಬರು ಕಿರಿಯನಾದ ರಾಧಾಕೃಷ್ಣನದು ಎನ್ನಿಸಿಬಿಟ್ಟಿತು" (ಸುರೇಶ ಪಾಟೀಲ, ೨೦೦೮, ಪುಟ-೯೨.) ಎಂದು ಕಾದಂಬರಿಯಲ್ಲಿನ ದಯಾನಂದರಾಯರ ಆಲೋಚನಾರಹಿತ ತ್ಯಾಗದ ಕುರಿತು ಹೇಳುತ್ತಾರೆ. ತಾವು ಮಾಡುವ ತ್ಯಾಗಕ್ಕೆ ಒಂದು ಬೆಲೆ ಇರಬೇಕು. ಬಡತನವೆಂದು, ಹಸಿವೆಂದು ಬಂದವರಿಗೆ ಮಾಡುವ ದಾನ, ತ್ಯಾಗದಲ್ಲಿ ನಿಸ್ವಾರ್ಥಿಗಳಾಗಿ ದಯಾನಂದರಾಯರು ಕಂಡರೂ ಅವರು ರಾಧಾಕೃಷ್ಣನ ದೇಶಪ್ರೇಮ, ಹೋರಾಟದ ಛಲ, ಗಾಂಧೀಜಿಯ ಆದರ್ಶಗಳ ಫಲದೆದುರು ಮಂಕಾಗಿ ತೋರುತ್ತಾರೆ.

ಕಾದಂಬರಿಯು ಕೇವಲ ಒಬ್ಬ ರಾಧಾಕೃಷ್ಣನ ಆದರ್ಶಗಳನ್ನು ಕೊಡುವುದಿಲ್ಲ. ಅಂದಿನ ಸ್ವಾತಂತ್ರ್ಯಪೂರ್ವ ಭಾರತದಲ್ಲಿ ಹಳ್ಳಿ ಹಳ್ಳಿಗಳಲ್ಲಿ ಇಂತಹ ನೂರಾರಾರು ರಾಧಾಕೃಷ್ಣರು ಗಾಂಧೀಜಿಯವರ ಚಳುವಳಿಯ ಪ್ರಭಾವಕ್ಕೆ ಸಿಲುಕಿ ಸ್ವಾತಂತ್ರ್ಯದ ಕೆಚ್ಚನ್ನು ತೋರ್ಪಡಿಸಿದ್ದನ್ನು ಈ ಕಾದಂಬರಿಯ ಮೂಲಕ ಗುರುತಿಸಬಹುದು. ಇಲ್ಲಿ ಬರುವ ಡಾ. ನಂದನ ಮತ್ತು ಬನ್ನಟ್ಟಿ ಅವರ ಮೂಲಕ ಕಾಂಗ್ರೆಸ್ ರಾಜಕಾರಣೀಯ ಭ್ರಷ್ಟತೆ, ತತ್ವಹೀನ ರಾಜಕಾರಣ, ಅತಂತ್ರ ಧೋರಣೆಗಳನ್ನು ಕಾಣುತ್ತೇವೆ. ಕಾದಂಬರಿಯ ಕೊನೆಯಲ್ಲಿ ವಿಶ್ರಾಂತರಾಗಿ ಕುಳಿತಕೊಂಡ ರಾಧಾಕೃಷ್ಣರು ಮಗ ಚಂದ್ರನಿಗೆ "ಜನ ವಿಧ್ವಂಸಕ ಚಳವಳಿ ಹೂಡಿದ್ದರೆ, ತಮ್ಮ ಸಿಟ್ಟಿನಲ್ಲಿ ಅಂಥ ಉಗ್ರಮಾರ್ಗವನ್ನು ಕೈಕೊಂಡಿದ್ದರೆ, ಅವರ ಎಲ್ಲ ತಪ್ಪುಗಳ ಹೊಣೆಯೂ ನನ್ನದು.

ನನ್ನ ಭುಜದ ಮೇಲೆ ಅದಿರಲಿ" (ಶಿವರಾಮ ಕಾರಂತ, ೨೦೦೮, ಮುನ್ನುಡಿ ಪುಟ-೪೬೪.) ವಾರ್ತೆಯೊಂದನ್ನು ಓದಿ ಹೇಳುತ್ತಾರೆ. ಅದು ಹಿಂಸೆ ಅಲ್ಲದ ಮಾತು. ಕಾಂಗ್ರೇಸಿನ ಗಣ್ಯ ಮುಖಂಡರ ಮಾತು ಎಂಬ ಹೆಮ್ಮೆಯನ್ನು ವ್ಯಕ್ತಪಡಿಸುತ್ತಾರೆ. ಆದರೆ ಇಂತಹ ಮಾತುಗಳನ್ನು ಸ್ಥಳೀಯ ರಾಜಕಾರಣಿ ಬನ್ನಟ್ಟಿ ಅಂತವರು ಇದನ್ನು ಓದಿ ನಕಲು ಮಾಡಿ ಮುಂದೊಂದು ದಿನ ತಾನೂ ಹೇಳಿದರೂ ಹೇಳಬಹುದು ಎಂದು ಚರ್ಚೆ ಮಾಡುತ್ತಾರೆ.

ಬನ್ನಟ್ಟಿಯಂಥ ಕಾಂಗ್ರೇಸ್ ರಾಜಕಾರಣಿಗಳಲ್ಲಿ ಅಧಿಕಾರ ಗದ್ದುಗೆಯ ಹಂಬಲವಿತ್ತೇ ಹೊರತು ನಿಜವಾದ ಆದರ್ಶಪ್ರಾಯತೆ ಇರಲಿಲ್ಲ. ಗಾಂಧೀಜಿಯವರ ಅಹಿಂಸೆ, ಸತ್ಯಗಳನ್ನು ಪಾಲಿಸುವಲ್ಲಿ ಅವನಿಗೆ ನಿಯತ್ತಿರಲಿಲ್ಲ. ಅದನ್ನು ಸ್ವತಃ ರಾಧಾಕೃಷ್ಣ ಕಂಡುಕೊಂಡಿದ್ದರು. ಕೆಲವು ದಿನಗಳ ನಂತರ "ಕರ್ನಾಟಕದಲ್ಲಿ ವಿಧ್ವಂಸಕ ಚಳವಳಿ ನಡೆಯಿಸಿದವರ ಲೋಪದೋಷಗಳ ಹೊರೆ ನನ್ನ ಮೇಲಿರಲಿ! ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಅವರ ಹೆಸರು, ಚಿರಸ್ಥಾಯಿಯಾಗಲಿ" (ಶಿವರಾಮ ಕಾರಂತ, ೨೦೦೮, ಮುನ್ನುಡಿ ಪುಟ-೪೬೫.) ಎಂಬ ತನ್ನನ್ನೇ ಬೆನ್ನುಚಪ್ಪರಿಸಿಕೊಂಡ ಲೋಕಲ್ ಕಾಂಗ್ರೇಸ್ ರಾಜಕಾರಣಿ ಮಾತುಗಳು ರಾಧಾಕೃಷ್ಣರಿಗೆ ಅಚ್ಚರಿಯನ್ನುಂಟು ಮಾಡುತ್ತದೆ. "ಇಂಥ ಜನರು ತುಂಬಿರುವಲ್ಲಿ ಏನು ದೊಡ್ಡ ಕೆಲಸವಾದೀತು? ಏನು ಹಿರಿಯ ಆಸೆ ಕೈಗೂಡೀತು? ಇವರೆಲ್ಲ ನಾಳೆ ನಮ್ಮ ಸ್ವರಾಜ್ಯದ ಮಂತ್ರಿಗಳಾಗುವವರಲ್ಲವೇ!" (ಶಿವರಾಮ ಕಾರಂತ, ೨೦೦೮, ಮುನ್ನುಡಿ ಪುಟ-೪೬೫-೪೬೬.) ಎಂದು ವಿಚಾರಪರರಾಗಿ ಏನೇನೋ ಯೋಚಿಸುತ್ತಾರೆ. ಕೊನೆಗೆ ತಮ್ಮ ಮಗನಿಗೆ ಬೆಂಕಿಪೊಟ್ಟಣ ತರಲು ಹೇಳಿ, ಪತ್ರಿಕೆಯ ಆ ಸುದ್ದಿಯನ್ನು ಚುರು ಚುರು ಮಾಡಿ ಸುಟ್ಟು ಹಾಕುತ್ತಾರೆ. ಬನ್ನಟ್ಟಿ ಶವಸಂಸ್ಕಾರವೆಂಬಂತೆ; ತಮ್ಮ ಹೋರಾಟದ ಕಿಚ್ಚನ್ನು ಮತ್ತೊಮ್ಮೆ ತೋರಿಸುತ್ತಾರೆ.

"ಗಾಂಧೀಜಿಯವರ ಸ್ವಾತಂತ್ರ್ಯ ಹೋರಾಟಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಅವರ ನಿಸ್ವಾರ್ಥ ಸೇವೆಯ ಆದರ್ಶದಿಂದ ಪ್ರೇರಿತರಾಗಿ ಪ್ರಾಮಾಣಿಕವಾಗಿ ದುಡಿದು ದಣಿದು ಸೋತು ಹೋದವರ ವಿವೇಚನೆಯನ್ನು ವಿಫಲ ಭಾವನೆಯನ್ನು ಕಾದಂಬರಿ ಚಿತ್ರಿಸುತ್ತದೆ. ದಯಾನಂದರಾಯ, ರಾಧಾಕೃಷ್ಣ ಮತ್ತು ಅವನ ಹೆಂಡತಿಯಾದ ಸತ್ಯಭಾಮೆ ಗಾಂಧೀಜಿಯವರು ತೋರಿದ ದಾರಿಯಲ್ಲಿ ನಡೆದು, ದೇಶದ ಏಳ್ಗೆಗಾಗಿ ತಮ್ಮನ್ನು ಧಾರೆಯೆರೆದು ಕೊಟ್ಟವರು. ಇವರಿಗೆ ಇದಿರಾಗಿ ಸಾಣಿಕಲ್, ನಂದ ಮತ್ತು ಪ್ರಭುದೇವರಂಥವರು. ಮೊದಲ ಮೂವರು ನಿಸ್ವಾರ್ಥ ಸೇವಕಾರ್ಯ ಉಳಿದ ಮೂವರ ಸಮಯಸಾಧಕ ಸ್ವಾರ್ಥಬುದ್ಧಿಯಿಂದ ವಿಫಲವಾಗುತ್ತದೆ. ಪ್ರಾಮಾಣಿಕ ಸೇವಾಬುದ್ಧಿಯನ್ನು ಜನಗಳ ಹಿತಕ್ಕಾಗಿ ದುಡಿಯಬೇಕೆಂಬ ಅಂತರಂಗದ ಔದಾರ್ಯದ ಉರುಳಿಗೆ ಬಿದ್ದವರ

ವಿವೇಚನೆಯನ್ನು ಯಾರೂ ಗಮನಿಸದಿರುವಾಗ ಆದರ್ಶ ಪ್ರೇರಣೆಗಳಿಗೆ ಯಾವ ಬೆಲೆ ಎಂಬ ವಿಫಲ ಭಾವನೆಯಲ್ಲಿ ಕಾದಂಬರಿ ಕೊನೆಗೊಳ್ಳುತ್ತದೆ. ಸ್ವಾತಂತ್ರ್ಯ ಸಮರದ ಮತ್ತೊಂದು ಮುಖವನ್ನು ಚಿತ್ರಿಸುತ್ತದೆ" (ಸುರೇಶ ಪಾಟೀಲ, ೨೦೦೮, ಪುಟ-೯೨.) ಎಂದು ವಿ.ಎಂ. ಇನಾಂದಾರ್ ಕಾದಂಬರಿಯನ್ನು ವಿಮರ್ಶಿಸುತ್ತಾರೆ.

'ಔದಾರ್ಯದ ಉರುಳು' ರಾದಾಕೃಷ್ಣ ಮತ್ತು ಸತ್ಯಭಾಮೆಗೆ ಮಾತ್ರ ವೆನಿಸವುದಿಲ್ಲ. ಅವರೊಂದಿ ದಯಾನಂದರಾಯರೂ ಈ 'ಉರುಳಿ'ನಲ್ಲಿ ಸಿಕ್ಕಿಕೊಂಡ ಪಾಲು ಹೆಚ್ಚಿಗೆಯೇ ಮೂಡಿಬಂದಿದೆ. ರಾಧಾಕೃಷ್ಣ ತನ್ನ ಯೌವನದಲ್ಲಿ ಗಾಂಧೀಜಿಯ ಆದರ್ಶಕ್ಕೆ ಒಲಿದು ತನ್ನ ಜೀವನವನ್ನು ರೂಪಿಸಿಕೊಳ್ಳಲು ಪ್ರಾರಂಭಿಸಿದಾಗಿನಿಂದ ಒಂದೊಂದಗಿ ಅವನ ಕುತ್ತಿಗೆಗೆ ಉರುಳಾಗಿ ಸುತ್ತಿಕೊಳ್ಳುತ್ತಾ ಹೋಗುತ್ತವೆ. ತನ್ನ ೧೯೨೧ರ ಅಸಹಕಾರ ಚಳುವಳಿಯಿಂದ ಹಿಡಿದು ೧೯೪೨ ಚಲೇಜಾವ್ ಚಳುವಳಿಯ ವರೆಗೆ ರಾಧಾಕೃಷ್ಣನ ಸ್ವಾತಂತ್ರ್ಯದ ಹೋರಾಟವು ಉನ್ನತೀಕರಿಸುತ್ತಾ ಹೋಗಿ ಕೊನೆಯಲ್ಲಿ ಮೌನವನ್ನು ತಾಳುತ್ತದೆ. ಅಹಿಂಸಾ ರೂಪದ ಅವನ ಹೋರಾಟವು ನೈಜವಾದುದು, ವಾಸ್ತವವಾದುದು. ಆದರೆ ಅಂದಿನ ತನ್ನ ಸುತ್ತಲಿನ ಸಮಾಜದಲ್ಲಿದ್ದ ಡಾ.ನಂದಾ, ಬನ್ನಟ್ಟಿ, ಪತ್ರಕರ್ತ ಪ್ರಭುದೇವರ ಕಾಂಗ್ರೆಸ್ ಪರವಾದ ನಿಲುವುಗಳು ತದ್‌ವಿರುದ್ಧವೆನಿಸುತ್ತವೆ. ತನ್ನ ಕುಟುಂಬದ ಅನೇಕ ಸಮಸ್ಯೆಗಳೊಂದಿಗೆ ತನ್ನ ಆದರ್ಶ ಹೋರಾಟಕ್ಕೆ ಎದುರಾದ ಸಂಕಟಗಳಿಗೆ ಕೆಲವೊಮ್ಮೆ ಮೌನವಾಗಿ ವರ್ತಿಸುತ್ತಾ ಪರಿಹರಿಸಿಕೊಳ್ಳುವ ಪ್ರಯತ್ನ ಮಾಡುತ್ತಾನೆ. ಅದಕ್ಕೆ ಆರ್ಥಿಕ ಬೆಂಬಲವಿಲ್ಲದೆ ಹೋದಾಗ ಅನೇಕ ಯೋಜನೆಗಳನ್ನು ರೂಪಿಸಿ ಕೆಲಸ ಮಾಡುತ್ತಾನೆ. ನಿಶ್ಚಿತವಾದ ಫಲವು ದೊರಕದೆ ಹೋದಾಗಲೂ ತನ್ನ ಹೋರಾಟದಿಂದ ಸ್ಫೂರ್ತಿ ಪಡೆಯುತ್ತಾನೆ. ಅದಕ್ಕೆ ತನ್ನ ಹೆಂಡತಿ ಸತ್ಯಭಾಮೆಯು ಹೊಂದಿಕೊಂಡು ನಿಭಾಯಿಸುತ್ತಾಳೆ. ಹೀಗೆ ಕಾದಂಬರಿಯಲ್ಲಿ ಕೌಟುಂಬಿಕ ಜೀವನವು, ಸಾಮಾಜಿಕ ಜೀವನವೂ ಸೇರಿಕೊಂಡ ಮನೆ ಮತ್ತು ಊರಿಗೆ ಉಪಕಾರಿಯಾಗಿ ತೋರುತ್ತಾನೆ.

ಪ್ರಸ್ತುತ ಕಾದಂಬರಿಯಲ್ಲಿ ರಾಧಾಕೃಷ್ಣನ ಆದರ್ಶ ಜೀವನವು ಯುವ ಪೀಳಿಗೆಗೆ ಮಾದರಿಯಾಗಿ ಕಾಣುತ್ತದೆ. ತನ್ನ ಹೋರಾಟಕ್ಕೆ ಸ್ನೇಹಿತರ ಬೆಂಬಲ ಸಿಗದಿದ್ದಾಗ, ಊರಿನವರ, ರಕ್ತಸಂಬಂಧಿಗಳ ಕೊಂಕು ಮಾತುಗಳಿಗೆ ಧೃತಿಗೆಡದೆ ಮುಂದುವರೆಯುವುದು ಇತರ ಹೋರಾಟಗಾರರಿಗೆ ಪ್ರೇರಕವಾದುದು. ಇಲ್ಲಿ ಕಾರಂತರ ಮುಂದಾಲೋಚನ ಶಕ್ತಿ ತುಂಬಾ ಹರಿತವಾಗಿ ಗೋಚರಿಸುತ್ತದೆ. ಸ್ವಾತಂತ್ರ್ಯದಿನಗಳ ಸುಳಿಗೆ ಸಿಕ್ಕ ಅವರ ಮನಸ್ಸು ಅಂದಿನ ಸಮಾಜಕ್ಕೆ ಸ್ಪಂದಿಸುವಲ್ಲಿ ಕಾದಂಬರಿಯ ರೂಪವನ್ನು ಪಡೆದುಕೊಂಡಿದ್ದು ಸಮರ್ಥ ಲೇಖಕನಿಗೆ ಸಹಜವೆನಿಸುತ್ತದೆ. ಒಟ್ಟಿನಲ್ಲಿ ಸ್ವಾತಂತ್ರ್ಯ ಪೂರ್ವ ಭಾರತದ ಸ್ವಾತಂತ್ರ್ಯ, ಹೋರಾಟ,

ಚಳುವಳಿಗಳನ್ನೇ ಮುಖ್ಯವಸ್ತುವಾಗಿ ಬರೆಯಲ್ಪಟ್ಟ ಕಾದಂಬರಿಗಳಲ್ಲಿ ಕಾರಂತರದು ವಿಭಿನ್ನ ಮತ್ತು ವಿಶಿಷ್ಟ.

### ೫.೨. ಸ್ವಾತಂತ್ರ್ಯಾ ನಂತರ ಘಟ್ಟದ ಕಾದಂಬರಿಗಳು

ಇಲ್ಲಿನ ಕಾದಂಬರಿಗಳ ಆಶೋತ್ತರಗಳು ಸ್ವಾತಂತ್ರ್ಯಪೂರ್ವ ಕಾದಂಬರಿಗಳಿಗಿಂತ ಭಿನ್ನವೆನ್ನಿಸುವ ಅಂಶಗಳನ್ನು ಒಳಗೊಂಡಿರುವದನ್ನು ಕಾಣುತ್ತೇವೆ. ಏಕೆಂದರೆ ಇಲ್ಲಿ ಸ್ವಾತಂತ್ರ್ಯ ನಂತರ ಭಾರತದಲ್ಲಿ ಆಳುವ ವರ್ಗದಲ್ಲಿನ ಸಾಮ್ರಾಜ್ಯಶಾಹಿ, ವಸಾಹತುಶಾಹಿ, ಬಂಡವಾಳಶಾಹಿ, ಜಮೀನುದಾರಿಕೆ ಧೋರಣೆಗಳನ್ನು ತುಚ್ಛವಾಗಿ ಕಾಣುವ ಅವುಗಳ ವಿರುದ್ಧ ಪ್ರತಿಭಟಿಸುವ ಹೋರಾಟವು ಜನಸಾಮಾನ್ಯನಲ್ಲಿ ಸ್ವಾತಂತ್ರ್ಯದ ರೂಪವನ್ನು ಪಡೆದುಕೊಂಡಿರುತ್ತವೆ. ಹೀಗಾಗಿ ಪ್ರಸ್ತುತ ಮಹಾಪ್ರಬಂಧದ ಅಧ್ಯಯನಕ್ಕೆ ಒಳಪಡಿಸಲಾದ ಪ್ರಗತಿಶೀಲ ಲೇಖಕರ ಕಾದಂಬರಿಗಳಲ್ಲಿ ಇಂತಹ ಅಂಶಗಳನ್ನು ಚಿತ್ರಿಸುವದರಿಂದ ಇಲ್ಲಿ ಅವುಗಳನ್ನು ವಿಶ್ಲೇಷಣೆಗೆ ಆರಿಸಿಕೊಳ್ಳಲಾಗಿದೆ.

ಸ್ವಾತಂತ್ರ್ಯ ನಂತರದ ಭಾರತದಲ್ಲಿ ಪ್ರಗತಿಶೀಲತೆಯ ಹೆಸರಿನಲ್ಲಿ ಅನೇಕ ಬಗೆಯ ಚಳುವಳಿಗಳು ಬಂದುಹೋದವು. ಅವುಗಳಲ್ಲಿ ಸ್ವಾತಂತ್ರ್ಯವೇ ಪ್ರಮುಖ ವಸ್ತುವುಳ್ಳ ಕಾದಂಬರಿಗಳನ್ನು ಕನ್ನಡ ಲೇಖಕರು ಉಳಿಸಿಕೊಂಡರು. ಪ್ರಗತಿಶೀಲರಲ್ಲಿ ಅವುಗಳು ಹೆಚ್ಚೆನ್ನುವಷ್ಟು ಬೆಳೆದುಬಂದವು. ಸ್ವಾತಂತ್ರ್ಯ ಚಳುವಳಿಗಳ ಉದ್ದೇಶ, ಪರಿಣಾಮಗಳ ಸಫಲತೆ, ವಿಫಲತೆಗಳನ್ನೇ ತಮ್ಮ ಕಥೆಗೆ ಮುಖ್ಯವಸ್ತುವನ್ನಾಗಿ ಮಾಡಿಕೊಂಡರು. ಯಾವುದೇ ಸ್ಪಂದನೆಗಳಿಲ್ಲದೇ ವರ್ತಿಸುತ್ತಿದ್ದ ರಾಜಕೀಯ ಧುರಿಣರು ಇವುಗಳಿಗೆ ಕಣ್ಣುಮುಚ್ಚಿಕೊಂಡು ಬದುಕುವುದನ್ನು ರೂಡಿಸಿಕೊಂಡಿದ್ದರು. ಇದು ಕೂಡಾ ಲೇಖಕರನ್ನು ಸಿಡಿದೇಳುವಂತೆ ಮಾಡಿತ್ತು. ತಾವು ಬದುಕುತ್ತಿರುವ ಸಮಾಜವನ್ನು ಎಚ್ಚರಗೊಳಿಸುವಲ್ಲಿ ಬಹುಮಟ್ಟಿಗೆ ಕಾದಂಬರಿಗಳು ಯಶಸ್ವಿಯಾಗಿದ್ದವು ಎನ್ನುವದರಲ್ಲಿ ಯಾವುದೇ ಸಂದೇಹವಿಲ್ಲ. ಏಕೆಂದರೆ ಅಂದಿನ ಕಾಲಕ್ಕೆ ಪ್ರಭಾವಿ ಮಾಧ್ಯಮವೆಂದರೆ ಸಾಹಿತ್ಯ. ಅದು ಕಥೆ, ಕಾದಂಬರಿಗಳೆಂದರೆ ಜನರಲ್ಲಿ ಅಪಾರವಾದ ಅಭಿಮಾನವಂತೂ ಇದ್ದಿತ್ತು. ಪ್ರಗತಿಶೀಲರ ಕಾದಂಬರಿಯಲ್ಲಿಯಂತೂ ಹೊಸ ದಂತಕತೆಯನ್ನೇ ಹುಟ್ಟು ಹಾಕಿದವು ಎನ್ನಬೇಕು. ಅದರಲ್ಲೂ ಸ್ವಾತಂತ್ರ್ಯ ಚಳುವಳಿಗಳ ಕುರಿತ ಸಾಹಿತ್ಯ ಕೃತಿಗಳು ಹೆಚ್ಚು ಪ್ರಚುರತೆಯನ್ನು ಪಡೆದುಕೊಂಡಿದ್ದ ಕಾಲವೊಂದಿತ್ತು. ಈ ಬಗೆಯ ಪ್ರಗತಿಶೀಲ ಸಾಹಿತ್ಯ ಚಳುವಳಿ ಭಾರತದ ಎಲ್ಲ ಪ್ರಾದೇಶಿಕ ಭಾಷೆಗಳಲ್ಲೂ ಒಂದಲ್ಲ ಒಂದು ರೀತಿಯಲ್ಲಿ ಪ್ರಕಟಗೊಂಡಿದೆಯೆಂಬುದನ್ನು ಗುರುತಿಸಬಹುದು.

ಸ್ವಾತಂತ್ರ್ಯ ಪೂರ್ವದಲ್ಲಿ ನಾಡಿಗೆ ಕೆಲವೊಂದು ಮಹತ್ವದ ಧ್ಯೇಯಗಳಿಗೋಸ್ಕರ ರೂಪಿಸಿಕೊಂಡಿದ್ದ ಆದರ್ಶದ ಕಾವು ಸ್ವಾತಂತ್ರ್ಯ ಲಭಿಸಿ ತಣ್ಣಗಾದ ಮೇಲೆ ಗೌಣವಾಗುತ್ತಾ ಸಾಗಿದ್ದವು. ಅದು ರಾಜಕೀಯ ರೂಪರೇಷೆಗಳನ್ನು ಪಡೆದುಕೊಂಡು ಸಾಮ್ರಾಜ್ಯಶಾಹಿ ಸ್ಥಾನದಲ್ಲಿ ಅಧಿಕಾರಶಾಹಿ ಬಂದು ನೆಲೆಗೊಂಡಿತ್ತು. ಇದುವರೆಗೂ ಆದರ್ಶದ ಮುಸುಕಿನಲ್ಲಿ ತಲೆಮರೆಸಿಕೊಂಡಿದ್ದಂಥ ಎಷ್ಟೋ ಅನಿಷ್ಟಗಳು ಒಂದೊಂದಾಗಿ ಹೊರ ಬೀಳತೊಡಗಿದವು. ಇವುಗಳತ್ತ ಎಚ್ಚರಗೊಳ್ಳುತ್ತಿದ್ದ ಭಾರತೀಯರು ರಾಜಕೀಯ ವೇಷಧಾರಿಗಳ ಜೊಳ್ಳು ಸ್ವಾತಂತ್ರ್ಯ ಪ್ರೇಮ, ಕುಹಕ ಭಾಷಣಗಳು, ಆಶ್ವಾಸನೆಗಳು ಕಣ್ಣು ಕುಕ್ಕತೊಡಗಿದವು. ಅದರಿಂದ ಬಿಡುಗಡೆಯನ್ನು ಪಡೆಯಲೆಂದು ದಡಬಡನೆ ಎದ್ದು ನಿಂತ ಪ್ರಗತಿಶೀಲ ಸಾಹಿತ್ಯವು ಜನರ ಬದುಕಿನ ಎಲ್ಲ ಕ್ಷೇತ್ರಗಳನ್ನು ತಮ್ಮ ಕೃತಿಗಳಲ್ಲಿ ಪ್ರಧಾನ ವಸ್ತುವನ್ನಾಗಿ ಸ್ವೀಕರಿಸಿದವು.

ತೀವ್ರತರ ಬದಲಾವಣೆಯನ್ನು, ಮುಖ್ಯವಾಗಿ ಶತಶತಮಾನಗಳಿಂದ ಸಮಾಜದ ಅಂಗಾಂಗಗಳಿಗೆಲ್ಲ ಕಿಲುಬುಗಟ್ಟಿ ನಿಂತಿದ್ದ ಮೌಢ್ಯ, ಅನ್ಯಾಯ, ಅಧರ್ಮಗಳನ್ನು ಪ್ರತಿಭಟಿಸುತ್ತ, ಸಮಾಜ ಸುಧಾರಣೆಯ ವೀರಾವೇಶದಿಂದ ಬೆಳಗಾಗುವುದರಲ್ಲಿ ಪ್ರಗತಿಯ ಪವಾಡವನ್ನು ಕಾಣಲು ಚಡಪಡಿಸಿತು. ಇದರ ಫಲವಾಗಿ ಬದುಕಿನ ವಿವಿಧ ಅನುಭವಗಳಿಗೆ, ಅದರಲ್ಲೂ ಸಾಹಿತ್ಯ ಸಂವೇದನೆಗೆ ಒಂದು ಬಗೆಯ ಉತ್ಕಟತೆ ಸಹಜವಾಗಿಯೇ ಪ್ರಾಪ್ತವಾಯಿತು. ಇದ್ದುದನ್ನು ಬಿಟ್ಟು ಇರದುದರ ಕಡೆಗೆ ತುಡಿಯುತ್ತಿದ್ದ ಆದರ್ಶವಾದದ ಬಣ್ಣ ಬಣ್ಣದ ಬುರುಜುಗಳನ್ನು ಸದೆಬಡಿಯುವುದರೊಡನೆ ಬದುಕಿನ ಕರಾಳಮುಖವನ್ನು ತೆರೆದು ತೋರಿಸ ಹೊರಟ ಈ ಪ್ರಗತಿಶೀಲ ಕಾದಂಬರಿಗಳಲ್ಲಿನ ಸ್ವಾತಂತ್ರ್ಯ ಪಜ್ಞೆಯನ್ನು ಮೆಚ್ಚಲೇಬೇಕು.

ಪ್ರಸ್ತುತ ಪ್ರಗತಿಶೀಲ ಕಾದಂಬರಿಕಾರರೆಂದು ಗುರುತಿಸಿಕೊಂಡ ಬಸವರಾಜ ಕಟ್ಟೀಮನಿ, ನಿರಂಜನ, ತರಾಸು, ಅನಕೃ, ಚದುರಂಗ, ವ್ಯಾಸರಾಯ ಬಲ್ಲಾಳ, ವಿ.ಎಂ. ಇನಾಂದಾರ್ ಅವರ ಕಾದಂಬರಿಗಳನ್ನು ಪ್ರಧಾನವಾಗಿ ಮತ್ತು ಶ್ರೀರಂಗ ಹಾಗೂ ಮಿರ್ಜಿ ಅಣ್ಣಾರಾಯ ಅವರ ಕಾದಂಬರಿಗಳನ್ನು ಗೌಣವಾಗಿ ಮಹಾಪ್ರಬಂಧದ ಅಧ್ಯಯನದಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಒಟ್ಟು ಭಾರತ ಸ್ವಾತಂತ್ರ್ಯ ನಂತರ ರಚನೆಗೊಂಡ ಪ್ರಗತಿಶೀಲ ಲೇಖಕರ ೧೮ ಕಾದಂಬರಿಗಳನ್ನು ಪ್ರಧಾನವಾಗಿ ಅಧ್ಯಯನ ಮಾಡಲಾಗಿದೆ.

**ಬಸವರಾಜ ಕಟ್ಟೀಮನಿ ಅವರ ಸ್ವಾತಂತ್ರ್ಯ ನಂತರದ ಕಾದಂಬರಿಗಳಲ್ಲಿನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು**

ಕನ್ನಡದ ಕಾದಂಬರಿ ಕ್ಷೇತ್ರ ತುಂಬ ಹುಲುಸಾಗಿರುವ ವಿಷಯ ಎಲ್ಲರಿಗೂ ತಿಳಿದದ್ದೇ ಆಗಿದೆ. ಸ್ವಾತಂತ್ರ್ಯಾಂದೋಲನದ ಸಂದರ್ಭದಲ್ಲಿ ಒಂದು ಆದರ್ಶ ಮೌಲ್ಯವೇ ಆಗಿದ್ದ

ರಾಷ್ಟ್ರೀಯತೆ, ಅಂದಿನ ಎಲ್ಲ ಲೇಖಕರ ಮೇಲೂ ವಿಶೇಷ ಪ್ರಭಾವ ಬೀರಿತು. ಆ ಹುಲುಸಿಗೆ ಕಾರಣರಾದ ಅಗ್ರಗಣ್ಯ ಕಾದಂಬರಿಕಾರರಲ್ಲಿ ಶ್ರೀ ಬಸವರಾಜ ಕಟ್ಟೀಮನಿಯವರೂ ಒಬ್ಬರು. ಅವರು ಈಗಾಗಲೇ ಮೂವತ್ತಕ್ಕೂ ಮೇಲ್ಪಟ್ಟ ಕಾದಂಬರಿಗಳನ್ನು ರಚಿಸಿ, ಜೊತೆಗೆ ಕಥೆ ನಾಟಕಗಳನ್ನು ಸೃಜಿಸಿ, ಜನಪ್ರಿಯರಾಗಿದ್ದಾರೆ; ಕನ್ನಡ ಜನತೆಯ ಗೌರವಾದರಳಿಗೆ ಪಾತ್ರರಾಗಿದ್ದಾರೆ. ಅವರ ಕಾದಂಬರಿಗಳಲ್ಲಿ ಕೆಲವು ಜಗತ್ತಿನ ಉತ್ತಮ ಕಾದಂಬರಿಗಳ ಸಾಲಿನಲ್ಲಿ ಎಣಿಕೆಗೊಳ್ಳಬಲ್ಲ ಸಾಮರ್ಥ್ಯವನ್ನು ಪಡೆದಿವೆ. ಪ್ರಗತಿಶೀಲ ಲೇಖಕರೆಂದು ಗುರುತಿಸಿಕೊಂಡ ಕಟ್ಟೀಮನಿಯವರಿಗೆ ಕಾದಂಬರಿಯನ್ನು ರಚಿಸಲು ತಮ್ಮ ಮುಂದಿದ್ದ ಪ್ರಪಂಚದ ವಿದ್ಯಮಾನಗಳು ಹಲವಾರು. ಅಸ್ಪೃಶ್ಯತೆ, ಕಾರ್ಮಿಕರ ಭವಣೆಗಳು, ಬಂಡವಾಳಶಾಹಿಯ ಅಟ್ಟಹಾಸ, ಸ್ತ್ರೀ ಶೋಷಣೆ, ಸ್ವಾತಂತ್ರ್ಯದ ಹೋರಾಟದ ಚಳುವಳಿಗಳು, ಬಡತನ, ಆಹಾರ ಮೊದಲಾದವುಗಳಿದ್ದವು. ಇವುಗಳ ಹೊರತಾಗಿಯೂ ಅವರು ಸಾಂಸ್ಕೃತಿಕ ಮತ್ತು ಚಾರಿತ್ರಿಕವಾದ ಐತಿಹಾಸಿಕ ವಿಷಯವಸ್ತುಗಳನ್ನು ತಮ್ಮ ಕಾದಂಬರಿಗೆ ಆಯ್ದುಕೊಂಡಿದ್ದು ಒಂದು ವಿಶೇಷವೆನ್ನಬಹುದು.

ನರಗುಂದ ಬಂಡಾಯ, ಮಾಡಿಮಡಿದವರು, ಸಂಗೊಳ್ಳಿ ರಾಯನಾಯಕನಂತಹ ಐತಿಹಾಸಿಕ ವಿಷಯ ವಸ್ತುಗಳನ್ನು ಕಾದಂಬರಿಗಳನ್ನು ರಚಿಸಿ ಅನೇಕ ಓದುಗ ವಲಯವನ್ನು ತಮ್ಮತ್ತ ಸೆಳೆದವರಲ್ಲಿ ಕಟ್ಟೀಮನಿಯವರು ಪ್ರಧಾನವೆನಿಸುತ್ತಾರೆ. ಪ್ರಸ್ತುತ ಮಹಾಪ್ರಬಂಧದಲ್ಲಿ ಸ್ವಾತಂತ್ರ್ಯ ನಂತರದ ಅವಧಿಯಲ್ಲಿ ಅವರು ರಚಿಸಿದ ಪ್ರಮುಖ ಕಾದಂಬರಿಗಳಾದ ಮಾಡಿ ಮಡಿದವರು, ಸಂಗೊಳ್ಳಿ ರಾಯನಾಯಕ, ನರಗುಂದ ಬಂಡಾಯ ಈ ಮೂರು ಕಾದಂಬರಿಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

### ಮಾಡಿ ಮಡಿದವರು: ೧೯೫೦

'ಮಾಡಿ ಮಡಿದವರು' ಕಾದಂಬರಿ ಎಲ್ಲ ದೃಷ್ಟಿಗಳಿಂದಲೂ ಹೆಚ್ಚು ಪರಿಣತವಾದ ಕೃತಿ. ಆಂತರಿಕ ಹೋರಾಟದಿಂದ ಸಂಕೀರ್ಣತೆಯನ್ನು ಮೈಗೂಡಿಸಿಕೊಂಡಿರುವ, ಸ್ವಾತಂತ್ರ್ಯ ಸಮರದ ಆವರಣವನ್ನು ಶಕ್ತರೀತಿಯಲ್ಲಿ ಪುನಃಸೃಜಿಸುವ ವೀರಗಾಥೆ. ನಲವತ್ತೆರಡರ ಪ್ರಚಂಡವಾದ ಚಳುವಳಿ ಇದರ ಆಮೂಲಾಗ್ರ ವಸ್ತು. ಬೆಳಗಾವಿ ಜಿಲ್ಲೆಯಲ್ಲಿ ಶೇಖರ ಮತ್ತು ಅವನ ಬೆಂಬಲಿಗರು ಹೂಡಿದ ಕೆಚ್ಚಿನ ಹೋರಾಟ, ಸ್ವಾತಂತ್ರ್ಯಕ್ಕಾಗಿ ಅವರು ಮಾಡಿ ಮಡಿದ ಪರಿ ಈ ಕಾದಂಬರಿಯಲ್ಲಿ ಮನಮುಟ್ಟುವಂತೆ ಚಿತ್ರಿತವಾಗಿವೆ. ಅವರದು ಪೂರ್ಣವಾಗಿ ಅಹಿಂಸಾತ್ಮಕವಾದ ಚಳುವಳಿಯಲ್ಲ; ಆದರೆ ಅವರು ಹಿಂಸಾರಭಸಮತಿಗಳೂ ಅಲ್ಲ; ಸ್ವರಕ್ಷಣೆಗಾಗಿ ಶಸ್ತ್ರಗಳನ್ನು ಬಳಸುತ್ತಾರೆ. ಗಾಂಧೀಜಿ ಉಪದೇಶಿಸಿದ್ದಕ್ಕಿಂತ ಅವರ ದಾರಿ ತುಸು

ಬೇರೆಯಿರಬಹುದು; ಆದರೆ ಗುರಿಯೊಂದೇ. ಅಂತೂ ತಮ್ಮದೇ ಆದ ರೀತಿಯಲ್ಲಿ ಮಾಡಿ ಮಡಿದವರ ವೀರ ಕರುಣಾನ್ವಿತವಾದ ಕಥೆ ಇಲ್ಲಿದೆ.

ದೇಶವನ್ನೆಲ್ಲ ಬಡಿದೆಬ್ಬಿಸಿದ ಗಾಂಧಿಜಿಯವರ ಅಂಹಿಸಾ ಹೋರಾಟವು ಸ್ವಾತಂತ್ರ್ಯವನ್ನು ಗಳಿಸಿಕೊಳ್ಳುವಲ್ಲಿ ಪ್ರಮುಖ ಅಸ್ತ್ರವಾಗಿತ್ತು. ಇದನ್ನು ಗಾಂಧೀಜಿ, ನೆಹರೂ, ಪಟೇಲ್ ಮೊದಲಾದ ಕಾಂಗ್ರೆಸ್ ಮುಂದಾಳುಗಳು ಬಲ್ಲವರಾಗಿದ್ದರು. ಅವರ ಭಾಷಣಗಳೇ ಹೋರಾಟಗಾರರಿಗೆ ಸ್ಫೂರ್ತಿದಾಯಕವಾಗಿದ್ದವು. ಅವರು ನಡೆಸಿದ ಹರತಾಳ, ಮೆರವಣಿಗೆ, ಪ್ರದರ್ಶನಗಳು ದೇಶದಾದ್ಯಂತ ಹೊಸ ಸಂಚಲನವನ್ನುಂಟು ಮಾಡುತ್ತಿದ್ದವು. ಇಂಥ ಒಂದು ಪ್ರಸಂಗ ಕಾದಂಬರಿಯ ಸೃಷ್ಟಿಗೆ ಕಾರಣವಾಗಿ ಮೂಡಿಬಂದಿದೆ. "ಎ.ಐ.ಸಿ.ಸಿ.ಯಲ್ಲಿ ಗಾಂಧೀಜಿ ಮಾಡಿದ ಭಾಷಣ... 'ನೀವು ಮಾಡಬೇಕು, ಇಲ್ಲವೇ ಮಡಿಯಬೇಕು. ಗಂಡು-ಹೆಣ್ಣು, ಕೂಸು-ಕುನ್ನಿ, ವಿದ್ಯಾರ್ಥಿ-ವಿದ್ಯಾರ್ಥಿನಿಯರು ಎಲ್ಲರೂ ಭಾಗವಹಿಸಬೇಕು, ಈ ಸಂಗ್ರಾಮದಲ್ಲಿ – ಈ ನಮ್ಮ ಅಂತಿಮ ಸಂಗ್ರಾಮದಲ್ಲಿ. ಬ್ರಿಟಿಷ್ ಸರಕಾರದ ಅಧಿಕಾರವನ್ನು ಧಿಕ್ಕರಿಸಿ ಸ್ವಾತಂತ್ರ್ಯವನ್ನು ಸಾರಬೇಕು. Do or Die!" (ಬಸವರಾಜ ಕಟ್ಟೀಮನಿ, ೨೦೧೦, ಪುಟ-೧.) ಎಂಬ ವೀರ ಘೋಷಣೆ ಕೋಟ್ಯಾನುಕೋಟಿ ಭಾರತೀಯರನ್ನು ಸ್ವಾತಂತ್ರ್ಯಕ್ಕೆ ಬಡಿದ್ದೆಬ್ಬಿಸಿತು. ಈ ಭಾಷಣದ ಪ್ರೇರಣೆ ಪಡೆದುಕೊಂಡ ಹೇಮಾ, ಶೇಖರ, ಸಂಗಣ್ಣ, ವಿಶ್ವನಾಥ, ಬಸವಣ್ಣೆಪ್ಪ, ಹಸನಸಾಬಿ ಮೊದಲಾದವರು ದೇಶಕ್ಕಾಗಿ ತಮ್ಮ ಪ್ರಾಣವನ್ನು ಪಣವಿಡಲು ಸಿದ್ಧರಾಗುತ್ತಾರೆ.

ಮಂದಗಾಮಿಗಳು ಆಲಸಿಗಳೂ ಆದ ಕಾಂಗ್ರೆಸ್ ಹಿರಿಯಾಳುಗಳು, ಬ್ರಿಟೀಷ್ ಸರ್ಕಾರದ ಬಿರುದು ಬಾವಲಿಗಳಿಗಾಗಿ ಬಾಯಿಬಿಡುವ ಬಾಬಾಸಾಹೇಬ ದೇಸಾಯಿ ಅಂಥವರ ಹೊಟ್ಟೆಯಲ್ಲಿ ಹುಟ್ಟಿ ಚಳುವಳಿಯ ರಂಗಕ್ಕಿಳಿದ ವಿಶ್ವನಾಥ ದೇಸಾಯಿ, ಹೆಣ್ಣಾಗಿಯೂ ದೌರ್ಬಲ್ಯಗಳನ್ನು ಮೆಟ್ಟಿ ಗಂಡಿನಂತೆ ಸಮರದಲ್ಲಿ ಭಾಗಿಯಾದ ಹೇಮಾ, ಸರ್ಕಾರದ ಸಿ.ಐ.ಡಿ. ಯಾಗಿ ವರ್ತಿಸಿದ ಕೀರ್ತಿನಾಥ, ಸ್ವಜನದ್ರೋಹಿಗಳಾದ ಕುಲಕರ್ಣಿ ರಂಗಣ್ಣ ಮತ್ತು ಗೌಡ, ಅಪ್ರತಿಮ ದೇಶಭಕ್ತರಾದ ಶೇಖರ ಬಾಳಪ್ಪ ಸಂಗಣ್ಣ ಮತ್ತು ಮಠದ ಸ್ವಾಮಿಗಳು- ಹೀಗೆ ಈ ಕಾದಂಬರಿಯ ಪಾತ್ರಪ್ರಪಂಚ ವೈವಿಧ್ಯಮಯವಾಗಿದೆ. ಶೇಖರ ಇಲ್ಲಿ ಚಾಲಕಶಕ್ತಿಯಾಗಿ ಕಂಡರೂ ವಿಶ್ವನಾಥ ಮತ್ತು ಹೇಮಾ, ನಾಯಕ-ನಾಯಕಿಯರ ಸ್ಥಾನ ಗಳಿಸಿಕೊಳ್ಳಬಲ್ಲವರಾಗಿದ್ದಾರೆ. ಅವರ ಪ್ರಕರಣವನ್ನು ಲೇಖಕರು ಮಾನವೀಯವಾಗಿ ಚಿತ್ರಿಸಿದ್ದಾರೆ; ವಿಶ್ವನಾಥನ ಮನೋಗತಿಯನ್ನಂತೂ ಸೊಗಸಾಗಿ ಗುರುತಿಸಿದ್ದಾರೆ.

"ಚಳುವಳೀ ಮಾಡಾಕ ಮಾತ್ರ ಬೇಕು. ಸಾಯಾಕ ಮಾತ್ರ ಬ್ಯಾಡಂದರ ಹ್ಯಾಂಗಾದೀತು? ಸಾಯಿರಿ, ಸಾಯಿರಿ, ಸಾಯಿರಿ" ಎಂದು ತಿರಸ್ಕಾರದಿಂದ ನುಡಿಯುತ್ತ ಫೌಜುದಾರ

ಹೊರಟುಹೋದ. ಲಿಂಗಣ್ಣನನ್ನು ಹಿಡಿದುಕೊಂಡು ಪೋಲೀಸರು ಹೊರಟು ಹೋದರು. (ಬಸವರಾಜ ಕಟ್ಟೀಮನಿ, ೨೦೧೦, ಪುಟ-೭೭.) ಎಂಬಂಥ ಮಾತುಗಳಲ್ಲಿ ಸ್ವಾತಂತ್ರ್ಯ ಹೋರಾಟಗಾರರ ಬಗೆಗೆ ಪೋಲೀಸರಲ್ಲಿದ್ದ ಮನೋಧೋರಣೆ ಎಂತಹದು ಎಂದು ಗುರುತಿಸಬಹುದು. ಹೋರಾಟವೆಂದರೆ ಸಾವು ಎಂದು ಪೋಲೀಸರು ಹೋರಾಟಗಾರರನ್ನು ಬೇದರಿಸುವ, ಅವರ ಮೇಲೆ ದರ್ಪತೋರುವ ಚಿತ್ರಣಗಳು ಪ್ರಸ್ತುತ ಕಾದಂಬರಿಯಲ್ಲಿ ಸೆಳೆಯುತ್ತವೆ.

"ಸ್ವಾತಂತ್ರ್ಯಕ್ಕಾಗಿ ಕೊನೆಯ ಹೋರಾಟ ನಡೆದಿರುವ ಈ ಸಂದರ್ಭದಲ್ಲಿ ದೇಶದಲ್ಲೆಲ್ಲ ಸಾವಿರಾರು ವೀರರು ಪ್ರಾಣಾರ್ಪಣೆ ಮಾಡುತ್ತಿದ್ದ ಸಮಯದಲ್ಲಿ ತನ್ನೆಲ್ಲ ಶಕ್ತಿಯನ್ನೂ ಬುದ್ಧಿಯನ್ನೂ ಹೋರಾಟಕ್ಕಾಗಿಯೇ ವಿನಿಯೋಗಿಸುವುದು ತನ್ನ ಕರ್ತವ್ಯವಾಗಿರುವಾಗ ತಾನು ಹೇಮಾವತಿಯ ಬಗ್ಗೆ ಈ ರೀತಿ ಯೋಚಿಸುತ್ತ ಕುಳಿರುವುದು ಉಚಿತವಲ್ಲ" (ಬಸವರಾಜ ಕಟ್ಟೀಮನಿ, ೨೦೧೦, ಪುಟ-೧೩೬.) ಎಂದು ಶೇಖರನು ತನ್ನ ಹೋರಾಟಕ್ಕೆ ಪ್ರೀತಿ ಅಡ್ಡಿಯಾಗಬಹುದೆಂದು ಸ್ವಗತವಾಗಿ ಹೇಳಿಕೊಳ್ಳುವ ಮಾತುಗಳಲ್ಲಿ ಸ್ವಾತಂತ್ರ್ಯಕ್ಕೆ ತಾನು ಹೋರಾಡುವಾಗ ಪ್ರಾಣಾರ್ಪಣೆ ಮಾಡುವ ಸಂದರ್ಭ ಬಂದರೂ ಹಿಂಜರೆಯಬಾರದು ಎಂಬ ನಿರ್ಧಾರವನ್ನು ಮಾಡುತ್ತಾನೆ.

ಕಾದಂಬರಿಯಲ್ಲಿ ಒಂದು ಕಡೆ ಸ್ವಾತಂತ್ರ್ಯಕ್ಕೆ ಪ್ರಾಣಾರ್ಪಣೆಯ ತುಡಿತಗಳು ವ್ಯಕ್ತವಾಗುತ್ತಿದ್ದರೆ ಮತ್ತೊಂಡು ದಿಶೆಯಲ್ಲಿ ಗಾಂಧೀಜಿಯವರ ಆದರ್ಶಪ್ರಾಯ ಹೋರಾಟದ ಹೇಳಿಕೆಗಳು ಆಗಾಗ ಹೋರಾಟಗಾರರನ್ನು ಎಚ್ಚರಿಸುವ ಚಿತ್ರಣವಿದೆ. "ಕಷ್ಟದ ಕೆಲಸವನ್ನು ಮಾಡಿ ತೋರಿಸುವುದರೊಳಗ ಗಂಡಸುತನ ಐತಿ ಮಸ್ತೈತೆ. ಎಂಥಾ ಪ್ರಸಂಗ ಬಂದರೂ ನಾವು ಅಹಿಂಸೆಯನ್ನು ಬಿಡಬಾರದು. ಚಳುವಳಿಯೊಳಗೆ ನಾವು ಹಿಂಸೆಯನ್ನು ಉಪಯೋಗಿಸಿದೆವು ಅಂತ ಗಾಂಧಿ ಅವರಿಗೆ ಗೊತ್ತಾದರ ಎಷ್ಟು ನೊಂದುಕೋಬಹುದು ಅವರು! ಹಿಂದೆ ಚೌರಿ ಚೌರಾದೊಳಗ ಹಿಂಸೆಯಿಂದ ನೊಂದು ಚಳವಳಿಯನ್ನೇ ನಿಲ್ಲಿಸಿ ಬಿಟ್ಟಿದ್ದರು. ಈಗಲೂ ಹಾಂಗ ಆಗಬಾರದು, ಅಹಿಂಸಾತ್ಮಕವಾಗೇ ನಡೀಬೇಕು ಈ ಚಳವಳಿ. ನಮ್ಮ ಜಿಲ್ಲೆಯೊಳಗಂತೂ ಎಲ್ಲಿಯೂ ಹಿಂಸೆ ನಡೀಬಾರದು" (ಬಸವರಾಜ ಕಟ್ಟೀಮನಿ, ೨೦೧೦, ಪುಟ-೧೪೭.) ಎಂಬಂಥ ಮಾತುಗಳು ಗಾಂಧೀಜಿಯವರ ಅಹಿಂಸಾವಾದವನ್ನು ಎತ್ತಿ ಹೇಳುತ್ತಾರೆ.

ಮೊದಲು ಯಾವ ಗೊತ್ತುಗುರಿಯೂ ಇಲ್ಲದಿದ್ದ ವಿಶ್ವನಾಥ ಚಳುವಳಿಗೆ ಸೇರಿದ್ದು ಹೇಮಾಳ ವ್ಯಕ್ತಿತ್ವದ ಆಕರ್ಷಣೆಯಿಂದ. 'ನೀವು ಒಂದು ಮಾತು ಹೇಳಿದರೆ ಯಮನ ದವಡೆಯೊಳಗೆ ಹೋಗುವುದಕ್ಕೂ ಸಿದ್ಧನಾಗಿದ್ದೇನೆ ನಾನು' ಎಂದವನು ಹೇಮಾಳಿಗೆ ಹೇಳುತ್ತಾನೆ.

ಆದರೆ ಕಡೆಕಡೆಗೆ ಅವನ ಹೃದಯ ಅವಳ ಆಕರ್ಷಣೆಯಿಂದ ಮುಕ್ತವಾಗಿ ಚಳುವಳಿಯಲ್ಲಿ ಲೀನವಾಗುತ್ತದೆ; ಅದಕ್ಕೆ ಹೇಮಾಳ ಮನೋದಾರ್ಢ್ಯವೆ ಕಾರಣ. ಅವಳು ದೌರ್ಬಲ್ಯವಶಳಾಗಿದ್ದಲ್ಲಿ ಇಬ್ಬರೂ ಪತನಗೊಳ್ಳಬಹುದಿತ್ತು. ಇಬ್ಬರೂ ದೈಹಿಕವಾಗಿ ನಿಕಟವಾಗಿದ್ದುಕೊಂಡು, ರಹಸ್ಯಸ್ಥಳಗಳಲ್ಲಿ ಕೆಲಸಮಾಡಬೇಕಾದ ಪ್ರಸಂಗಗಳಲ್ಲಿ ಪ್ರಲೋಭನೆಗೊಳಗಾಗದಿರಲಿಲ್ಲ; ಆದರೆ ಕಣ್ಣ ಮುಂದಿನ ಆದರ್ಶ ಅವರನ್ನು ಸ್ವಾರ್ಥದಿಂದ ಸಂರಕ್ಷಿಸುತ್ತದೆ.

ಕಲ್ಲಾಪುರದ ಜನಾನುರಾಗಿ ಯುವಕ ಶೇಖರನು ೧೯೪೨ರ ಅಗಸ್ಟ್‌ನ ಮುಂಬೈ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿ, 'ಮಾಡು ಇಲ್ಲವೆ ಮಡಿ' ಎಂಬ ಸಂದೇಶದೊಂದಿಗೆ ಬೆಳಗಾವಿಗೆ ಬರುತ್ತಾನೆ. ಬೆಳಗಾವಿ ವಕೀಲ, ಕಾಂಗ್ರೆಸ್ ಮುಂದಾಳು ಶಾಮರಾಯರ ಮಗಳು ಹೇಮಾ ಕೂಡ ಇದೇ ಸಮಯದಲ್ಲಿ ಪುಣೆಯಲ್ಲಿನ ಕಾಲೇಜು ವ್ಯಾಸಂಗಕ್ಕೆ ಶರಣು ಹೊಡೆದು ಹಿಂದುಸ್ಥಾನದ ಕೋಟ್ಯಾವಧಿ ಜನದಂತೆ ಸ್ವಾತಂತ್ರ್ಯ ಸಮರಕ್ಕೆ ಧುಮುಕುತ್ತಾಳೆ. ಇದಕ್ಕೆ ಅವಳ ತಂದೆ ವಕೀಲ ಶಾಮರಾಯರ ವಿರೋಧವಿದೆ. ಶಾಮರಾಯರಾದರೋ ಸ್ವತಃ ಕಾಂಗ್ರೆಸ್ ಧುರೀಣರು. ಆದರೆ ಈಗೀಗ ಅವರು ಚಳುವಳಿಯಲ್ಲಿ ಉತ್ಸಾಹವನ್ನು ಕಳೆದುಕೊಂಡಿದ್ದಾರೆ. ಮಗಳು ಚಳುವಳಿಯಲ್ಲಿ ತೊಡಗುವುದು ಇಷ್ಟವಿಲ್ಲ. ತಾನೇ ಕೆಲಸ ಕೊಡಿಸಿದ ಸಿ.ಐ.ಡಿ. ಅಧಿಕಾರಿ ಕೀರ್ತಿನಾಥನೊಂದಿಗೆ ಅವಳ ಮದುವೆಯನ್ನು ಮಾಡುವ ಹಂಚಿಕೆಯಲ್ಲಿ ಅವರಿದ್ದಾರೆ. ಅವರು ಮುಂಬೈ ಅಧಿವೇಶನಕ್ಕೆ ಹೋಗಿರುತ್ತಾರಾದರೂ ಅಲ್ಲಿ ಸಮಾವೇಶಗೊಂಡ ಕರ್ನಾಟಕದ ಚಳುವಳಿಗಾರರಿಗೆ ಯಾವುದೇ ಮಾರ್ಗದರ್ಶನ ನೀಡುವುದಿಲ್ಲ. ಈಗ ಬೆಳಗಾವಿ ಜಿಲ್ಲೆಯನ್ನು ಕಾರ್ಯಕ್ಷೇತ್ರ ಮಾಡಿಕೊಂಡ ಶೇಖರನೇ ವಕೀಲರ ಮಗಳಿಗೆ ಈ ಚಳುವಳಿಯ ಸ್ವರೂಪ ದರ್ಶನ ಮಾಡಿಕೊಡುತ್ತಾನೆ. ಇದೊಂದು ಯುದ್ಧ, ಆದರೆ ಸೇನಾಪತಿ ಸೆರೆ ಸಿಕ್ಕ ಮೇಲೆ ನಡೆಸತಕ್ಕ ಯುದ್ಧ. ಆದ್ದರಿಂದ ಇದು ಇತರ ಚಳುವಳಿಗಳಿಗಿಂತ ಭಿನ್ನ ಶೇಖರ, ಹೇಮಾ ಮತ್ತು ಅದೇ ಉತ್ಸಾಹದಲ್ಲಿ ಅವರೊಂದಿಗೆ ಚಳುವಳಿಗೆ ಧುಮುಕಿದ ದೇಸಾಯಿ ವಿಶ್ವನಾಥ ಸೇರಿ ತಮ್ಮ ಹೋರಾಟದ ಕಾರ್ಯತಂತ್ರವನ್ನು ರೂಪಿಸುತ್ತಾರೆ. ಇವರೊಂದಿಗೆ ಕಲ್ಲಾಪುರದ ಅನೇಕ ವ್ಯಕ್ತಿಗಳಿರುತ್ತಾರೆ. ಒಂದು ಕಡೆ ಇವರಾದರೆ ಇನ್ನೊಂದು ಕಡೆ ಬ್ರಿಟೀಷರು, ಅವರ ಹಸ್ತಕರಾದ ಕುಲಕರ್ಣಿ ರಂಗಣ್ಣ ಮತ್ತು ಸಿ.ಐ.ಡಿ. ಕೀರ್ತಿನಾಥ ಮುಂತಾದವರು.

ಈ ಕಾದಂಬರಿಯಲ್ಲಿ ಪಾತ್ರಗಳ ನಡುವೆ ನೆರಳು ಬೆಳಕಿನ ತಂತ್ರವು ಚಿತ್ರಣಗೊಂಡಿದೆ. ಮುಖಾಮುಖಿಯಾಗಿ ಪಾತ್ರಗಳು ಕಾದಂಬರಿಯನ್ನು ವಿಸ್ತರಿಸುತ್ತಾ ಹೋಗುತ್ತವೆ. ಚಳುವಳಿಯ ನಿರ್ದೇಶಕರ ಗೈರು ಹಾಜರಿಯಲ್ಲಿ ದೇಶದ ನಾಡಿನ ಉದ್ದಗಲಕ್ಕೆ ಚಳುವಳಿಗಾರರು ತಮತಮಗೆ ತಿಳಿದ ರೀತಿಯಲ್ಲಿ ಹೋರಾಟದ ಕಾರ್ಯತಂತ್ರವನ್ನು ರೂಪಿಸಿಕೊಂಡಿದ್ದಕ್ಕೆ ಅನುಗುಣವಾಗಿ

ಇಲ್ಲಿ ಶೇಖರನ ಕಾರ್ಯಚಟುವಟಿಕೆ ನಡೆಯುತ್ತದೆ. ಇವರ ಹೋರಾಟ ಒಂದು ರೀತಿಯಲ್ಲಿ ಗೆರಿಲ್ಲಾ ಯುದ್ಧದ ಮಾದರಿಯನ್ನು ನೆನಪಿಸುತ್ತದೆ. ಪಿಸ್ತೂಲನ್ನು ಹಿಡಿದಿರುವ ಆದರೆ ಅಹಿಂಸಾತ್ಮಕ ಸ್ವರೂಪದ ಹೋರಾಟವನ್ನು ಇಲ್ಲಿ ಕಾಣುತ್ತೇವೆ.

ಇಡೀ ಕಾದಂಬರಿ ಬೆಳಗಾವಿ ಜಿಲ್ಲೆ, ಶೇಖರ, ಹೇಮಾ, ವಿಶ್ವನಾಥ, ಕಲ್ಲಾಪುರದ ಮಾಸ್ತರ ಶಂಕರಪ್ಪ, ಬಾಳಪ್ಪ, ಪಯಲ್ವಾನ್ ಸಂಗಣ್ಣ, ನೇಕಾರ ಹುಸೇನಸಾಬರ ಪಾತ್ರಗಳು ಕಣ್ಣು ಕಟ್ಟುತ್ತವೆ. ಈ ಗುಂಪು ಬ್ರಿಟೀಷರ, ಪೋಲೀಸರ ಕಣ್ತಪ್ಪಿಸಿ ಟಪ್ಪಾಲು ಲೂಟಿ, ಸರಕಾರಿ ಕಾಗದ ಪತ್ರಗಳನ್ನು ಸುಡುವುದು, ಬಂದೂಕು ಅಪಹರಣ, ಸರಕಾರೀ ಕಟ್ಟಡ ಸುಡುವಿಕೆ ಕೆಲಸದಲ್ಲಿ ಯೋಜನೆಗಳನ್ನು ರೂಪಿಸುತ್ತಾ ಅವುಗಳನ್ನು ಕಾರ್ಯಗತಗೊಳಿಸುತ್ತಾ ತಮ್ಮ ಪ್ರತಿಭಟನೆಯನ್ನು ತೋರುತ್ತಾರೆ. ಈ ಹೋರಾಟದಲ್ಲಿ ವಿಶ್ವನಾಥ, ಹೇಮಾ, ಶೇಖರ ಮುಂಚೂಣಿಯಲ್ಲಿ ಪೋಲೀಸರ ಗುಂಡಿಗೆ ಬಲಿಯಾಗುತ್ತಾರೆ. ಕಾದಂಬರಿಗೆ ಈ ಮೂಲಕ ಕೊನೆಯ ಸ್ಪರ್ಶವನ್ನು ಕಟ್ಟೀಮನಿಯವರು ನೀಡುತ್ತಾರೆ. ಕಾದಂಬರಿಯುದ್ದಕ್ಕೂ ಪೋಲೀಸರಿಂದಾಗುವ ದೌರ್ಜನ್ಯಗಳು, ಅತ್ಯಾಚಾರಗಳು ಕಟ್ಟೀಮನೀಯವರಲ್ಲಿ ಎದ್ದುಕಾಣುವ ಅಂಶಗಳಾಗಿವೆ. ಇದರ ಕುರಿತು; “ಪೋಲೀಸರ ಬದುಕನ್ನಂತೂ ಕನ್ನಡದಲ್ಲಿ ಕಟ್ಟೀಮನಿಯವನ್ನು ಬಿಟ್ಟರೆ ಮತ್ತಾರು ತೋರಿಸಿದಂತಿಲ್ಲ”(ದೇಜಗೌ ಮತ್ತು ಸಿಪಿಕೆ, ೧೯೬೯, ಪುಟ-೧೬೭.) ಎಂದು ಸಿ.ಪಿ.ಕೆ. ಅವರು ಕಟ್ಟೀಮನಿಯವರ ಬದುಕು-ಬರಹದಲ್ಲಿ ವಿಮರ್ಶಿಸುತ್ತಾರೆ.

ಪ್ರತಿಯೊಬ್ಬ ಹೋರಾಟಗಾರನು ತನ್ನ ಪ್ರಾಣವನ್ನು ದೇಶಕ್ಕೆ ಸಮರ್ಪಿಸುವಲ್ಲಿ ಯಾವುದೇ ಅಳಕಿಲ್ಲ, ಭಯವಿಲ್ಲ, ಅವರಿಗೆ ದೇಶದ ಸ್ವಾತಂತ್ರ್ಯವೊಂದೇ ಗುರಿ. ಇಂತಹ ಅನೇಕ ಸಂದರ್ಭಗಳನ್ನು ಲೇಖಕರು ಓದುಗನಲ್ಲಿ ಸ್ವಾತಂತ್ರ್ಯದ ಕಿಡಿಯನ್ನು ಹತ್ತಿಸುತ್ತಾರೆ. ಕಾದಂಬರಿಯಲ್ಲಿ ಬರುವ ಪ್ರಮುಖ ಹೋರಾಟಗಾರ ವಿಶ್ವನಾಥನ ಸಾವನ್ನು ಲೇಖಕರು ಎಷ್ಟು ಸರಳವಾಗಿ ಸೆರೆಡಿದಿಟ್ಟಿದ್ದಾರೆ. ಸಂಗಣ್ಣ, ಹೇಮಾ ಇಬ್ಬರೂ ಕಾಳಮ್ಮನ ಗುಡಿಯಲ್ಲಿ ಶೇಖರನಿಗಾಗಿ ಕಾಯುತ್ತಿದ್ದರು. ಇವರನ್ನು ಅರಸುತ್ತಾ ಪೋಲೀಸರು ಅಲೆಯುತ್ತಿದ್ದರು. ಭಿನ್ನ ಭಿನ್ನ ವೇಷಗಳನ್ನು ಹಾಕಿಕೊಂಡು ಹೋರಾಟಗಾರರನ್ನು ಹತ್ತಿಕ್ಕಲು ಹವಣಿಸುತ್ತಿದ್ದ ಪೋಲೀಸರಿಂದ ತಪ್ಪಿಸಿಕೊಳ್ಳುವುದೇ ಒಂದು ಸಾಹಸವಾಗಿತ್ತು. ಪೋಲೀಸರ ಗುಂಡಿಗೆ ಬಲಿಯಾದ ವಿಶ್ವನಾಥನನ್ನು ಹುಡುಕುತ್ತಾ ಹೋದ ಶೇಖರನನ್ನು ಹೇಮಾ “ವಿಶ್ವನಾಥನಿಗೇನಾಯ್ತು ಶೇಖರಣ್ಣ?” ಎಂದು ಕೇಳಿದಳು. ಆಗ ಶೇಖರ “ಆತ ತನ್ನ ಕೆಲಸ ತೀರಿಸಿ ಸ್ವರ್ಗಕ್ಕೇರಿದ ಹೇಮಾ, ಹುತಾತ್ಮ ಆದ...” (ಬಸವರಾಜ ಕಟ್ಟೀಮನಿ, ಪುಟ-೧೯೭.) ಎನ್ನುವ ಮಾತುಗಳಲ್ಲಿ ಎಷ್ಟೊಂದು ನಿರಾಳತೆಯನ್ನು ಕಾಣುತ್ತೇವೆ. ದೇಶಕ್ಕಾಗಿ ‘ಮಾಡು ಇಲ್ಲವೆ ಮಡಿ’ ಎಂಬ ಗಾಂಧೀಜಿಯವರ ಮಾತನ್ನು ವಿಶ್ವನಾಥ ಸಾಧಿಸಿದ ಎಂಬ ತೃಪ್ತಿಯನ್ನು

ಶೇಖರನಲ್ಲಿ ಕಾಣುತ್ತೇವೆ. ಇದೇ ನಾಲ್ಕು ತಾಸಿನ ಹಿಂದೆ ನಮ್ಮೊಂದಿಗೆ ಇದ್ದ ವಿಶ್ವನಾಥ ಈಗ ಸ್ವರ್ಗ ಸೇರಿ ಹುತಾತ್ಮ ಎಂಬ ಪದವಿಯನ್ನು ಪಡೆದ. ಹಾಗೆಯೇ ಹೇಮಾನ ಸಾವು ಮತ್ತು ಅವಳ ಕಳೇಬರದ ಮೇಲೆ ಪ್ರಾಣಬಿಟ್ಟ ಶೇಖರ ಇವರೆಲ್ಲರೂ 'ಮಾಡು ಇಲ್ಲವೆ ಮಡಿ' ಘೋಷವಾಕ್ಯದಂತೆ ಮಡಿದರು. ಸ್ವಾತಂತ್ರ್ಯಕ್ಕಾಗಿ ಹುತಾತ್ಮರಾದರು ಎಂಬ ಸಾರ್ಥಕದ ನಿಟ್ಟುಸಿರನ್ನು ಇಡಿ ಕಾದಂಬರಿಯುಲ್ಲಿ ಕಾಣುತ್ತವೆ.

ಒಟ್ಟಿನಲ್ಲಿ ಹೇಳುವುದಾದರೆ: ಕಾದಂಬರಿಯಲ್ಲಿ ಪ್ರಾರಂಭದಿಂದ ಹಿಡಿದು ಕೊನೆಯವರೆಗೂ ಗಾಂಧಿಜಿಯವರು ಮಾಡಿದ 'ಮಾಡು ಇಲ್ಲವೆ ಮಡಿ' ಭಾಷಣವು ಶೇಖರ, ಶಂಕ್ರಪ್ಪ, ಹೇಮಾ, ವಿಶ್ವನಾಥ ದೇಸಾಯಿ, ಸಂಗಣ್ಣ ಮುಂತಾದ ಯುವಪಡೆಯ ಮೇಲೆ ತುಂಬಾ ಪ್ರಭಾವವನ್ನು ಮಾಡಿದೆ. ಅವರ ಆಸೆಯನ್ನು, ಹೋರಾಟದ ಸ್ವರೂಪವನ್ನು ಕಾರ್ಯರೂಪಕ್ಕೆ ತರುವಲ್ಲಿ ಹೋರಾಟಗಾರರು ಪ್ರಯತ್ನಿಸಿರುವುದಂತೂ ವಾಸ್ತವವಾಗಿ ಚಿತ್ರಣಗೊಂಡಿದೆ. ಸರಳರೇಖಾತ್ಮಕವಾಗಿ, ಕ್ರಮಾನುಗತವಾಗಿ ನಡೆಯುವ ಹೋರಾಟಗಾರರ ಚಳುವಳಿಗಳು 'ಮಡಿ'ಯುವತ್ತಲೇ ಸಾಗುತ್ತವೆ. ತಾತ್ಕಾಲಿಕ ಜಯವು ಅವರನ್ನು ತೃಪ್ತಿಗೊಳಿಸುವುದಿಲ್ಲ. ಅಹಿಂಸೆಯನ್ನು ಪಾಲಿಸುವಲ್ಲಿ ಅವರ ಹೋರಾಟ ಒಮ್ಮೊಮ್ಮೆ ಧುಮ್ಮಿಕ್ಕಿ ಹರಿದು ಮತ್ತೊಮ್ಮೆ ಶಾಂತವಾಗಿ ಪ್ರವಹಿಸುತ್ತದೆ. ೧೯೪೨ರಲ್ಲಿ ನಡೆದ ಕ್ವಿಟ್ ಇಂಡಿಯಾ ಚಳುವಳಿಯನ್ನು ವಸ್ತುವಾಗಿಸಿಕೊಂಡು ಕಟ್ಟೀಮನಿಯವರು ಅನೇಕ ಕಥೆಗಳನ್ನು ಹೆಣೆದಿದ್ದಾರೆ. ಆದರೆ 'ಮಾಡಿ ಮಡಿದವರು' ಕಾದಂಬರಿಯಲ್ಲಿ ಮೂಡಿಬಂದ ಸ್ವಾತಂತ್ರ್ಯದ ತುಡಿತವು ಭಿನ್ನವೆನಿಸುತ್ತದೆ. ವಿಮರ್ಶಕರು ಹೇಳುವಂತೆ ಸ್ವಾತಂತ್ರ್ಯದೆಡೆಗೆ' ಕಾದಂಬರಿಯ ಮುಂದುವರಿದ ಭಾಗವಾಗಿದೆ. ಇಲ್ಲೂ ಶೇಖರನೇ ಕಥಾನಾಯಕ. ಚಳುವಳಿಯನ್ನು ಪ್ರಖರ ಸ್ಥಿತಿಗೆ ಕೊಂಡೊಯ್ಯುವ ಹೋರಾಟಗಾರ. ಆಶ್ಚರ್ಯವೆಂದರೆ ಈ ಶೇಖರನ ಮುಂದೆ ಕಮ್ಯುನಿಸ್ಟ್ ವಿಚಾರಗಳು ಎದುರಾಗುವುದಿಲ್ಲ. ಸ್ವಾತಂತ್ರ್ಯದೆಡೆಗೆ ಕಾದಂಬರಿಯಲ್ಲಿ ಚರ್ಚಿತವಾಗುವ ತಾತ್ವಿಕತೆ, ರಾಜಕೀಯ ಸಿದ್ಧಾಂತ, ಸಾಮಾಜಿಕ ಆರ್ಥಿಕ ವಿಶ್ಲೇಷಣೆ ಇಲ್ಲಿ ನಿಲುಕುವುದಿಲ್ಲ. ಎಂಬುದನ್ನು ಅಲ್ಲಗಳೆಯಬೇಕಾಗುತ್ತದೆ.

ಪ್ರಗತಿಶೀಲ ಸಾಹಿತ್ಯದಲ್ಲಿ ಬಸವರಾಜ ಕಟ್ಟೀಮನಿಯವರಿಗೆ ವಿಶಿಷ್ಟವಾದ ಸ್ಥಾನವಿದೆ. ಆ ಧೋರಣೆಗಳ ಅಪ್ಪಟ ಅನುಯಾಯಿಗಳಾಗಿ ಬಸವರಾಜ ಕಟ್ಟೀಮನಿಯವರು ದೇಶಕ್ಕೆ ಹಾಗೂ ಅದರ ಆಗುಹೋಗುಗಳಿಗೆ ಬದ್ಧರಾದವರು. ಹಾಗಾಗಿಯೇ ಅವರು ಅನೇಕ ಸ್ವಾತಂತ್ರ್ಯ ಹೋರಾಟದ ಕಥೆ-ಕಾದಂಬರಿಗಳನ್ನು ಬರದಿರುವುದುಂಟು. ಮಾಡಿಮಡಿದವರು ಕಾದಂಬರಿ ಗಾಂಧೀಜಿಯವರ ಸಂದೇಶದ ಕೂಸು

ಅನೇಕ ಹುತಾತ್ಮರ ಕಣ್ಣೀರಿನ ರಸಾಯನವೇ ಮಾಡಿ ಮಡಿದವರು. ಇದೊಂದು ಹುತಾತ್ಮರ ಕಥಾಕೋಶವೆಂದರೆ ತಪ್ಪಾಗಲಾರದು. ಕಾದಂಬರಿಯಲ್ಲಿ ವಿಶ್ವನಾಥ ದೇಸಾಯಿ, ಹೇಮಾ, ಕೀರ್ತಿನಾಥ, ಸಂಗಣ್ಣ ಮೊದಲಾದ ಪಾತ್ರಗಳ ಮೂಲಕ ಕಾದಂಬರಿಗೆ ಹೆಚ್ಚಿನ ಕಸುವು ಬಂದಿದೆ.

**ನರಗುಂದ ಬಂಡಾಯ (೧೯೫೬)**

'ಸಮರಭೂಮಿ' ಇದು ಕಟ್ಟೀಮನಿಯವರ ಪ್ರಥಮ ಐತಿಹಾಸಿಕ ಕಾದಂಬರಿ. ಲೇಖಕರು "... ಇಂದು ಧಾರವಾಡ ಜಿಲ್ಲೆಯಲ್ಲೊಂದು ಪಟ್ಟಣವಾಗಿರುವ ನರಗುಂದಕ್ಕೆ ಅಂದು ದತ್ತು ಸ್ವೀಕಾರಕ್ಕೆ ಅನುಮತಿ ದೊರೆಯಲಿಲ್ಲವಾದುದರಿಂದ ಆತ (ಬಾಬಾಸಾಹೇಬ) ಕೆರಳಿ ಬಂಡಾಯದ ಬಾವುಟವೆತ್ತಿದ. ಆ ಚಾರಿತ್ರಿಕ ಬಂಡಾಯವೇ ಈ ಕಾದಂಬರಿಯ ವಸ್ತುವಾಗಿದೆ" ಎಂದು ಕಾದಂಬರಿಯ ವಸ್ತುವಿನ ವಿಷಯವಾಗಿ ಹೇಳುತ್ತಾರೆ. ಕಾದಂಬರಿಯಲ್ಲಿ ಬರೆಯುವ ಮೊದಲು ನರಗುಂದಕ್ಕೆ ಹೋಗಿ ಅಂದಿನ ಹೋರಾಟದಲ್ಲಿ ಭಾಗಿಗಳಾಗಿದ್ದ ಜನರ ವಂಶಜರನ್ನು ಕಂಡು, ವಿಷಯ ಸಂಗ್ರಹಿಸಿ ಕೃತಿ ರಚಿಸಿರುವುದಾಗಿ ಹೇಳುತ್ತಾರೆ. ಇದು ಕಟ್ಟೀಮನಿಯವರಲ್ಲಿದ್ದ ಐತಿಹಾಸಿಕ ಔಚಿತ್ಯ.(ಬಸವರಾಜ ಕಟ್ಟೀಮನಿಯವರ ಸಮಗ್ರ ಸಾಹಿತ್ಯ, ೨೦೧೪, ಪುಟ-೨೦ ಪ್ರಸ್ತಾವನೆ)

ಕಟ್ಟೀಮನಿಯವರ ಪ್ರಮುಖ ಕಾದಂಬರಿಗಳಲ್ಲಿ ನರಗುಂದ ಬಂಡಾಯ (ಸಮರಭೂಮಿ) ಪ್ರಮುಖವಾದುದು. ಇದು ದೇಶೀಯ ಸಂಸ್ಥಾನಗಳು ಆಂಗ್ಲರ ವಿರುದ್ಧ ಹೇಗೆ ಬಂಡಾಯ ಸಾರಿದವು ಎಂಬುದನ್ನು ತಿಳಿಸುತ್ತದೆ. ಈಗಾಗಲೇ ಭಾರತದಲ್ಲಿ ಬಂಡಾಯದ ರಾಜಧಾನಿ ಎಂದೇ ಕರೆಯಲ್ಪಡುವ ನರಗುಂದದ ಇತಿಹಾಸವನ್ನು ಇದು ಒಳಗೊಂಡಿದೆ. ಬಾಬಾಸಾಹೇಬ ಎಂದೆ ಈ ನಾಡಿನಲ್ಲಿ ಹೆಸರಾಗಿರುವ ಭಾಸ್ಕರರಾವ್ ಭಾವೆ ನರಗುಂದಕರ ಎಂಬ ದೇಶಿ ಸಂಸ್ಥಾನದ ಅರಸನ ಸ್ವಾತಂತ್ರ್ಯ ಹೋರಾಟದ ಚಿತ್ರಣವನ್ನೂ ಇದು ಕಟ್ಟಿಕೊಡುತ್ತದೆ. ದತ್ತು ಮಕ್ಕಳಿಗೆ ಹಕ್ಕಿಲ್ಲ ಎಂಬ ಬ್ರಿಟೀಷ ಗೌರ್ನರ್ ಲಾರ್ಡ ಡಾಲ್ ಹೌಸಿಯ ನೀತಿ ಈ ಸಂಸ್ಥಾನಕ್ಕೂ ತಟ್ಟುತ್ತದೆ. ಮ್ಯಾನ್ಸನ್ ರುಂಡ ಕತ್ತರಿಸಿದ್ದೂ ಬಿಟ್ಟರೆ ಉಳಿದಂತೆ ಆಂಗ್ಲರ ವಿರುದ್ಧ ಯಶ ಕಾಣದಿರುವುದು ಗೋಚರವಾಗುತ್ತದೆ. ಇದಕ್ಕೆ ಆಂತರಿಕ ಬೇಗುದಿ ಹಾಗೂ ದೇಶಿಗರ ವಿಶ್ವಾಸ ದ್ರೋಹ ಕಾರಣವಾಗಿದೆ. ಇದರಿಂದ ವಿಚಲಿತನಾದ ಭಾಸ್ಕರಾವ್ ಭಾವೆ ಹೆಂಡತಿ ಮಕ್ಕಳಿಗೆ 'ನಿಮ್ಮ ದಾರಿ ನೀವು ನೋಡಿಕೊಳ್ಳಿ' ಎಂದು ಹೇಳಿ, ತಾನು ಸಂಸ್ಥಾನವನ್ನು ಬಿಟ್ಟು ಹೋಗುವುದು ಇಲ್ಲಿ ಕಂಡುಬರುತ್ತದೆ. ಭಾಸ್ಕರರಾವ್ ಭಾವೆಯ ಸುತ್ತ ಇರುವ ಆಡಳಿತ ವ್ಯವಸ್ಥೆ ಆತನನ್ನು ಅಧೋಗತಿಗೆ ತಳ್ಳುತ್ತದೆ. ಹೋರಾಟದಲ್ಲಿ ಯಶ ಕಾಣದೇ

ಬ್ರೀಟೀಷರ ಬಂಧಿಯಾಗುವ ಭಾಸ್ಕರರಾವ್ ಭಾವೆ ಕೊನೆಗೆ ಬೆಳಗಾವಿಯಲ್ಲಿ ಗಲ್ಲಿಗೇರಲ್ಪಡುತ್ತಾನೆ. ಭಾವೆ ಗಲ್ಲಿಗೇರಿದರೂ ನರಗುಂದ ಬಂಡಾಯ ಮಾತ್ರ ಇಂದಿಗೂ ಮತ್ತೆ ಮತ್ತೆ ಸ್ವಾತಂತ್ರ್ಯ ಹೋರಾಟದ ನೆನಪನ್ನು ಒತ್ತಿ ಒತ್ತಿ ಹೇಳುತ್ತದೆ.

ಇಲ್ಲಿ ಬರುವ ಪಾತ್ರಗಳು ಮುಖ್ಯವಾಗಿ ನರಗುಂದ ಸಂಸ್ಥಾನ ಹಾಳಾಗಲು ಕಾರಣರಾದ ಬನ್ಯಾಬಾಪು, ಕೃಷ್ಣಾಜಿ ಪಂಥ, ಅಲ್ಪ ಸ್ವಲ್ಪ ಒಳ್ಳೆಯವನಾದ ಮಂತ್ರಿ ರಾಮರಾಯರು, ಬಲಗೈ ಬಂಟ ವಿಷ್ಣು ಕುಲಕರ್ಣಿ ಪ್ರಮುಖವಾದ ಪಾತ್ರವಹಿಸಿದ್ದಾರೆ. ಭಾಸ್ಕರರಾವ್‌ಭಾಮೆ ಹೋರಾಟದ ಆರಂಭದಿಂದ ಅಂತ್ಯದವರೆಗೂ ಆಪ್ತ ಸೇವಕ, ಕಾರಬಾರಿ, ದಿವಾನ, ಮಂತ್ರಿ ಮೊದಲಾದವರಿಂದ ವಿಶ್ವಾಸ ದ್ರೋಹಕ್ಕೆ ಒಳಗಾಗುತ್ತಾನೆ. ಪದವಿಗಾಗಿ ಆಸೆ ಪಟ್ಟು ಒಬ್ಬರು ಮತ್ತೊಬ್ಬರನ್ನು ಕೆಳಗಿಳಿಸುವ ಹುನ್ನಾರ ನರಗುಂದ ಸಂಸ್ಥಾನ ಸರಳವಾಗಿ ಬ್ರಿಟೀಷರ ಪಾಲಾಗುವಂತೆ ಮಾಡುತ್ತದೆ.

ಜಮಖಂಡಿ ಸಂಸ್ಥಾನದಿಂದ ಕುದುರೆ ಮೇಲೆ ಆಗಮಿಸಿದ ರಾಜಶೇಖರ ಎಂಬ ಸೇನಾಪತಿ ಮೊದಲ ಎರಡು ವರ್ಷಗಳ ಹಿಂದೆ ನರಗುಂದ ಸಂಸ್ಥಾನದ ದಳಪತಿಯಾಗಿ ಆಳಿರುತ್ತಾನೆ. ಇವನ ತಂದೆ, ಸ್ನೇಹಿತರು, ಮದುವೆಯಾಗಬೇಕಾದ ಮಲ್ಲಿಕಾ ನರಗುಂದದಲ್ಲಿ ಇರುತ್ತಾರೆ. ಈತನು ಇಲ್ಲಿಗೆ ಬರಬೇಕಾದರೆ ಜಮಖಂಡಿ ರಾಜಾಸಾಹೇಬರಿಂದ ಸುದ್ದಿ ಹೊತ್ತು ತಂದಿರುತ್ತಾನೆ. ಇದನ್ನು ಭಾಸ್ಕರರಾವ್ ಭಾವೆಯವರಿಗೆ ತಿಳಿಸುವ ಮೊದಲು ಸ್ನೇಹಿತರನ್ನು ಭೇಟಿಯಾಗಿ ಜಮಖಂಡಿಯ ಸಂಸ್ಥಾನದ ಬಗ್ಗೆ "ಛೋಟೂಸಿಂಗ್ ಅಂತ ಅವನ ಹೆಸರು, ಮಹಾ ಪರಾಕ್ರಮಿ ಜಮಖಂಡಿಯ ಸೇನಾನಾಯಕನಾಗಿದ್ದ, ಅವನ ಜತೆಯಲ್ಲಿಯೇ ನಾನೂ ಇದ್ದೆ. ಇಲ್ಲಿ ರಾಘೋಬನ ಜಾತಿಯವರು ಘಾತ ಮಾಡಿದ ಹಾಗೆ ಅಲ್ಲಿ ಅದೇ ಜಾತಿಯವರು ಚೋಟೂಸಿಂಗ್‌ನಿಗೆ ಘಾತ ಮಾಡಿದರು" ಎಂದು ದೇಶದ್ರೋಹ ಎಸಗಿದ್ದವರ ವಿಸ್ತಾರವಾಗಿ ಹೇಳುತ್ತಾನೆ.

ರಾಜಶೇಖರನ ಕೈಯಲ್ಲಿ ಜಮಖಂಡಿ ರಾಜಾಸಾಹೇಬರು ಪತ್ರವೊಂದನ್ನು ಕಳಿಸಿರುತ್ತಾರೆ. ಅದನ್ನು ಭಾವೆ ಅವರಿಗೆ ಕೊಡಬೇಕಾಗಿರುತ್ತದೆ, ಅದೇ ಕಾಲಕ್ಕೆ ಮುಂಡರಗಿ ಭೀಮರಾಯರು ಸೈನ್ಯ ಸಹಾಯ ಕೇಳಿ ಹೊನ್ನನೆಂಬುವವನ್ನು ಕಳಿಸಿರುತ್ತಾನೆ. ಆದರೆ ಭಾಸ್ಕರ್‌ರಾವ್ ಭಾವೆಯನ್ನು ನೋಡಲು ಹೋಗಬೇಕಾದರೆ ಒಂದು ಸಾಮ್ರಾಜ್ಯ ಗೆದ್ದ ಹಾಗೆ ಆಗುತ್ತದೆ. ಏಕೆಂದರ ಭಾಸ್ಕರ್‌ರಾವನನ್ನು ನೋಡಲು ಅವನ ಆಪ್ತ ಸೇವಕರು ಬಿಡುತ್ತಿರಲಿಲ್ಲ. ಜೊತೆಗೆ ಭಾವೆ ಅಷ್ಟಾಗಿ ಉಳಿದ ವಿಷಯಗಳ ಬಗ್ಗೆ ತಲೆಕೆಡಿಸಿಕೊಳ್ಳುತ್ತಿರಲಿಲ್ಲ. ಇದರಿಂದ ಜಮಖಂಡಿಯಿಂದ ರಾಜಶೇಖರ ಹಾಗೂ ಮುಂಡರಗಿಯಿಂದ ಬಂದ ಹೊನ್ನ ಭಾಸ್ಕರರಾವ್

ಭಾವೆಯನ್ನು ನೋಡಲು ಬಹಳ ಪ್ರಯತ್ನಿಸುತ್ತಾರೆ. ಆದರೆ ಇದಕ್ಕೆ ಬನ್ಯಾಬಾಪು, ಕೃಷ್ಣಾ ಪಂಥ ಅವಕಾಶ ಕೊಡುವುದೇ ಇಲ್ಲ. ಮಂತ್ರಿ ರಾಮರಾಯನು ತನ್ನ ಕೆಲಸ ಆಯಿತು ತಾನಾಯಿತು ಎಂದು ಸುಮ್ಮನಿದ್ದುಬಿಡುತ್ತಾನೆ. ಇದರಿಂದ ಭಾವೆಯವರ ಆಡಳಿತ ಆಪ್ತರ ಮೂಲಕ ನಡೆದರೆ, ಬನ್ಯಾ ಬಾಪು, ಕೃಷ್ಣಾಜಿ ಪಂಥ ನರಗುಂದದಲ್ಲಿ ನಡೆಯುವ ಎಲ್ಲ ಮಾಹಿತಿಯನ್ನು ಪತ್ರದ ಮೂಲಕ ಬ್ರಿಟೀಷರಿಗೆ ತಿಳಿಸುತ್ತಿರುತ್ತಾರೆ.

ವೆಂಕಟೇಶ್ವರ ಭಕ್ತರಾಗಿದ್ದ ಭಾಸ್ಕರಾವ್ ಭಾವೆಯವರು ನಿತ್ಯ ದೇವಸ್ಥಾನಕ್ಕೆ ಬರುತ್ತಿದ್ದರು. ಆಗ ರಾಜಶೇಖರ ಹಾಗೂ ಹೊನ್ನ ಧೈರ್ಯದಿದ ಭೇಟಿಯಾಗಿ 'ತಮ್ಮ ಜೊತೆ ಮಾತನಾಡಬೇಕಿತ್ತು, ಎನ್ನುತ್ತಾರೆ. ಆಗ ಸಂಜೆ ಬನ್ನಿ ಎಂದು ಅದಕ್ಕೆ ಬಲಗೈ ಬಂಟ ವಿಷ್ಣು ಕುಲಕರ್ಣಿಗೆ ಭೇಟಿ ಮಾಡಲು ಹೇಳುತ್ತಾರೆ. ರಾಜಶೇಖರ ಹಾಗೂ ಹೊನ್ನ ಭಾವೆಯವರನ್ನು ಭೇಟಿಯಾಗುತ್ತಾರೆ. ಗುಪ್ತ ಮಾತುಕತೆಯಾಗುವಾಗ ಬನ್ಯಾ ಬಾಪು ಅಲ್ಲಿಯೇ ಇದ್ದನು. ಆಗ ರಾಜಶೇಖರ ಮಾತನಾಡಲು ಇಷ್ಟ ಪಡಲಿಲ್ಲ. ಆಗ ಭಾವೆ ಬಾಪುನನ್ನು ಹೊರಗೆ ಕಳಿಸುತ್ತಾನೆ. ಇದೇ ಅವನಿಗೆ ಅವಮಾನವಾದಂತಾಗಿ ರಾಜಶೇಖರನ ಮೇಲೆ ಕತ್ತಿ ಮಸೆಯುತ್ತಾನೆ. ನಂತರ ಮಾತುಕತೆ ನಡೆಯುತ್ತದೆ. ಜಮಖಂಡಿ ಸಂಸ್ಥಾನದ ವಿಷಯ ತಿಳಿಯುತ್ತಲೆ, ಬಂಡು ಹೂಡುವ ಆಲೋಚನೆ ಆರಂಭವಾಗುತ್ತದೆ. ಜೊತೆಗೆ ಛೋಟೂಸಿಂಗ್ ನೀಡಿದ ಪತ್ರ ನೀಡುತ್ತಾನೆ, ಅದನ್ನು ಓದಿದ ಮೇಲೆ 'ಅವರು ಬಂಡು ಹೂಡಲು ಸಿದ್ಧರಿದ್ದಾರೆಯೇ' ಎಂದು ಭಾವೆ ಪ್ರಶ್ನಿಸುತ್ತಾರೆ. ಪತ್ರದಲ್ಲಿ 'ರಾಜಾಸಾಹೇಬರನ್ನು ನಂಬಿ ಕುಳಿತುಕೊಳ್ಳಬೇಡಿ, ಬಂಡು ಹೂಡುವುದಾದರೆ ಸ್ವಂತ ಶಕ್ತಿಯಿಂದ ಹೂಡಬಹುದು' ಎಂದಿರುತ್ತದೆ.

"ಉತ್ತರ ಹಿಂದೂಸ್ಥಾನದಲ್ಲಿ ಝಾನ್ಸಿ ಮಹಾರಾಣಿ ಲಕ್ಷ್ಮಿಬಾಯಿ, ಸಾಹೇಬರು ಯುದ್ದ ಹೂಡುವ ಸುದ್ದಿಯಿದೆ. ದಕ್ಷಿಣದಲ್ಲಿ ಮುಂಡರಗಿ ಭೀಮರಾಯರು ಬಂಡು ಹೂಡಿಯೇ ಇದ್ದಾರೆ. ತಾವು ಅವರೊಡನೆ ಸೇರಿಕೊಂಡು ಸಾಕಷ್ಟು ದಂಡು ಕೂಡಿಸಿ ಹೋರಾಡಿದರೆ ಈ ದೇಶದಿಂದ ಫಿರಂಗಿಗಳನ್ನು ಹೊರಗೆ ಹಾಕಬಹುದೆಂದು ಅರಿಕೆ ಮಾಡಿಕೊಂಡಿದ್ದಾರೆ" (ಬಸವರಾಜ ಕಟ್ಟೀಮನಿ, ೧೯೭೩, ಪುಟ-೪೯.) ಎಂದು ರಾಜಶೇಖರ ತಿಳಿಸಿದ. 'ಮತ್ತೇನ ಇಲ್ಲವೇ' ಎಂದು ಭಾವೆ ಕೇಳಿದಾಗ "ಏನೂ ಇಲ್ಲ. ತಾವು ಲಡಾಯಿ ಸುರು ಮಾಡಿದರೆ ನಾನೂ ಜೀವದ ಹಂಗು ತೊರೆದು ಕಾದಾಡಲು ತಯಾರಿದೀನಿ" ಎಂದನು.

ಜೊತೆಗೆ ಹೊನ್ನ ತಂದ ಮುಂಡರಗಿ ಭೀಮರಾಯನ ಪತ್ರಕ್ಕೆ ಉತ್ತರಕೊಡುವುದು ಹೇಗೆ? ಎಂದು ಭಾವೆ ಚಿಂತಾಕ್ರಾಂತನಾದನು. ಭೀಮರಾಯನಿಗೆ ಮದ್ದು ಗುಂಡು ಕಳಿಸಿದರೆ, ಅವು ಆಂಗ್ಲರ ಕೈಗೆ ಸಿಕ್ಕಿದರೆ ಎಂದು ಆಲೋಚಿಸುತ್ತಾ ಕುಳಿತನು. ಜೊತೆಗೆ ನಾವು ಬಂಡು

ಹೂಡಬೇಕಾದರೆ ಇಂಗ್ಲೀಷರಷ್ಟು ಸೈನ್ಯವಿಲ್ಲ ಹೇಗೆ? ಎಂದು ಸುಮ್ಮನಾಗುವ ನಿರ್ಣಯವೂ ಮಾಡಲಾರದೇ ತಾಕಲಾಟಕ್ಕೆ ಸಿಕ್ಕಿಹಾಕಿಕೊಂಡನು. ಸುಮ್ಮನಿರಲು ಇಷ್ಟ ಪಡದ ಜೊತೆಗೆ ದತ್ತಕ ತೆಗೆದುಕೊಳ್ಳಲು ಅನುಮತಿ ನೀಡದ ಇಂಗ್ಲೀಷರ ವಿರುದ್ಧ ಸಿಟ್ಟು ಹೊರಹಾಕತೊಡಗಿದನು.

"ತನಗೆ ದತ್ತಕಕ್ಕೆ ಅನುಮತಿಯೀಯದೆ ಕಂಪನಿ ಸರಕಾರ ಪರಮ ಅನ್ಯಾಯವೆಸಗಿದೆ, ಸ್ವಾಭಿಮಾನ ಇರುವವರು ಇಂಥಹ ಅನ್ಯಾಯ ಸಹಿಸಿ ಸುಮ್ಮನಿರುವಂತಿಲ್ಲ, ಹಾಗೆ ಸುಮ್ಮನಿರುವುದು ಆತ್ಮಗೌರವವಿಲ್ಲದ ದುರ್ಬಲ ಜೀವಿಗಳ ರೀತಿ, ಹೇಡಿಗಳ ರೀತಿ. ರಾಜವಂಶದಲ್ಲಿ ಜನಿಸಿದ ಈ ಭಾಸ್ಕರರಾಯ ಅಂಥ ಹೇಡಿಗಳ ಮಾಲಿಕೆಯಲ್ಲಿ ಸೇರಿಕೊಳ್ಳಲಾರ" (ಬಸವರಾಜ ಕಟ್ಟೀಮನಿ, ೧೯೭೩, ಪುಟ-೫೨.) ಎಂದು ಇನ್ನು ಕೆಲದಿನ ಕಾಯಬೇಕೆಂದು ನಿರ್ಧರಿಸಿದನು.

ಮುಂಡರಗಿ ಭೀಮರಾಯರಿಗೆ ವಚನವಿತ್ತಿದ್ದರಿಂದ ಅದರಂತೆ ನಡೆದುಕೊಳ್ಳಬೇಕೆಂದು ನಿರ್ಧರಿಸಿದನು. ಮದ್ದುಗುಂಡುಗಳ ಸಂಗ್ರಹ ಸಾಕಷ್ಟು ಪ್ರಮಾಣದಲ್ಲಿ ನರಗುಂದ ಸಂಸ್ಥಾನದಲ್ಲಿ ಇದ್ದಿರಲಿಲ್ಲ. ನರಗುಂದ ಸಂಸ್ಥಾನವು ಬಂಡು ಹೂಡುವುದಾದರೆ ಮದ್ದು ಗುಂಡುಗಳು ಬೇಕಿದ್ದವು, ಆದರೆ ಅಷ್ಟಾಗಿ ಸಂಗ್ರಹವಿರಲಿಲ್ಲ. ಇದರ ಮಧ್ಯೆ ಮುಂಡರಗಿಗೆ ಕಳಿಸುವ ಮನಸ್ಸಿದೆ. ಆದರೆ ಮಂತ್ರಿ ರಾಮರಾಯ ಇದಕ್ಕೆ ಮನಸ್ಸು ಮಾಡಲಿಲ್ಲ. ಜೊತೆಗೆ ಸಹಾಯ ಕೇಳಿದ್ದ ಕೊಲ್ಲಾಪೂರ, ಮೀರಜ್, ಸಾಂಗ್ಲೀಕರ ಸಂಸ್ಥಾನಗಳಿಂದಲೂ ಸಹಾಯ ಬಂದಿದ್ದಿಲ್ಲ. ಸಹೋದರ ಹರಿರಾಯ ರಾಮದುರ್ಗದಲ್ಲಿದ್ದರೂ ಆತನು ಎಳ್ಳಷ್ಟೂ ಸಹಾಯ ಮಾಡಲಿಲ್ಲ. ಆಗ ಭಾವೆ "ಕೊಡಲಿ ಕಾವು ಕುಲಕ್ಕೆ ಮೂಲ ಅವನ್ನು ಮಾತೇನು ಸುಳ್ಳಲ್ಲ ದಿವಾಣಜಿ" ಎಂದು ಹೇಳುತ್ತಾ ಸಂಬಂಧಿಕರ ಬಗೆಗೆ ತನ್ನ ರೋಷವನ್ನು ವ್ಯಕ್ತಪಡಿಸುತ್ತಾನೆ.

ಇದನ್ನು ತಾಯಿ ಯಮುನಾಬಾಯಿಯ ಮುಂದೆ ಪ್ರಸ್ತಾಪಿಸುತ್ತಾನೆ. "ಯಾಕೆ ಬಾಬಾಸಾಹೇಬ್, ಮತ್ತೇನು ವಿಶೇಷ. ಮುಖ ಯಾಕೆ ಹೀಗಾಗಿದೆ?" ಎನ್ನುತ್ತಾಳೆ. ನನಗೆ ಯಾರೂ ಸಹಾಯ ಮಾಡುತ್ತಿಲ್ಲ. ಜತೆಗೆ ಇಂಗ್ಲೀಷರು ನಮಗೆ 'ದತ್ತು ಮಕ್ಕಳ ಹಕ್ಕು' ಪಡೆಯಲು ಅವಕಾಶ ನೀಡುತ್ತಿಲ್ಲ ಎನ್ನುತ್ತಾನೆ. ಅತ್ತ ಇಂಗ್ಲೀಷರನ್ನು ಎದುರಿಸಲು ಯಾರೂ ಸಹಾಯ ಮಾಡುತ್ತಿಲ್ಲ ಅದಕ್ಕೆ ಬಂಡು ಏಳಲು ಸಿದ್ಧನಾಗಿರುವುದಾಗಿ ತಿಳಿಸುತ್ತಾನೆ. ನಂತರ ಮುಂಡರಗಿ ಭೀಮರಾಯರಿಗೆ ಮಧ್ಯರಾತ್ರಿ ಮದ್ದು ಗುಂಡುಗಳನ್ನು ಬಂಡಿ ಮೂಲಕ ಹೊನ್ನನೊಂದಿಗೆ ಕಳುಹಿಸುತ್ತಾನೆ. ಇದನ್ನು ತಿಳಿದುಕೊಂಡ ಕೃಷ್ಣಾಜಿ ಪಂಥ ಹಾಗೂ ಬನ್ಯಾಬಾಪು ಸರಕಾರಕ್ಕೆ ತಿಳಿಸಿ ಬಹುಮಾನ ಪಡೆಯಲು ಮುಂದಾಗುತ್ತಾರೆ. "ಇದೊಂದು ಅತ್ಯಂತ ಮಹತ್ವದ ವಾರ್ತೆ, ಈಗಿಂದೀಗ ನಾವು ಈ ವಾರ್ತೆ ತಿಳಿಸಿದರೆ ಮದ್ದು ಗುಂಡು ಎಲ್ಲ

ಸರಕಾರದ ಕೈಗೆ ಸಿಗುವುದು. ಇಂಥ ಕಾರ್ಯ ಸಾಧಿಸಿಕೊಟ್ಟಿದ್ದಕ್ಕಾಗಿ ನಮಗೆ ದೊಡ್ಡ ಬಹುಮಾನವೂ ದೊರೆಯಬಹುದು" ಎಂದುಕೊಂಡು ಸರಕಾರಕ್ಕೆ ಸಹಾಯ ಮಾಡುತ್ತಾರೆ.

ಭಾಸ್ಕರಾವ್ ಭಾವೆಗೆ ಮ್ಯಾನಸನ್‌ನ ಬಗ್ಗೆ ಹೆಚ್ಚಿನ ರೋಷವಿತ್ತು. ಯುದ್ದ ಹೂಡುವುದಾಗಿ ಭಾವೆ ನಿಶ್ಚಯಿಸಿದರೆ ಮಂತ್ರಿ ರಾಮರಾಯ ಅದಕ್ಕ ಅಷ್ಟಾಗಿ ಮನಸ್ಸು ಮಾಡುತ್ತಿದ್ದಿಲ್ಲ. ಆದರೆ ಭಾವೆ ಹೇಳಿದ ಮೇಲೆ ಒಪ್ಪಿಕೊಳ್ಳಲೇಬೇಕಾಯಿತು, "ತನ್ನ ಪರಮ ವೈರಿಯಾದ ಆ ಮ್ಯಾನಸನ್ ಸಾಹೇಬನನ್ನು ಕಡಿದು ಚೆಲ್ಲುವವರೆಗೂ ಆರಲಾರದು ತನ್ನದೆಯೆ ಬೆಂಕಿ.." ಎಂದು ಭಾಸ್ಕರ್‌ರಾವ ಆಲೋಚಿಸಿದನು. ಈಗಾಗಲೇ ಮ್ಯಾನಸನ್ ಪಾಲಿಟಿಕಲ್ ಏಜಂಟನಾಗಿ ಭಾವೆಯನ್ನು ಅವಮಾನಿಸಿದ್ದನು. ಈ ರೋಷ ಕುದಿಯುತ್ತಿತ್ತು. ಹಿಂದೊಮ್ಮೆ ಬಂದು ಖಜಾನೆಯಲ್ಲಿ ಹಣವಿಲ್ಲದಿದ್ದಾಗ ಅದರ ಬಗ್ಗೆ ಕೇಳಿದ್ದನು. ಬ್ರಾಹ್ಮಣರ ಭೋಜನಕ್ಕೆ ಹೀಯಾಳಿಸಿದ್ದನು. ಆಗ "ಆದರೆ ನಿಮ್ಮಂಥವರ ಆತಿಥ್ಯಕ್ಕಾಗಿ ನಾನು ಮಾಡುವ ವ್ಯವಸ್ಥೆ ಮಾತ್ರ ನಿಷ್ಫಲವಾದದ್ದು" (ಬಸವರಾಜ ಕಟ್ಟೀಮನಿ, ೧೯೭೩, ಪುಟ-೭೯.) ಎನ್ನುತ್ತಾನೆ. ಇದರಿಂದ ಮುಖಭಂಗಿತನಾಗಿ ಮ್ಯಾನ್ಸನ್ ಓಡಿಹೋಗಿದ್ದನು. ನರಗುಂದಕರ ಬೇಡಿಕೆ ಕಮಿಷನ್ ಎದುರಿಗೆ ಬಂದಾಗ ಅದಕ್ಕೂ ಮ್ಯಾನಸನ್ ಕಲ್ಲು ಹಾಕಿದ್ದನು. ನರಗುಂದವನ್ನು ನುಂಗಿ ನೀರು ಕುಡಿಯಬೇಕೆಂದು ಆತನು ನಿರ್ಧರಿಸಿದ್ದನು. ಇದರಿಂದ ಭಾವೆ ಸಿಟ್ಟು ಮ್ಯಾನಸನ್ ಮೇಲೆ ಕುದಿಯುತ್ತಿತ್ತು.

ನರಗುಂದದ ಮೇಲೆ ದಂಡೆತ್ತಿ ಬರಲು ಸರಕಾರ ಮ್ಯಾನ್ಸನ್ನ ನೇಮಿಸಿತ್ತು. ಸೈನ್ಯವು ನರಗುಂದದ ಕಡೆ ಬರುವಾಗ ರಾಮದುರ್ಗ ಹತ್ತಿರ ಬಂದಾಗ ಭಾವೆಗೆ ಸುದ್ದಿ ತಿಳಿಯಿತು. "ಇಂಗ್ರೇಜರ ದಂಡು ರಾಮದುರ್ಗದಿಂದ ಹೊರಟು ಬಿಟ್ಟಿದೆ ಸರಕಾರ" ರಾಮರಾಯನಿಗೆ ರಾಘೋಪಂಥರಿಗೆ ಯುದ್ದಕ್ಕೆ ಸಿದ್ಧತೆ ನಡೆಸಿರೆಂದು ಹೇಳಿದರೂ ಅವರು ಅಷ್ಟಾಗಿ ಉತ್ಸಾಹ ತೋರಲಿಲ್ಲ, ರಾಮರಾಯನಿಗೆ ಯುದ್ಧ ಬೇಕಿರಲಿಲ್ಲ, ರಾಘೋಪಂಥನಿಗೆ ಯುದ್ಧಕ್ಕೆ ಹೋಗುವ ಮನಸ್ಸಿರಲಿಲ್ಲ, ಇತ್ತ ಬನ್ನಾ ಬಾಪು ಒಳಗೊಳಗೆ ಸಂಕಟ ಪಡಹತ್ತಿದರು. ತಮ್ಮ ಪಿತೂರಿ ಎಲ್ಲಿ ಗೊತ್ತಾಗುವುದೋ ಎಂದು. ದಕ್ಷಿಣ ಭಾಗದ ರಾಜ್ಯಗಳ ರಾಜರು ಬಂಡು ಹೂಡದಂತೆ ಮಾಡದ ಕಂಪನಿ ಸರಕಾರದ ಗ್ರ್ಯಾಂಟ್ ಜೇಬಕ್ ಎಂಬುವನ್ನು ನೇಮಿಸಿತು. ಮ್ಯಾನಸನ್ ರಾಮದುರ್ಗಕ್ಕೆ ಬಂದಿದ್ದನು. ಅಲ್ಲಿ ಅರಸ ಹರಿರರಾಯಿಂದ ಆತಿಥ್ಯ ಸ್ವೀಕರಿಸಿದ್ದನು. ಹರಿರಾಯ ಇಂಗ್ಲೀಷರಿಗೆ ನಿಷ್ಠನಾಗಿದ್ದನು. ಹರಿರಾಯ ಭಾವೆಯನ್ನು ನಿಂದಿಸಿದ್ದು ಮ್ಯಾನಸನ್‌ಗೆ ಮತ್ತಷ್ಟು ಬೆಂಬಲ ನೀಡಿದಂತಾಗಿತ್ತು.

ನರಗುಂದ ಕೋಟೆ ಭದ್ರವಾಗಿತ್ತು. ಮ್ಯಾನಸನ್‌ನ್ನು ಎದುರಿಸಲು ರಾಜಶೇಖರ ಹಾಗೂ ವಿಷ್ಣು ಪಂಥನೊಡನೆ ಭಾಸ್ಕರರಾಯನು ಬಂದನು. ಹಿಂದೆ ಹೆದರಿಕೆಯಿಂದ ರಾಘೋಪಂಥ್‌ನು ಬರುತ್ತಿದ್ದನು. ಸುರೇಬಾನ ಸಮೀಪಿಸಿದರು, ರಾಘೋಬನ ಮೂಲಕ ಮ್ಯಾನಸನ್ ರುಂಡವನ್ನು ನರಗುಂದದ ಅಗಸಿ ಬಾಗಿಲಿಗೆ ಕಟ್ಟಬೇಕೆಂಬುದು ಪ್ರಸ್ತಾಪವಾಯಿತು. ಮ್ಯಾನಸನ್‌ನನು ಹನಮಂತನ ಗುಡಿ ಹೊಕ್ಕಿದ್ದನು. ಇದನ್ನು ಯಾರೂ ಬಾಯಿ ಬಿಟ್ಟಿರಲಿಲ್ಲ. ಆಗ ಭಾಸ್ಕರರಾಯ "ಹೊಡೆಯಿರಿ ಇವರನ್ನೂ, ಒಬ್ಬೊಬ್ಬರನ್ನೂ ಕಡಿಯಿರಿ, ಆಗಲಾದರೂ ಹೇಳಬಹುದು" ಎಂದು ಬೊಬ್ಬಿಟ್ಟನು. ಎಷ್ಟು ಒತ್ತಾಯಿಸಿದರೂ ಮ್ಯಾನಸನ್ ಗುಡಿಯಿಂದ ಹೊರ ಬರಲೇ ಇಲ್ಲ. "ಬಾಗಿಲು ಮುರಿಯಿರಿ" ಎಂದು ದೊರೆ ಹೇಳಿದಾಗ ಮ್ಯಾನಸನ್ ಗುಂಡು ಹಾರಿಸತೊಡಗಿದ. ಒಬ್ಬಿಬ್ಬರು ಸೈನಿಕರು ಉರುಳಿ ಬಿದ್ದರೂ ಲೆಕ್ಕಿಸದೆ ಅವನತ್ತ ಸೈನ್ಯ ಮುಂದುವರೆಯಿತು. ಮ್ಯಾನ್ಸನ್ ಮತ್ತು ವಿಷ್ಣು ಪಂಥನ ನಡುವೆ ಮಲ್ಲಯುದ್ದ ನಡೆಯಿತು.

ಕೊನೆಗೆ ಭಾಸ್ಕರರಾಯ ಮ್ಯಾನಸನ್ ರುಂಡ ಕತ್ತರಿಸಿದನು. ಅದನ್ನು ನರಗುಂದಕ್ಕೆ ತಂದು ಅಗಸಿ ಬಾಗಿಲಗೆ ಕಟ್ಟಿದ. ಇಷ್ಟೊತ್ತಿಗಾಗಲೇ ಮದ್ದು ಗುಂಡುಗಳಲ್ಲಿ ಸೆಗಣಿ ಬೆರೆಸಿದ ನೀರನ್ನು ಕೃಷ್ಣ ಪಂಥ ಹಾಗೂ ಬನ್ಯಾ ಬಾಪು ಮಾಡಿಸಿದ್ದರು. ಈ ಘೋರ ವಿಶ್ವಾಸ ದ್ರೋಹಕರನ್ನು ಬಂಧಿಸಲು ಆಜ್ಞೆಯಾಯಿತು. ಆದರೆ ಆಗಲೇ ಅವರು ಊರ ಬಿಟ್ಟು ಹೋಗಿದ್ದರು. ಇದರಿಂದ ಭಾಸ್ಕರರಾಯನಿಗೆ ತಮ್ಮವರ ಬಗೆಗೆ ಸಂಶಯದೃಷ್ಟಿಯಿಂದ ನೋಡುವಂತಾಯಿತು. ಯುದ್ಧವು ಮುಂದುವರೆದು ಬ್ರಿಟಿಷರು ಮೇಲುಗೈ ಸಾಧಿಸ ತೊಡಗಿದರು. ಇದನ್ನು ಊಹಿಸಿದ ಬಾಸ್ಕರನು ತನ್ನ ಆಪ್ತ ಎಂಟು ಜನರೊಂದಿಗೆ ಅಲ್ಲಿಂದ ಪಲಾಯನ ಮಾಡುತ್ತಾನೆ. ಆದರೆ ಇತ್ತ ರಾಜಶೇಖರನು ಯುದ್ಧದಲ್ಲಿ ಏಕಾಂಗಿಯಾಗಿ ಹೋರಾಡುತ್ತಾನೆ. ಕೊನೆಗೆ ಬ್ರಿಟೀಷರ ಬಂಧಿಯಾಗಿ ಗಲ್ಲು ಏರುತ್ತಾನೆ.

ಹೀಗೆ ನರಗುಂದ ಬಂಡಾಯವು ಒಂದು ಸಂಸ್ಥಾನದ ಉಳಿವಿಗಾಗಿ ಹೋರಾಡಿದ ಬ್ರಿಟಿಷರ ವಿರುದ್ಧದ ದಂಗೆಯನ್ನು ಮೊದಲ ಬಾರಿಗೆ ಕರ್ನಾಟಕದಲ್ಲಿ ದಾಖಲಿಸುತ್ತದೆ. ಬಸವರಾಜ ಕಟ್ಟೀಮನಿಯವರು ಒಂದು ಐತಿಹಾಸಿಕ, ಚಾರಿತ್ರಿಕ ಘಟನೆಯನ್ನು ತಮ್ಮ ಕಾದಂಬರಿಯಲ್ಲಿ ಚಿತ್ರಿಸುವ ಪ್ರಯತ್ನದಲ್ಲಿ ಯಶಸ್ವಿಯಾಗಿದ್ದಾರೆ. ಕಾದಂಬರಿಯಲ್ಲಿ ಬರುವ ದೇಶಿ ಸಂಸ್ಥಾನದ ಪ್ರಭು ಭಾಸ್ಕರರಾಯ ವಸಾಹತುಶಾಹಿ ವಿರುದ್ಧದ ದಂಗೆಯು ಡಾಲ್ ಹೌಸಿಯ 'ದತ್ತು ಮಕ್ಕಳಿಗೆ ಹಕ್ಕಿಲ್ಲ' ಎಂಬ ಕಾನೂನನ್ನು ತಿರಸ್ಕರಿಸುವ ಸಲುವಾಗಿ ನಡೆದ ಸಮರವಾಗಿದೆ. ಪುತ್ರನಿಲ್ಲದೇ ಇದ್ದುದರಿಂದ ಬಾಸ್ಕರರಾಯನು ಕಂಪನಿಯ ವಿರುದ್ಧ ತಿರುಗಿ ಬೀಳುತ್ತಾನೆ. ಇನಾಮ್ ಆಯೋಗದ ಪರಿಶೀಲನೆಗೆ ಭಾಸ್ಕರರಾಯನ ಅರ್ಜಿ ಬಂದಾಗ ಆಯೋಗದ

ಅಧಿಕಾರಿ ಮ್ಯಾನಸನ್ ಸಹ 'ದತ್ತುಮಕ್ಕಳಿಗೆ ಹಕ್ಕಿಲ್ಲ' ಎಂಬ ಕಾಯ್ದೆಯ ಕ್ರಮಬದ್ಧತೆಯನ್ನೇ ಎತ್ತಿ ಹಿಡಿಯುತ್ತಾನೆ. ಅಲ್ಲಿಂದಾಚೆಗೆ ಭಾಸ್ಕರರಾಯನಿಗೆ ಕಂಪನಿ ಸರಕಾರ ಶತ್ರುವಂತೆ ಕಾಣುತ್ತದೆ.

ಇಲ್ಲಿ ವಸಾಹತು ಪ್ರಜ್ಞೆಗಿಂತ ಮುಖ್ಯವಾಗಿ ತನ್ನ ಹಿತಾಸಕ್ತಿಗೆ ಕುಂದುಂಟಾಗುವುದೇ ಭಾಸ್ಕರರಾಯನ ಬಂಡಾಯಕ್ಕೆ ಕಾರಣವಾಗಿದೆ ಎನ್ನಬಹುದು. ಮುಖ್ಯವಾಗಿ ಬಂಡು ಏಳುವುದು ತನ್ನ ವಂಶವನ್ನು ಉಳಿಸಿಕೊಳ್ಳಲು, ತನ್ನ ರಾಜ್ಯವನ್ನು ಉಳಿಸಿಕೊಳ್ಳಲು ಅವನಿಗೆ ಬೇಕಾಗಿದ್ದ ದತ್ತು ಮಗನನ್ನು ಸರಕಾರ ಕಿತ್ತುಕೊಳ್ಳುವ ಮೂಲಕ ಅವನ ಇಡಿ ಸಾಮ್ರಾಜ್ಯವನ್ನು ನುಂಗಲು ಮಾಡಿದ ಕುತಂತ್ರವು ಬಯಲಾಗಿ ಅದರ ವಿರುದ್ಧ ಬಾಬಾ ಸಾಹೇಬ ಹೋರಾಡಬೇಕಾಗುತ್ತದೆ. ಇದಕ್ಕೆ ಅವನ ಆಸ್ಥಾನದಲ್ಲಿನ ಮಂತ್ರಿಗಳ ಸಹಾಯ, ಸಹಕಾರ, ಬೆಂಬಲಗಳು ಸಿಗದೇ ಸೋತು ಹೋಗುತ್ತಾನೆ. ಇಂತಹ ಪ್ರಸಂಗಗಳು ಭಾರತದ ಅನೇಕ ಸಂಸ್ಥಾನಗಳಲ್ಲಿ ನಡೆದಿರುವುದನ್ನು ಕಾಣುತ್ತೇವೆ.

ಐತಿಹಾಸಿಕ ಸತ್ಯಾಂಶಗಳಿಗೆ ಅಪಚಾರವಾಗದಂತೆ ಕಾಲ್ಪನಿಕ ಪಾತ್ರ ರೂಪಿಸಿಕೊಳ್ಳಲು ಕಾದಂಬರಿಕಾರನಿಗೆ ಸ್ವಾತಂತ್ರ್ಯವಿರುತ್ತದೆ ಎಂದು ಹೇಳುವ ಬಸವರಾಜ ಕಟ್ಟೀಮನಿಯವರು ಮೂಲ ನರಗುಂದ ಬಂಡಾಯದಲ್ಲೆಲ್ಲೂ ಕಾಣಿಸದ ರಾಜಶೇಖರನ ಪಾತ್ರ ಸೃಷ್ಟಿಸಿ, ಇತಿಹಾಸವನ್ನೆಲ್ಲೂ ತಿರುಚದೆ ಆ ಪಾತ್ರದ ಹಿನ್ನೆಲೆಯಲ್ಲಿ ಅಂದಿನ ಕಾಲದ ಜಾತಿ ವ್ಯವಸ್ಥೆಯನ್ನು ಬಿಚ್ಚಿಡುತ್ತಾರೆ. ಕೆಳವರ್ಗದ ರಾಜಶೇಖರನ ಪಾತ್ರಕ್ಕೆ ಕಾದಂಬರಿಯಲ್ಲಿ ಪ್ರಮುಖ ಸ್ಥಾನ ಕಲ್ಪಿಸಿ ಎಂದಿನಂತೆ ತಮ್ಮ ಜನಪರ ಕಾಳಜಿಯೊಂದಿಗೆ ಪ್ರಗತಿಶೀಲ ಚಿಂತಕರೆಂಬುದನ್ನು ಗಟ್ಟಿಗೊಳಿಸುತ್ತಾರೆ. (ಬಸವರಾಜ ಕಟ್ಟೀಮನಿ, ೨೦೧೪, ಪುಟ–೨೧ ಪ್ರಸ್ತಾವನೆ)

ಇಲ್ಲಿ ಕಾದಂಬರಿಗೆ ಮುಖ್ಯ ವಸ್ತುವಾದ ನರಗುಂದ ಬಂಡಾಯವು ಸ್ವಾತಂತ್ರ್ಯ ಸಮರಕ್ಕೆ ಮುನ್ನುಡಿಯನ್ನು ಬರೆದಂತೆ ತೋರುತ್ತದೆ. ಬಂಡಾಯದಲ್ಲಿ ಎದ್ದು ಕಾಣುವ ದೇಶದ್ರೋಹ ಕುತಂತ್ರದಿಂದಲೇ ಬಾಬಾ ಸಾಹೇಬನಿಗೆ ಜಯ ದೊರಕಲಿಲ್ಲ ಎನ್ನುವದು ಕಹಿ ಸತ್ಯವಾದರೂ ಒಪ್ಪಿಕೊಳ್ಳಲೇಬೇಕು. ನರಗುಂದ ಬಂಡಾಯದಲ್ಲಿ ಕಾಣಸಿಗುವ ದೇಶದ್ರೋಹಿಗಳು ಭಾರತದ ಇತರ ಸಂಸ್ಥಾನದಲ್ಲಿ ಇದ್ದುದರಿಂದಲೇ ಭಾರತ ೨೦೦ ವರ್ಷಗಳವರೆಗೆ ಬ್ರಿಟೀಷರಿಂದ ಆಳಿಸಿಕೊಳ್ಳಬೇಕಾಯಿತು ಎಂಬ ಸತ್ಯವೂ ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಸುಳ್ಳಲ್ಲ.

**ಸಂಗೊಳ್ಳಿ ರಾಯನಾಯಕ (೧೯೮೬)**

ಸಂಗೊಳ್ಳಿ ರಾಯನಾಯಕ ಕಿತ್ತೂರಿನ ಇತಿಹಾಸದ ಕೊನೆಯ ದಿನಗಳ ಕಥೆಯನ್ನು ಪ್ರಸ್ತುತ ಕಾದಂಬರಿ ಚಿತ್ರಿಸುತ್ತಾ ಹೋಗುತ್ತದೆ. ಭಾರತ ಸ್ವಾತಂತ್ರ್ಯ ಸಂಗ್ರಾಮಗಳಲ್ಲಿ

ಪ್ರಪ್ರಥಮವಾಗಿ ಬ್ರಿಟೀಷರ ವಿರುದ್ಧ ಸಮರ ಸಾರಿದ ಕನ್ನಡತಿ ಚೆನ್ನಮ್ಮಾಳ ಕಿತ್ತೂರು ಐತಿಹಾಸಕವಾಗಿ ಮಹತ್ವವನ್ನು ಪಡೆದುಕೊಂಡಿದೆ. ಕಿತ್ತೂರನ್ನು ಬ್ರಿಟೀಷರಿಂದ ಉಳಿಸಿಕೊಳ್ಳಲು ಮಾಡಿದ್ದು, ಮುಂದೊಂದು ದಿನ ಅದು ಇಡೀ ಭಾರತ ಇತರ ಸಂಸ್ಥಾನಗಳನ್ನು ಬಡಿದೆಬ್ಬಿಸಿತು ಎಂದರೆ ಅತಿಶಯೋಕ್ತಿ ಎನಿಸಲಾರದು. ಇಲ್ಲಿನ (ಕಿತ್ತೂರಿನ) ಮಣ್ಣಿನಲ್ಲಿ ಬೆರತು ಹೋದ ಅನೇಕ ವೀರಾದಿ ವೀರರ ಚಿತ್ರಣಗಳು ನಮ್ಮಲ್ಲಿ ಇಂದಿಗೂ ರೋಮಾಂಚನವನ್ನುಂಟು ಮಾಡುತ್ತವೆ. ಕಿತ್ತೂರನ್ನು ಸ್ವಾತಂತ್ರ್ಯಗೊಳಿಸುವಲ್ಲಿ ರಾಣಿ ಚೆನ್ನಮ್ಮಳಿಗೆ ಬಲಗೈ ಬಂಟನಾಗಿ ತನ್ನ ಹೋರಾಟದ ಕೆಚ್ಚನ್ನು ತೋರಿದ ಸಂಗೊಳ್ಳಿ ರಾಯನಾಯಕ ಕನ್ನಡಿಗರ ಹೆಮ್ಮೆಯ ಪುತ್ರನಾಗಿ ಪ್ರಸ್ತುತ ಕಾದಂಬರಿಯಲ್ಲಿ ಬಿಂಬಿತವಾಗಿದ್ದಾನೆ. ಲೇಖಕ ಬಸವರಾಜ ಕಟ್ಟೀಮನಿಯವರ ಐತಿಹಾಸಿಕ ಪ್ರಜ್ಞೆ ಇಲ್ಲಿ ಮನೋಜ್ಞವಾಗಿ ಮೂಡಿನಿಂತಿದೆ.

"ಜನಸಾಮಾನ್ಯರ ಪ್ರತಿನಿಧಿಯಾಗಿದ್ದ ಆ ಕಡುಗಲಿಯ ಸ್ವಾಭಿಮಾನ ಸ್ವದೇಶಾಭಿಮಾನ, ಸ್ವಾತಂತ್ರ್ಯ ಪ್ರೇಮ, ಸೋಲನ್ನರಿಯದ ಅಪ್ರತಿಮಪೌರುಷ, ಇತ್ಯಾದಿ ಸದ್ಗುಣಗಳಿಂದ ಮೆರೆದು ಇಂದಿಗೂ ಲಕ್ಷಾಂತರ ಜನರ ಆರಾಧ್ಯಮೂರ್ತಿಯಾಗಿ ಉಳಿದಿದ್ದಾನೆ. ಇಂತಹ ಮಹಾವೀರನ ಜೀವನದ ಬಗೆಗೆ ಕಾದಂಬರಿ ಬರೆಯುವುದು ನನಗೊಂದು ಅಭಿಮಾನದ ವಿಷಯ. ಇಂದಿನ ಯುವ ಜನಾಂಗವು ರಾಯಣ್ಣನ ಜೀವನ ಕಥೆಯಿಂದ ಸಾಕಷ್ಟು ಸ್ಫೂರ್ತಿ ಪಡೆಯಬಹುದಾಗಿದೆ" (ಬಸವರಾಜ ಕಟ್ಟೀಮನಿ, ೧೯೬೯, ಪುಟ-೧೬೨.) ಎಂದು ತಮ್ಮ ಮುನ್ನುಡಿಯಲ್ಲಿ ಸ್ವತಃ ಕಟ್ಟೀಮನಿಯವರು ಕಾದಂಬರಿಯ ಆಶಯವನ್ನು ವ್ಯಕ್ತಪಡಿಸುತ್ತಾರೆ.

ಕಿತ್ತೂರಿನ ಚನ್ನಮ್ಮನ ಪರಾಕ್ರಮದ ಸುವರ್ಣ ಅಧ್ಯಾಯ ಈ ವೇಳೆಗಾಗಲೇ ಮುಗಿದಿದೆ. ಚನ್ನಮ್ಮ ಬಂಧಿಯಾಗಿ ಸೆರೆಮನೆಯಲ್ಲಿದ್ದಾಳೆ. ಆಕೆಯನ್ನು ಬಿಡುಗಡೆಗೊಳಿಸಿ ಕಿತ್ತೂರಿನ ವೀರದೀಪವನ್ನು ಹೊತ್ತಿಸಬೇಕೆಂದು ಆಕೆಯ ನಿಷ್ಠಾವಂತ ಅನುಯಾಯಿಗಳಲ್ಲಿ ಸಂಗೊಳ್ಳಿಯ ರಾಯನಾಯಕನು ಪ್ರಮುಖನಾಗುತ್ತಾನೆ. ಆಂಗ್ಲರ ಮೇಲೇರಿ ಅವರಿಗೆ ದುಃಸ್ವಪ್ನನಾಗಿ ಕಾಡುತ್ತಾನೆ. ಅವರ ಒಡೆದು ಆಳುವ ನೀತಿಯನ್ನು, ದರ್ಪವನ್ನು ತಡೆದುನಿಂತು ಪ್ರತಿ ಹೆಜ್ಜೆ ಹೆಜ್ಜೆಗೂ ಪ್ರತಿರೋಧಿಸುತ್ತಾನೆ. ರಾಯಣ್ಣ ಯಾವ ಸಂಸ್ಥಾನದ ರಾಜನಲ್ಲ. ಅವನೊಬ್ಬ ಸಾಮಾನ್ಯ ಸೈನ್ಯಾಧಿಪತಿ. ತನ್ನ ಅಣ್ಣ ಮತ್ತು ತಾಯಿಯ ಜೊತೆಗೆ ಕೌಟುಂಬಿಕ ನಿರ್ವಹಣೆಗಾಗಿ ಹೊಲವನ್ನೇ ನಂಬಿಕೊಂಡು ಬದುಕುತ್ತಿದ್ದ ಸಾಮಾನ್ಯ ರೈತ.

ಕಥನ ನಿರೂಪಣೆಯಲ್ಲಿ ಲೇಖಕರು ಒಂದು ಹೊಸ ರೀತಿಯನ್ನು ಇಲ್ಲಿ ಅವಲಂಬಿಸಿದ್ದಾರೆ. ರಾಯನಾಯಕ, ಗಂಗಾಧರ, ಕೆಂಚವ್ವ, ಅವರಾದಿ ವೀರಪ್ಪ, ಬಿಚ್ಚುಗತ್ತಿ ಚನ್ನಬಸಪ್ಪ, ಲಿಂಗನಗೌಡ, ವೆಂಕನಗೌಡ, ಪಾರ್ವತಿ ಮೊದಲಾದ ಪಾತ್ರಗಳ ಬಾಯಿಂದ ಕಥೆ

ಹೇಳಿಸಿಕೊಂಡು ಹೋಗಿದ್ದಾರೆ. ಚಿಕ್ಕ ಅಧ್ಯಾಯಗಳಿದ್ದು ಒಂದೊಂದು ಅಧ್ಯಾಯದಲ್ಲಿಯೂ ಅದರ ಶಿರೋನಾಮೆಯಲ್ಲಿ ಸೂಚಿಸಿದ ವ್ಯಕ್ತಿಗಳು ಕಥೆ ಹೇಳುತ್ತಾರೆ. ರಾಯನಾಯಕ, ಗಂಗಾಧರ ಇವರ ನಿರೂಪಣೆಯೇ ಹೆಚ್ಚಾಗಿದೆ. ಅವರೇ ಕಾದಂಬರಿಯ ಪ್ರಧಾನ ಪಾತ್ರಗಳು. ಅನಂತರದ ಸ್ಥಾನ ಅವರಾದಿ ವೀರಪ್ಪ, ಬಿಚ್ಚುಗತ್ತಿ ಚನ್ನಬಸಪ್ಪ ಅವರದು. ಹೀಗೆ ಕಥನ ನಿರೂಪಣೆಗೊಂಡಿದ್ದು ಕಾದಂಬರಿಯ ಹೊಸ ವಿಧಾನವೆಂದು ಹೇಳಬಹುದು. ಇದರ ಗೆಲ್ಲುವಿಕೆಯಲ್ಲಿನ ಶ್ರೇಯಸ್ಸು ಕಟ್ಟೀಮನಿಯವರಿಗೆ ಸಲ್ಲುತ್ತದೆ.

ರಾಯನಾಯಕನ ನಿರೂಪಣೆಯಿಂದ ಕಾದಂಬರಿ ಪ್ರಾರಂಭವಾಗುತ್ತದೆ. ದಿನವೆಲ್ಲಾ ನೇಗಿಲು ಹೊಡೆದು ದಣಿದು ಮಲಗಿದ್ದಾನೆ. ನಟ್ಟಿರುಳಲ್ಲಿ ಆತನ ನಾಯಿ ಬಗುಳಿ ಎಚ್ಚರಿಸಿ ಯಾರೋ ಬಂದರೆಂಬುದನ್ನು ಸೂಚಿಸುತ್ತದೆ. ಅವನ ತಾಯಿ ಕೆಂಚವ್ವನೂ ಏಳುತ್ತಾಳೆ. ಇಷ್ಟು ಹೊತ್ತಿನಲ್ಲಿ ಬರುವವರು ಇನ್ನಾರು? ರಾಯಣ್ಣನೊಡನೆ ಒಂದೇ ಗರಡಿಯ ಗೆಳೆಯನಾದ ಬಿಚ್ಚುಗತ್ತಿ ಚನ್ನಪ್ಪನೇ ಇರಬೇಕೆಂದು ತರ್ಕಿಸುತ್ತಾ ಬಾಗಿಲು ತೆಗೆಯುತ್ತಾಳೆ. ಆದರೆ ಬಂದವನು ತೀರಾ ಅನಿರೀಕ್ಷಿತ ವ್ಯಕ್ತಿ. “ಚೆನ್ನಮ್ಮ ರಾಣಿಯವರ ಕುದುರೆಸವಾರರ ಮೇಲಧಿಕಾರಿಯಾಗಿದ್ದು ಕೊಂಡು ಕೆಂಪುಮೋರೆಯವರಿಗೆ ಮಣ್ಣು ತಿನ್ನಿಸಿದ ಕಡುಗಲಿ ಗಂಗಾಧರ” ಈ ವೇಳೆಯಲ್ಲಿ ಇದ್ದಕ್ಕಿದ್ದಂತೆ ಪ್ರತ್ಯಕ್ಷನಾಗುತ್ತಾನೆಂಬುದನ್ನು ಕನಸಿನಲ್ಲಿಯೂ ಊಹಿಸಿರಲಿಲ್ಲ. ಕಿತ್ತೂರು ಕೈಬಿಟ್ಟ ಐದು ವರ್ಷಗಳ ನಂತರ ನೋಡುತ್ತಿದ್ದಾನೆ. ಆತ ಬಂದದ್ದು ಎಷ್ಟು ಅನಿರೀಕ್ಷಿತವೋ ತಂದದ್ದು ಅಷ್ಟೇ ಮಹತ್ವದ ಸುದ್ದಿ. “ಸರದಾರ ವೀರಪ್ಪನವರು ಹೇಳಿಕಳುಹಿಸಿದ್ದಾರೆ ರಾಯಾ” ಎಂಬ ಆತನ ಮಾತು ಕಿವಿಗೆ ಬಿದ್ದೊಡನೆ ರಾಯಣ್ಣನ ಮೈಯಲ್ಲಿ ಮಿಂಚಿನ ಸಂಚಾರವಾಗುತ್ತದೆ. ಕಿತ್ತೂರಿನ ಸಮರ್ಥ ಸರದಾರರಾದ ಅಪರಾದಿ ವೀರಪ್ಪನವರು ಕಿತ್ತೂರಿನ ಪತನಾನಂತರ ಎತ್ತ ಹೋದರೆಂಬುದೇ ತಿಳಿದಿರಲಿಲ್ಲ. ಈಗ ಅವರೇ ಹೇಳಿಕಳುಹಿಸಿದ್ದಾರೆಂದ ಮೇಲೆ ಅವರಿದ್ದ ರಹಸ್ಯ ಸ್ಥಳಕ್ಕೆ ಈ ಕೂಡಲೇ ಹೊರಡಬೇಕೆಂದು ನಿರ್ಧರಿಸುತ್ತಾನೆ. ಆ ರಾತ್ರಿಯೇ ಇಬ್ಬರೂ ಹೊರಡುತ್ತಾರೆ.

ಕಾದಂಬರಿಯ ಆರಂಭದಲ್ಲಿಯೇ ಹೋರಾಟದ ಮುನ್ಸೂಚನೆಗಳನ್ನು ಕಾದಂಬರಿಕಾರರು ನೀಡುತ್ತಾ ಹೋಗುತ್ತಾರೆ. ಕಿತ್ತೂರು ಕೈಬಿಟ್ಟು ಈಗಾಗಲೇ ಐದು ವರ್ಷಗಳು ಕಳೆದಿವೆ. ಕೆಲವು ಸರದಾರರು, ನಾಯಕರು ಅಲ್ಲಲ್ಲಿ ತಲೆಮರಸಿಕೊಂಡು ಮತ್ತೆ ಕಿತ್ತೂರನ್ನು ವಶಪಡಿಸಿಕೊಳ್ಳಲು ಹವಣಿಸುತ್ತಿದ್ದಾರೆ. ಸಾಮಾನ್ಯ ಸಿಪಾಯಿಯಾಗಿದ್ದ ರಾಯಣ್ಣನಲ್ಲಿಯೂ ಸೇಡಿನ ಕಿಡಿ ಪ್ರಜ್ವಲಿಸುತ್ತಿದೆ. ಗಂಗಾಧರ ಬಂದದ್ದು ಆ ಮುಖವಾದ ಕಾರ್ಯಪ್ರವರ್ತನೆಗೆ ಒಂದು ದಿಕ್ಕು ಸಿಕ್ಕಂತಾಯಿತು. ವೀರಪ್ಪ, ಗಂಗಾಧರ, ರಾಯಣ್ಣ ಎಲ್ಲರೂ ಸೇರಿ ರಾಣಿಯನ್ನು ಬಂಧನದಿಂದ ಮುಕ್ತಗೊಳಿಸುವ ಮತ್ತು ರಾಜ್ಯವನ್ನು ವಶಪಡಿಸಿಕೊಳ್ಳುವ ಹಂಚಿಕೆಯಲ್ಲಿ ತೊಡಗುತ್ತಾರೆ.

ರಾಣಿ ಚೆನ್ನಮ್ಮನನ್ನು ಬೈಲಹೊಂಗಲದ ಮಲ್ಲನಾಯಕರ ವಾಡೆಯಲ್ಲಿ ಬಂಧಿಸಿಡಲಾಗಿತ್ತು. ವೀರಪ್ಪ ಗಂಗಾಧರ, ರಾಯಣ್ಣ ಮೂವರು ಸೇರಿ ಜಂಗಮವೇಷದಿಂದ ವಾಡೆಯನ್ನು ಪ್ರವೇಶಿಸಿ ಯಾರಿಗೂ ಅನುಮಾನ ಬಾರದಂತೆ ಆಕೆಯ ದರ್ಶನ ಪಡೆಯುತ್ತಾರೆ. ಮುಂದಿನ ತಮ್ಮ ಕರ್ತವ್ಯಕ್ಕೆ ಒಪ್ಪಿಗೆ ಪಡೆಯುತ್ತಾರೆ. ಅವರ ಮಾರ್ಗದಲ್ಲಿ ಹೆಜ್ಜೆ ಹೆಜ್ಜೆಗೂ ಆಂತಕಗಳು ತಲೆದೋರುತ್ತವೆ. ಒಂದು ಕಡೆ ಶತ್ರುಗಳು ಹೊಂಚು ಹಾಕಿದ್ದಾರೆ. ಕಿತ್ತೂರಿನ ಉಪ್ಪು ತಿಂದ ಶಿವಬಸಪ್ಪನಂತಹವು ಇನ್ನೊಂದು ಕಡೆ ಸ್ವಜನದ್ರೋಹ ಮಾಡುತ್ತಿದ್ದಾರೆ. ಇದರ ಮಧ್ಯದಲ್ಲಿ ಎಚ್ಚರಿಕೆಯಿಂದ ಬೆಳೆಯುತ್ತದೆ ಇವರ ಕಾರ್ಯವ್ಯೂಹ. ಈ ವೇಳೆಗೆ ರಾಣಿ ಅಸ್ವಸ್ಥಳಾಗಿರುವುದು ತಿಳಿದು ರಾಯಣ್ಣ ತನ್ನ ಗೆಳೆಯ ಬಿಚ್ಚುಗತ್ತಿ ಚನ್ನಬಸಪ್ಪನೊಡನೆ ಮತ್ತೊಮ್ಮೆ ಜಂಗಮವೇಷದಿಂದ ಹೋಗಿ ಆಕೆಯ ಕೊನೆಯ ದರ್ಶನ ಪಡೆದು ಬರುತ್ತಾರೆ. ಚೆನ್ನಮ್ಮ ಅನಂತರ ಕೆಲವೇ ದಿನಗಳಲ್ಲಿ ಕೊನೆಯುಸಿರೆಳೆಯುತ್ತಾಳೆ. ರಾಯಣ್ಣ ಮೊದಲಾದವರ ದುಃಖ ಮೇರೆಮೀರುತ್ತದೆ. ಆದರೂ ಅವರು ನಿರಾಶರಾಗುವಂತಿಲ್ಲ. ಸ್ವತಂತ್ರಗೊಳಿಸಿ ರಾಣಿಯ ಆ ಕೊನೆಯ ಬಯಕೆಯನ್ನು ನಡೆಸಿಯೇ ತೀರಬೇಕೆಂಬ ನಿರ್ಧಾರಕ್ಕೆ ಅವರು ಬರುತ್ತಾರೆ.

ಈಗಾಗಲೇ ರಾಯಣ್ಣನ ಮನೆಯ ಸ್ಥಿತಿ ತುಂಬಾ ಬಿಕ್ಕಟ್ಟಿಗೆ ಸಿಕ್ಕಿಕೊಂಡಿರುತ್ತದೆ. ಆತನ ಅಣ್ಣನಾದ ಸಿದ್ದಣ್ಣ ಊರಿನ ಕುಲಕರಣಿಯ ಕಾಟದಿಂದ ರೋಸಿಹೋಗಿರುತ್ತಾನೆ. ತಾಯಿ ಕೆಂಚವ್ವನಿಗೂ ಈ ಸಂಕಟ ಸಾಕಾಗಿತ್ತು. ಮನೆಯಲ್ಲಿ ಒಂದಲ್ಲ ಹಲವಾರು ತೊಂದರೆಗಳು ಬರತೊಡಗಿದವು. ಆದರೂ ರಾಯಣ್ಣನಿಗೆ ಇವೆಲ್ಲಕ್ಕೂ ಮೀರಿ ರಾಜ್ಯದ ಕರೆ ಹಿರಿದಾಗಿ ಕೇಳಿತು. ರಾಜ್ಯದ ಹಿತಕ್ಕಾಗಿ ಕೆಲವು ದಿನ ತನ್ನನ್ನು ಬಿಟ್ಟುಕೊಡುವಂತೆ ತನ್ನ ಮನೆಯವರಿಗೆ ವಿನಂತಿಸಿಕೊಂಡನು. ಇದಕ್ಕೆ ಅವನ ತಾಯಿ–ಅಣ್ಣನಿಂದ ತುಂಬು ಸಹಕಾರ ಸಿಕ್ಕಿತು.

ಮುಂದೆ ಆತ ದಂಡುಕಟ್ಟುವ ಮಹತ್ಕಾರ್ಯದಲ್ಲಿ ತೊಡಗಿ ಆ ದಂಡಿನ ನೇತಾರನಾಗಿ ನಡೆದುಕೊಂಡುದರ ಸಾಹಸಮಯ ಚಿತ್ರಣವನ್ನು ಕಟ್ಟೀಮನಿಯವರು ಕಟ್ಟಿಕೊಡುತ್ತಾರೆ. ದಿನದಿನಕ್ಕೆ ಅವನ ಸೈನ್ಯ ಬೆಳೆಯಿತು. ಗಜವೀರನೆಂಬ ಮಹಾ ಪರಾಕ್ರಮಿ ಆತನ ಸೈನ್ಯವನ್ನು ಸೇರಲು ಮಾತುಕೊಟ್ಟ. ಪ್ರಜಾಪೀಡಕನಾಗಿದ್ದ ಭರಮನಂತಹ ಪುಂಡನನ್ನು ಕೊಂದು ಪುಣ್ಯ ಕಟ್ಟಿಕೊಂಡ ಕೀರ್ತಿ ಆತನದಾಯಿತು. ಸೈನ್ಯದ ಸಂಖ್ಯೆ ಹೆಚ್ಚಿದಂತೆಲ್ಲಾ ಅದರ ನಿರ್ವಹಣೆಯ ಹೊಣೆ ವಿಶೇಷವಾಗಿ ಬೆಳೆಯಿತು. ಸರ್ಕಾರವನ್ನು, ಅದರ ಪರವಾಗಿರುವ ಶ್ರೀಮಂತರನ್ನು ಲೂಟಿಮಾಡವುದರಲ್ಲಿ ಅದು ತೊಡಗಿಸಿಕೊಂಡಿತು. ಸೈನ್ಯವನ್ನು ತೆಗೆದುಕೊಂಡು ಮೊಗಲಾಯಿ ಸೀಮೆಗೆ ಹೊಗಿ ಅಲ್ಲಿಯೂ ಲೂಟಿಯನ್ನು ಪ್ರಾರಂಭಿಸಿದ. ಈತನನ್ನು ಹಿಡಿಯಲು ಕಂಪನಿ ಸರಕಾರ ವಿಶೇಷ ಪ್ರಯತ್ನದಲ್ಲಿ ತೊಡಗಿತು. ಅದರ ಕಣ್ಣಿಗೆ ಮಣ್ಣೆರೆಚಿ ಈತ ಮಾಡುತ್ತಿದ್ದ ದರೋಡೆ ಲೂಟಿಗಳ ವರ್ಣನೆಯನ್ನು ಕಣ್ಣಿಗೆ ಕಟ್ಟುವಂತೆ ಅಭಿವ್ಯಕ್ತಿಸಿದ್ದಾರೆ.

ರಾಯನಾಯಕನ ಸಾಹಸ ಹೆಚ್ಚಿದಂತೆ ಅವನನ್ನು ಹಿಡಿಯುವ ಪ್ರಯತ್ನಗಳು ಕಂಪನಿಯಿಂದ ಬಲವಾದವು. ಖೋದಾನಪುರದ ಲಿಂಗನಗೌಡ, ನೇಗಿನಹಾಳ ವೆಂಕನಗೌಡ ಮಾಮಲೇದಾರ ಕೃಷ್ಣರಾಯರು ಕುಟಿಲ ನೀತಿಗೆ ಮಾರುಹೋಗಿ ದ್ರೋಹ ಬಗೆದರು. ರಾಯಣ್ಣನನ್ನು ಹಿಡಿದುಕೊಡಲು ಒಪ್ಪಿದರು. ಇಲ್ಲಿ ಕಟ್ಟೀಮನಿಯವರ ಮತ್ತೊಂದು ಕಾದಂಬರಿಯ 'ನರಗುಂದ ಬಂಡಾಯ' ಕೃಷ್ಣಾ ಪಂಥ, ವಿಷ್ಣು ಕುಲಕರಣಿಯ ದೇಶದ್ರೋಹದ ಛಾಯೆಯನ್ನು ಕಾಣುತ್ತೇವೆ. ರಾಯಣ್ಣನಿಗೆ ಸಹಾಯ ಮಾಡುವ ನೆಪದಲ್ಲಿ ರಾಯಣ್ಣನ ಸೈನ್ಯವನ್ನು ಸೇರಿಕೊಳ್ಳುತ್ತಾರೆ. ಇವರ ಕಡೆಯ ಲಕ್ಕ ಎಂಬುವನು ರಾಯಣ್ಣನ ನಂಬಿಕೆಗೆ ಅರ್ಹನಾಗಿದ್ದ ಬಂಟ. ಆತ್ಮರಕ್ಷಣೆಯ ವಿಚಾರದಲ್ಲಿ ಸದಾ ಜಾಗೃತನಾಗಿದ್ದ ರಾಯಣ್ಣ ಮೋಸಹೋಗಬೇಕಾಯಿತು. ಅವನ ಜೊತೆಯಲ್ಲಿ ಒಮ್ಮೆ ರಾಯಣ್ಣನು ಹಳ್ಳದಲ್ಲಿ ಸ್ನಾನಮಾಡಿ ಬಟ್ಟೆ ಹಾಕಿಕೊಳ್ಳುತ್ತಿರುವಾಗ, ಆತನ ಖಡ್ಗವನ್ನು ತೆಗೆದುಕೊಂಡು ಓಡಿಹೋಗುತ್ತಾನೆ ಲಕ್ಕ. ಆ ಅವಕಾಶವನ್ನೇ ಕಾಯುತ್ತಾ ಅಡಗಿ ನಿಂತಿದ್ದ ಶತ್ರು ಸೈನ್ಯಕ್ಕೆ ಸೂಚನೆ ಕೊಡುತ್ತಾನೆ. ಯಾವುದೇ ಆಯುಧಗಳಿಲ್ಲದೆ ಖಾಲಿ ಕೈಯಿಂದ ಏಕಾಂಗಿಯಾಗಿ ಶತ್ರು ಸೈನ್ಯವನ್ನು ಎದುರಿಸಬೇಕಾಗುತ್ತದೆ ರಾಯಣ್ಣ. ಇಲ್ಲಿ ದೇಶದ್ರೋಹಿಗಳಾಗಿ ಲಕ್ಕ, ಅವನನ್ನು ಚೂಬಿಟ್ಟ ಖೋದಾನಪುರದ ಲಿಂಗನಗೌಡ, ನೇಗಿನಹಾಳ ವೆಂಕನಗೌಡ ಮಾಮಲೇದಾರ ಕೃಷ್ಣರಾಯರು ರಾಯಣ್ಣನ ಕೆಂಗಣ್ಣಿಗೆ ಗುರಿಯಾಗುತ್ತಾರೆ.

ಸ್ವದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ರಾಯಣ್ಣ, ಸ್ವಜನದ್ರೋಹ ದುಷ್ಟಶಕ್ತಿಗೆ ಬಲಿಯಾಗಿ ಗಲ್ಲುಗಂಬನ್ನೇರಬೇಕಾಗುತ್ತದೆ. ಆತನನ್ನು ಆರು ಜನ ಅವನ ಸಂಗಡಿಗರೊಂದಿಗೆ ಬೆಳಗಾವಿ ಜಿಲ್ಲೆಯ ನಂದಗಡದಲ್ಲಿ ಗಲ್ಲಿಗೇರಿಸಲಾಯಿತು. "ತಾಯಿ ಅಣ್ಣ ಅತ್ತಿಗೆಯರಿಗೆ ಮತ್ತೊಮ್ಮೆ ನಮಸ್ಕರಿಸಿ, ಹನುಮನನ್ನು ಅಪ್ಪಿಕೊಂಡು ಆಶೀರ್ವದಿಸಿ, ನೆರೆದ ಜನರಿಗೆಲ್ಲಾ ಕೈಮುಗಿದು, ನಗುನಗುತ್ತಲೇ ಗಲ್ಲಿನ ಅಟ್ಟ ಏರಿ ತನ್ನ ಪ್ರಾಣಹರಣ ಮಾಡಲು ಸಿದ್ಧವಾಗಿ ನೇಣಿನ ಹತ್ತಿರ ನಿಂತ ರಾಯಣ್ಣ. ಜೊತೆಗಾರರೂ ಅವನ ಹಾಗೆಯೇ ಗಂಭೀರವಾಗಿ ಅಟ್ಟ ಏರಿ ಸಾಲಾಗಿ ನಿಂತುಕೊಂಡರು. ಮುಖಕ್ಕೆ ಕರಿಯ ಬಟ್ಟೆ ಹಾಕಲು ಬಂದ ಕೊಲೆಗಡುಕನ ಕೈಯನ್ನು ಅತ್ತ ಸರಿಸಿ, ತಾನೇ ತನ್ನ ಕೈಯಿಂದಲೇ ಹಗ್ಗವನ್ನು ಕುತ್ತಿಗೆಗೆ ಬಿಗಿದುಕೊಂಡ ರಾಯಣ್ಣ. ನೆರೆದಿದ್ದ ಜನರೆಲ್ಲ ಹಾಹಾಕಾರ ಮಾಡುತ್ತಿದ್ದಂತೆ ಕಾಲ ಕೆಳಗಿನ ಹಲಗೆ ಸರಿದು ರಾಯಣ್ಣನ ಶರೀರ ಹಗ್ಗದಿಂದ ನೇತಾಡತೊಡಗಿತು. ಇನ್ನೇನು ಎಲ್ಲ ಮುಗಿಯಿತು ಎನ್ನುವಷ್ಟರಲ್ಲಿ ಮೇಲಿನ ಹಗ್ಗ ಹರಿದು ರಾಯಣ್ಣನ ದೇಹ ಹಲಗೆಯ ಮೇಲುರುಳಿತು. ಎರಡನೆ ಸಲವೂ ಹಾಗೇ ಆಗಿ ಹಗ್ಗ ಹರಿಯಿತು. ಮೂರನೆ ಸಲ ಮಾತ್ರ ರಾಯಣ್ಣನ ಸುಂದರ ತುಟಿಗಳ ಮೇಲೆ ಮಂದಸ್ಮಿತ

ನರ್ತಿಸುತ್ತಿದ್ದಂತೆಯೇ ಅವನ ಜೀವ ಶಿವನ ಪಾದ ಸೇರಿಕೊಂಡಿತು" (ದೇಜಗೌ ಮತ್ತು ಸಿಪಿಕೆ, ೧೯೬೯, ಪುಟ-೧೬೩.) ಎಂದು ಲೇಖಕರು ಕರುಣಾಜನಕವೆನಿಸುವ ಕಥೆಯನ್ನು ಚಿತ್ರಿಸುತ್ತಾರೆ.

ಇವನ ವೀರಮರಣವನ್ನ ದೂರದಲ್ಲಿ ನಿಂತು ನೋಡುತ್ತಿದ್ದ ಆತ್ಮೀಯ ಗೆಳೆಯ ಬಿಚ್ಚುಗತ್ತಿ ಚೆನ್ನಬಸಪ್ಪ "ಬೈರಾಗಿಯಂತೆ ಮೈಗೆಲ್ಲಾ ಬೂದಿ ಬಳಿದುಕೊಂಡು, ಗೆಳೆಯನ ಸಮಾಧಿಯಿಂದ ತುಸು ದೂರದಲ್ಲಿರುವ ಹಾಳು ಗುಡಿಯಲ್ಲಿ ಬಿಡಾರ ಹೂಡಿದ್ದೇನೆ. ಮಳೆಗಾಲ ಪ್ರಾರಂಭವಾದ ನಂತರ ಆಲದ ಸಸಿಯೊಂದನ್ನು ತಂದು ಸಮಾಧಿಯ ಮೇಲೆ ನೆಡಬೇಕು. ಅನಂತರ ಆ ಸಸಿ ದೊಡ್ಡದಾಗಿ ಮರವಾಗುವುದನ್ನು ನೋಡುತ್ತಾ ಇಲ್ಲಿಯೇ ಕೊನೆಯುಸಿರು ಹಾಕಬೇಕು. ಸದ್ಯಕ್ಕಂತೂ ಇದೇ ನನ್ನ ಇಚ್ಛೆ" ಎಂದು ಹೃದಯವಿದ್ರಾವಕವಾಗಿ ಮಾತನಾಡುವ ದೃಶ್ಯವು ಓದುಗನನ್ನು ಸೆಳೆಯುತ್ತದೆ. ಮುಂದೆ ಕಿತ್ತೂರ ಸಂಸ್ಥಾನವು ಆಂಗ್ಲರ ಹಿಡಿತಕ್ಕೆ ಒಳಗಾಗಿ ಚನ್ನಮ್ಮನಂತಹ ಮಹಾ ಚೈತನ್ಯವನ್ನು ನಿಶ್ಚೇತನಗೊಳಿಸುತ್ತಲೇ ಸಾಗುತ್ತದೆ. ಪ್ರಸ್ತುತ ಸಂಗೊಳ್ಳಿ ನಾಯಕನ ಮೂಲಕ ಮತ್ತೊಮ್ಮೆ ಕಿತ್ತೂರನ್ನು ಬೆಳಗಿಸುವ ಕಡೆಗೆ ತಿರುಗಿಸುವ ಸಾಹಸದ ಕಥೆಯೆ ಕೊನೆಯಲ್ಲಿ ದುರಂತದಲ್ಲಿ ಮುಗಿಯುತ್ತದೆ. "ಆದರೆ ಅದು ದುರಂತವಲ್ಲ, ಇನ್ನೊಂದು ಬಗೆಯ ನೂತನ ಸೃಷ್ಟಿಗೆ ನಾಂದಿ" (ನಾಯಕ.ಹಾ.ಮಾ. ಗೌರೀಶ ಕಾಯ್ಕಿಣಿ, ೧೯೭೫, ಪುಟ-೧೩೪.) ಎಂದು ರಾಯನಾಯಕನ ಸಮಾಧಿಯ ಮೇಲೆ ಆಲದ ಮರವನ್ನು ಬೆಳಸಬೇಕೆಂದು ಮಳೆಯನ್ನು ಕಾಯುತ್ತಿದ್ದ ಗೆಳೆಯ ಬಿಚ್ಚುಗತ್ತಿ ಚನ್ನಬಸಪ್ಪನ ಮೂಲಕ ಜೀವಂತವಾಗಿ ಉಳಿಸುತ್ತದೆ.

ಹೀಗೆ ವೀರ ಯೋಧನೊಬ್ಬನ ಹೋರಾಟದ ಬದುಕು ಮುಕ್ತಾಯವನ್ನು ಕಾಣುತ್ತದೆ. ಇಲ್ಲಿ ಲೇಖಕರು ಚಿಕ್ಕದಾದರೂ ಚೊಕ್ಕವಾದ ನೇರವಾಗಿ ಸಹೃದಯರನ್ನು ತಲುಪುವ ಪರಿಣಾಮಕಾರಿ ಚಿತ್ರಣಗಳನ್ನು ನೀಡುತ್ತಾರೆ. ರಾಯನಾಯಕನ ಪಾತ್ರ ಉದಾತ್ತವಾಗಿ ಬೆಳೆದು ದುರಂತದೊಂದಿಗೆ ಮುಗಿಯುತ್ತದೆ.

ಕಟ್ಟೀಮನಿಯವರ 'ನರಗುಂದ ಬಂಡಾಯ' ಮತ್ತು 'ಸಂಗೊಳ್ಳಿ ರಾಯನಾಯಕ' ಕಾದಂಬರಿಗಳಲ್ಲಿ ಭಾರತ ಸ್ವಾತಂತ್ರ್ಯದ ನೇರ ಹೋರಾಟವನ್ನು ನಾವು ಕಾಣದೇ ಹೋದರೂ ಐತಿಹಾಸಿಕವಾದ ಈ ವಾಸ್ತವದ ಹೋರಾಟವು ಸ್ವಾತಂತ್ರ್ಯ ಪೂರ್ವದಲ್ಲಿ ಕಂಪನಿ ಸರ್ಕಾರದ ವಿರುದ್ಧ ನಡೆದುದು ಗಮನಾರ್ಹವಾಗಿದೆ. ಇಲ್ಲಿ ನರಗುಂದವಾಗಲಿ, ಕಿತ್ತೂರು ಆಗಲಿ ಕೇವಲ ತಮ್ಮ ಸಂಸ್ಥಾನವನ್ನು ಉಳಿಸಿಕೊಳ್ಳಲು ನಡೆದ ಹೋರಾಟವೆಂದರೂ ಅದರಲ್ಲಿ ಇಡಿ ದೇಶದ ಹೋರಾಟವೇ ಅಡಗಿದೆ.

ಸಂಗೊಳ್ಳಿ ರಾಯಣ್ಣನಂತೂ ಸಾಮಾನ್ಯ ಜನವರ್ಗದಿಂದಲೇ ಬಂದ ಜನನಾಯಕನಾಗಿ ಮೆರೆಯುತ್ತಾನೆ. ಐತಿಹಾಸಿಕ ಆವರಣಕ್ಕೆ ಎಲ್ಲಿಯೂ ಊನವಾಗದಂತೆ ಲೇಖಕರು ರಾಯನಾಯಕನ ಚರಿತ್ರೆಯನ್ನು ಅನಾವರಣಗೊಳಿಸುತ್ತಾರೆ. ಸಾಮಾನ್ಯ ಜನರೇ ಆ ರಾಜ ಮನೆತನಗಳ ಅಸ್ತಿತ್ವ ಮತ್ತು ಆಳ್ವಿಕೆಯ ಮೂಲಸ್ತಂಭ ಎಂಬುದನ್ನು ಇದು ಸಾರಿ ಹೇಳುತ್ತದೆ. ನಾಯಕನ ವರ್ಣನೆಯಲ್ಲಿ ಸಾಮಾನ್ಯ ಜನತೆಯ ಪ್ರೀತಿ ಅಭಿಮಾನಗಳು, ದೇಶಭಕ್ತಿ ಎದ್ದು ಕಾಣುತ್ತದೆ. ತಾವು ನಂಬಿದ ರಾಜ–ರಾಣಿಯರಿಗೆ ಜೀವದ ಹಂಗು ತೊರೆದು ಹೋರಾಡಿದ ನಾಯಕನಂಥ ಅಸಾಮಾನ್ಯ ವ್ಯಕ್ತಿತ್ವದ ಜೊತೆಗೆ ವೀರ–ಶೌರ್ಯಗಳ ಚಿತ್ರಣವನ್ನು ಕಾಣುತ್ತೇವೆ.

ಇಲ್ಲಿ ಕಟ್ಟೀಮನಿಯವರಲ್ಲಿನ ಐತಿಹಾಸಿಕ ವಸ್ತುವೊಂದು ಭಾಷೆ–ಶೈಲಿಯ ಕಲಾತ್ಮಕತೆಯನ್ನು ಪಡೆದುಕೊಂಡಿದೆ. ಸಾಹಿತ್ಯಿಕವಾಗಿ ಅವರನ್ನು ಮತ್ತಷ್ಟು ಎತ್ತರಕ್ಕೆ ನಿಲ್ಲಿಸುತ್ತದೆ. ಕಟ್ಟೀಮನಿಯವರ ನರಗುಂದ ಬಂಡಾಯ ಮತ್ತು ಸಂಗೊಳ್ಳಿ ರಾಯನಾಯಕ ಕಾದಂಬರಿಗಳಲ್ಲಿ ಐತಿಹಾಸಿಕ ಅಂಶಗಳು ಹೆಚ್ಚಾಗಿ ಕಂಡುಬಂದರೂ ಅವುಗಳಲ್ಲಿ ಲೇಖಕರ ಸಾಮರ್ಥ್ಯದಿಂದ ಮೂಡಿಬಂದ ಸಾಮಾಜಿಕ ಮೌಲ್ಯಗಳನ್ನು ವಿಶ್ಲೇಷಣೆಗೆ ಒಳಪಡಿಸುವುದು ಅಗತ್ಯವೆನಿಸುತ್ತದೆ. ಸ್ವಾತಂತ್ರ್ಯದ ಹೋರಾಟಕ್ಕೆ ತಮ್ಮನ್ನು ತಾವು ತೊಡಗಿಸಿಕೊಳ್ಳುವಲ್ಲಿ ಅವರ 'ಸ್ವಾತಂತ್ರ್ಯ'ದ ಮೌಲ್ಯವು ಕಟ್ಟೀಮನಿಯವರಲ್ಲಿ ಹೆಚ್ಚಾಗಿಯೇ ಬಿಂಬಿತವಾಗಿದೆ. ಸಂಸ್ಥಾನಗಳ ಅಳಿವು –ಉಳಿವು ಕಾಲಪ್ರವಾಹದಲ್ಲಿ ಸಿಕ್ಕು ಒಂದಿಲ್ಲಾ ಒಂದು ದಿನ ನಶಿಸುತ್ತವೆ ಮತ್ತೆ ಹುಟ್ಟುತ್ತವೆ. ಆದರೆ ಅಂದಿನ ಸಮಾಜದಲ್ಲಿ ಉಳಿದುಕೊಳ್ಳುವ ಮೌಲ್ಯಗಳು ಇಂದಿಗೂ ಪ್ರಸ್ತುತವೆನಿಸುತ್ತವೆ. ಅವುಗಳನ್ನು ಕಟ್ಟೀಮನಿಯವರ ಕಾದಂಬರಿಗಳು ಎತ್ತಿ ತೋರಿಸುತ್ತವೆ.

ಕಟ್ಟೀಮನಿಯವರ ಐತಿಹಾಸಿಕ ಹಾಗೂ ಸ್ವಾತಂತ್ರ್ಯಚಿತ್ರಣವನ್ನು ಒಳಗೊಂಡ ಕಾದಮಬರಿಗಳಲ್ಲಿಯೂ ಕಂಡು ಬರುವ ವಿಷಯ ಸ್ವಲ್ಪ ಹೆಚ್ಚು ಕಡಿಮೆ ಒಂದೇ: ತಮ್ಮ ತಮ್ಮ ಸಂಸ್ಥಾನಗಳನ್ನು ಉಳಿಸಿಕೊಳ್ಳುವುದು. ನರಗುಂದ ಬಂಡಾಯದಲ್ಲಿ ಭಾಸ್ಕರರಾಯನು ತನ್ನ ದುಡುಕಿನಿಂದ ನರಗುಂದವನ್ನು ಕಳೆದುಕೊಳ್ಳುತ್ತಾನೆ. ಪೌರುಷ ಪರೀಕ್ಷೆ ಅಸುರೀ ಶಕ್ತಿಯ ಓಡಿತದಿಂದ ಪಾರಾಗಿ ಮಂಗಳದಲ್ಲಿ ಕೊನೆಗೊಳ್ಳುತ್ತದೆ. ಅದೇ ಸಂಸ್ಥಾನ ಮುಂದೆ ಆಂಗ್ಲರ ಓಡಿತಕ್ಕೆ ಒಳಗಾಗಿ ಚನ್ನಮ್ಮನಂತಹ ಮಹಾ ಚೈತನ್ಯವನ್ನು ನಿಶ್ಚೇತನಗೊಳಿಸುತ್ತದೆ, ಅದನ್ನು ಮತ್ತೊಮ್ಮೆ ಮಂಗಳದ ಕಡೆಗೆ ತಿರುಗಿಸುವ ಸಾಹಸದ ಕಥೆಯೇ ಕೊನೆಯ ಕಾದಂಬರಿ 'ಸಂಗೊಳ್ಳಿ ರಾಯನಾಯಕ' ಆದರೆ ಅದು ವಿಫಲವಾಗಿ ಎಲ್ಲವೂ ದುರಂತದಲ್ಲಿ ಕೊನೆಗೊಳ್ಳುತ್ತದೆ. ನಿಜವಾಗಿ ನೋಡಿದರೆ ಅದು ದುರಂತವಲ್ಲ. ಇನ್ನೊಂದು ಬಗೆಯ ನೂತನ ಸೃಷ್ಟಿಗೆ ಅದು ನಾಂದಿ. ರಾಯನಾಯಕನ ಸಮಾಧಿಯ ಮೇಲೆ ಆಲದ ಮರ ಬೆಳೆಸಬೇಕೆಂಬ

ಚನ್ನಬಸಪ್ಪನ ಆಶಯ ಇದನ್ನು ಸಾಂಕೇತಿಕವಾಗಿ ನಿರೂಪಿಸಸತ್ತದೆನ್ನಬಹುದು. ಐತಿಹಾಸಿಕ ಕಾದಂಬರಿಗಳ ಚಿರಂತನತೆ ಇರುವುದು ಇಲ್ಲಿ. ಕಿತ್ತೂರನ್ನಾಗಲೀ ನರಗುಂದನ್ನಾಗಲೀ, ಝಾನ್ಸಿಯಾಗಲೀ ಇನ್ನಾವುದೇ ಸಂಸ್ಥಾನವನ್ನಾಗಲೀ ಯಾರೂ ಉಳಿಸುವುದು ಸಾಧ್ಯವಿರಲಿಲ್ಲ. ಬದಲಾಗುತ್ತಿರುವ ಕಾಲ ಪ್ರವಾಹದಲ್ಲಿ ಅವು ಅಳಿದು ಹೋಗಬೇಕಾಗಿದ್ದುದು ಸಹಜ. ಆದರೆ ಅವುಗಳ ನಿಮಿತ್ತ, ಮಾನವೀಚು ಮೌಲ್ಯಗಳನ್ನು ಮೆರೆಯುತ್ತವೆ. ಸ್ವಾತಂತ್ರ್ಯ ಹೋರಾಟದ ಕಾದಂಬರಿಗಳು. ಅಲ್ಲಿ ಸೋಲು ಗೆಲುವುಗಳು ಮುಖ್ಯ; ಮಾನವ ಬದುಕಿನ ಹೋರಾಟಕ್ಕೆ ಅವನ್ನು ಚಿರಂತನ ಸಂಕೇತವಾಗಿ ನಿಲ್ಲಿಸುವುದು. ಆ ಕೆಲಸ ಕಟ್ಟೀಮನಿಯವರ ಈ ಕಾದಂಬರಿಗಳಿಂದ ತಕ್ಕಮಟ್ಟಿಗೆ ನೆರವೇರಿದೆಯೆಂದು ಹೇಳಬಹುದು.

**ವಿ.ಎಂ. ಇನಾಂದಾರ ಅವರ ಸ್ವಾತಂತ್ರ್ಯ ನಂತರದ ಕಾದಂಬರಿಗಳಲ್ಲಿನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು**

ವಿ.ಎಂ. ಇನಾಂದಾರ ಅವರು 'ಶಾಪ', 'ಮೂರಾಬಟ್ಟೆ', 'ಕನಸಿನ ಮನೆ', 'ಈ ಪರಿಯ ಸೊಬಗು', ಸ್ವರ್ಗದ ಬಾಗಿಲು', ಚಿತ್ರಲೇಖೆ', 'ಊರ್ವಶಿ', 'ವಿಜಯ ಯಾತ್ರೆ' ಮೊದಲಾದ ಕಾದಂಬರಿಗಳನ್ನು ರಚಿಸಿದ್ದಾರೆ. ಇವುಗಳಲ್ಲಿ 'ಮೂರಾಬಟ್ಟೆ' ಮತ್ತು 'ವಿಜಯ ಯಾತ್ರೆ' ಕಾದಂಬರಿಗಳು ಸ್ವಾತಂತ್ರ್ಯದ ಹೋರಾಟದ ಚಿತ್ರಣಗಳನ್ನು ಕಟ್ಟಿಕೊಡುತ್ತವೆ. ಕನ್ನಡ ಕಾದಂಬರಿ ಲೋಕದ ಎತ್ತರ ಬಿತ್ತರಗಳನ್ನು ಹಾಸುಬೀಸುಗಳನ್ನು ಶ್ರದ್ಧಾಪೂರ್ವಕವಾಗಿ ಕಲಾತ್ಮಕವಾಗಿ ಉಚ್ಚಮಟ್ಟಕ್ಕೆ ವಿಸ್ತರಿಸಿ ಇತರ ಸಮಕಾಲೀನ ಭಾರತೀಯ ಸಾಹಿತ್ಯದ ಈ ಪ್ರಕಾರಕ್ಕೆ ಹೆಗಲೆಣೆಯಾಗಿ ಮೆರೆಸಿದವರಲ್ಲಿ ಇವರ ಹೆಸರು ಚಿರಸ್ಥಾಯಿಯಾಗಿದೆ. 'ಕಾದಂಬರಿಲೋಕ' ಎಂಬ ಅಭಿನಂದನ ಗ್ರಂಥವನ್ನು ಇವರ ಅಭಿಮಾನಿಗಳು, ಓದುಗರು, ಶಿಷ್ಯರು ಗೌರವ ಪೂರ್ವಕವಾಗಿ ಸಲ್ಲಿಸಿದ್ದಾರೆ. ಇತರ ಕಾದಂಬರಿಕಾರರಿಗೆ ಹೋಲಿಸಿದಾಗ ಸಂಖ್ಯಾ ಬಾಹುಳ್ಯದಿಂದ ಕಡಿಮೆಯೆನಿಸಿದರೂ, ಗುಣಮೌಲ್ಯದಿಂದ ಗಮನಾರ್ಹವಾದವುಗಳಾಗಿವೆ. ವಿಶಾಲವೂ ವೈವಿಧ್ಯಭರಿತವೂ ಆದ ಲೋಕಾನುಭವ ಜೀವನಾನುಭವಗಳು ಅವರ ಕೃತಿಗಳಲ್ಲಿ ಮಡುಗಟ್ಟಿವೆ. ಅವರ ಯಾವುದೇ ಕಾದಂಬರಿಯನ್ನು ತೆರೆದರೂ ವ್ಯಾಪಕವೂ ಸಾಂದ್ರವೂ ಸಂಕೀರ್ಣವೂ ಆದ ಬದುಕು ತನ್ನ ಗಹನವಾದ ಸಹಜರಮ್ಯತೆಯನ್ನು ತೋರುತ್ತದೆ.

ವಿ.ಎಂ. ಇನಾಂದಾರ್ ಅವರ ಕಾದಂಬರಿಗಳಲ್ಲಿ ಮುಖ್ಯವಾಗಿ ವೈಚಾರಿಕತೆ, ಸ್ವಾತಂತ್ರ್ಯ ಹೋರಾಟ, ದೇಶಭಕ್ತಿ ತಾಯ್ನೆಲದ ಜೀವಂತ ಪ್ರಜ್ಞೆ ಕಣ್ಣುಕಟ್ಟುವಂತೆ ಓದುಗನನ್ನು ಸೆಳೆಯುತ್ತವೆ. ಸಮಾಜ ಸುಧಾರಣೆ, ಶಿಕ್ಷಣ, ರಾಜಕೀಯ, ಡಂಭಾಚಾರ, ದೈವಶ್ರದ್ಧೆ, ಪ್ರಣಯ ವಾತ್ಸಲ್ಯ, ಸಮಾಜವಾದ, ಆಷಾಢಭೂತಿತನ ಕಾದಂಬರಿಯಲ್ಲಿ ಪ್ರಮುಖ ವಿಷಯವಸ್ತುಗಳಾಗಿವೆ. ಪ್ರಸ್ತುತ

ಅವರ 'ಮೂರಾಬಟ್ಟೆ' ಮತ್ತು 'ವಿಜಯಯಾತ್ರೆ' ಕಾದಂಬರಿಗಳು ಸ್ವಾತಂತ್ರ್ಯ ಹೋರಾಟದ ಭಾರತ ಚಿತ್ರಣವನ್ನು ಕೊಡುತ್ತವೆ. ಪ್ರಗತಿಶೀಲರ ಸಾಲಿನಲ್ಲಿ ವಿ.ಎಂ.ಇನಾಂದಾರ್ ಅವರು ಹೆಚ್ಚು ಪ್ರಖರವಾಗಿ ಕಾಣಿಸದಿದ್ದರೂ ಅವರಲ್ಲಿನ ಪ್ರಗತೀಶೀಲ ವೈಚಾರಿಕತೆಗಳು ಕಾದಂಬರಿ ರೂಪವನ್ನು ಪಡೆದುಕೊಂಡಿದ್ದನ್ನು ಗುರುತಿಸಬಹುದು. ಪ್ರಸ್ತುತ ಅವರ 'ವಿಜಯ ಯಾತ್ರೆ' ಕಾದಂಬರಿ ಭಾರತ ಸ್ವಾತಂತ್ರ್ಯ ನಂತರ ರಚನೆಗೊಂಡ ಕೃತಿ. ಇದರ ಕುರಿತು ಈ ಮಹಾಪ್ರಬಂಧದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

**ವಿಜಯ ಯಾತ್ರೆ: ೧೯೪೭**

'ವಿಜಯ ಯಾತ್ರೆ' ಸ್ವಾತಂತ್ರ್ಯ ದೊರೆತ ಉತ್ಸಾಹಾಚರಣೆಯ ತವಕದಿಂದ ತನ್ನ ಕೊನೆಯನ್ನು ಕಂಡುಕೊಳ್ಳುವ ಸ್ವಾತಂತ್ರ್ಯ ಹೋರಾಟಗಾರನ ದುರಂತ ಕತೆ. ೧೪-೮-೧೯೪೭ರಂದು ಬೆಳಿಗ್ಗೆ ಶುರುವಾಗಿ ೧೫-೦೮-೧೯೪೭ರ ಸಂಜೆ ಮುಕ್ತಾಯಗೊಳ್ಳುತ್ತದೆ. ೨೪ ಗಂಟೆಗಳ ಸ್ವಾತಂತ್ರ್ಯದ ಒಂದು ವಸ್ತುವಿಗೆ ಕಾಲದ ಪರಿಮಿತಿ ಇದ್ದರೂ ಲೇಖಕರ ಅನುಭವದ ವಿಸ್ತಾರವನ್ನು ಕಾಣುತ್ತೇವೆ. "ಈ ಪುಟ್ಟ ಕಾದಂಬರಿಯೇ ಪ್ರಥಮ ಬಾರಿಗೆ ರಾಷ್ಟ್ರೀಯ ಪ್ರಜ್ಞೆಯ ಮಾರ್ಪಾಟದ ಬಗೆಗೆ ಹೊಸದನಿ, ಹೊಸದಾಟಿಯಲ್ಲಿ ಮಾತಾಡಿತು" (ಇನಾಂದಾರ. ವಿ.ಎಂ. ೧೯೪೮, ಪುಟ-೧೦೧.) ಎಂಬುದು ಕಾದಂಬರಿಯ ಕುರಿತು ಗೌರೀಶ ಕಾಯ್ಕಿಣಿಯವರ ಅಭಿಪ್ರಾಯ.

ಮೂರಾಬಟ್ಟೆಯನ್ನು ಬರೆದ ವಿ.ಎಂ. ಇನಾಂದಾರರು ಸ್ವಾತಂತ್ರ್ಯ ಬಂದ ತಕ್ಷಣ ಎಂದರೆ ೧೯೪೮ರಲ್ಲಿ ಬರೆದ ಇನ್ನೊಂದು ವಿಶಿಷ್ಟ ಕಾದಂಬರಿ ಎಂದರೆ ವಿಜಯಯಾತ್ರೆ. ೧೯೪೭ರ ಅಗಸ್ಟ್ ೧೫ರಂದು ನಡೆದ ಸ್ವಾತಂತ್ರ್ಯೋತ್ಸವದ ಹಿನ್ನೆಲೆಯನ್ನು ಈ ಕಾದಂಬರಿ ಒಳಗೊಂಡಿದೆ ಕಥೆಯ ನಾಯಕ ವಿಜಯ ಮತ್ತು ಸ್ವಾತಂತ್ರ್ಯ ಹೋರಾಟಕ್ಕೆ ಸಿಕ್ಕ ವಿಜಯಗಳಿಗೆ, ಸ್ವಾತಂತ್ರ್ಯ ಸಿಕ್ಕ ಕೂಡಲೇ ಒದಗಿದ ಗತಿ ಈ ಕಾದಂಬರಿಯ ವಸ್ತುವಾಗಿದೆ. ಹಾಗೆಯೇ ಈ ಕಾದಂಬರಿಯ ತಂತ್ರದಲ್ಲಿ ಒಂದು ವೈಶಿಷ್ಟ್ಯವಿದೆ. ಲೇಖಕರು ತಮ್ಮ ಕೃತಿಯನ್ನು ಕುರಿತು ಮೂರನೆಯ ಮುದ್ರಣದ ಪ್ರಸ್ತಾವನೆಯಲ್ಲಿ ಮೂರಾಬಟ್ಟೆಯಲ್ಲಿ ಚಿತ್ರಿತವಾದ ರಾಜಕೀಯ ಹಿನ್ನೆಲೆಯು ಬೇರೊಂದು ದೃಷ್ಟಿಯಿಂದ ಮಹತ್ವದ್ದಾಗಿ ಚಾರಿತ್ರ್ಯಕ ಔಚಿತ್ಯ ಪಡೆದುದಾಗಿ ಅಭಿಪ್ರಾಯ ಪಡುತ್ತಾರೆ. ಎರಡೂ ಕಾದಂಬರಿಗಳ ನಡುವಿನ ವ್ಯತ್ಯಾಸವೇನೆಂದರೆ ಲೇಖಕರ ಮಾತಿನಲ್ಲಿ ಹೇಳುವುದಾದರೆ 'ಮೂರಾಬಟ್ಟೆ'ಯಲ್ಲಿನ ಹಿನ್ನೆಲೆ ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟಕ್ಕೆ ಅದರಲ್ಲಿಯೂ ೪೨ರಲ್ಲಿ ನಡೆದ ಚಳುವಳಿಗೆ ರಾಷ್ಟ್ರೀಯ ಜೀವನದಲ್ಲಿ ಒಂದು ಮಹಾ ಪ್ರವಾಹವಾಗಿ ಹರಿದು ಬಂದು ಅಲ್ಲಿಯ ನಾಯಕನಂತೆ ಅನೇಕರನ್ನು ಕೊಚ್ಚಿಕೊಂಡು

ಹೋದ ಧ್ಯೇಯನಿಷ್ಠೆಗೆ ಸಂಬಂಧಿಸಿದ್ದು. ಅಂದಿನ ಸಮರದಲ್ಲಿ ನುಗ್ಗಿದವರಿಗೆ ಮುಂದೆ ಐದೇ ವರ್ಷಗಳಲ್ಲಿ ತಮ್ಮ ಕನಸು ನನಸಾಗಬಹುದೆಂಬ ಎಣಿಕೆ ಕನಸು-ಮನಸ್ಸಿನಲ್ಲಿಯೂ ಇರಲಿಲ್ಲ. ಹಾಗೆಂದೇ ಅದರಲ್ಲಿ ನುಗ್ಗಿದವರ ಅಸಹನೆ, ಕಷ್ಟ, ಧ್ಯೇಯ, ನಿಷ್ಠೆ, ಬಿಡುಗಡೆಯ ಬಗೆಯಲ್ಲಿನ ಹಂಬಲ ಮೂಲತಃ ನಿಸ್ವಾರ್ಥವಾಗಿದ್ದವು. ಒಂದು ಆದರ್ಶದಿಂದ ಪ್ರೇರಿತವಾಗಿದ್ದವು.

ಆದರೆ ಎರಡನೆಯ ಮಹಾಯುದ್ಧ ಮುಗಿದು ಆಳರಸರ ಜೊತೆಯಲ್ಲಿ ನಡೆದ ಸಂಧಾನದ ಫಲವಾಗಿ ಸ್ವಾತಂತ್ರ್ಯ ಸಿಕ್ಕುವುದು ನಿಶ್ಚಿತವಾದಾಗ ಮುಂದಾಳುಗಳು ದೊಡ್ಡವರಾಗಿ ಹಿಂದಾಳುಗಳಾಗಿದ್ದವರು ಶ್ರದ್ಧಾವಂತ ಕಾರ್ಯಕರ್ತರಾಗಿದ್ದರೂ ಹಿಂದೆಯೇ ಉಳಿಯುವಂತಾಯಿತು. ಹೇಗಾದರೂ ಸರಿ ಎಂಥಾದರೂ ಸರಿ ಸ್ವಾತಂತ್ರ್ಯ ಬಂದರೆ ಸಾಕು ಎಂಬ ಮುಂದಾಳುಗಳ ಧೋರಣೆಯಲ್ಲಿ ಮೊದಲಿನ ಧ್ಯೇಯ-ನಿಷ್ಠೆ-ಸಂಕಲ್ಪಗಳಿಗೆ ಆಶ್ರಯವಿಲ್ಲದಾಯಿತು. ನಿಧಾನವಾಗಿ ಆದರೂ ಸ್ಪಷ್ಟವಾಗಿ ಕಾಣಿಸಿಕೊಂಡ ಮುಂದಾಳುಗಳ ಧೋರಣೆಯಲ್ಲಿಯ ಸಂಕುಚಿತ ಪರಿವರ್ತನೆಗಳು ಗಾಂಧೀಜಿಯವರು ಹಾಗೂ ಅವರ ನಿಷ್ಠಾವಂತ ಅನುಯಾಯಿಗಳು ಒಂದು ಕಡೆಯಾದರೆ ಮಹಾತ್ಮರ ಹೆಸರನ್ನು ಅವರ ಆದರ್ಶಗಳಿಂದ ದೂರವಾಗಿ ಸ್ವತಂತ್ರ ಭಾರತದ ಆಡಳಿತದಲ್ಲಿ ಅಧಿಕಾರ ಸ್ಥಾನದಲ್ಲಿ ಅಧಿಕಾರ ಸ್ಥಾನಮಾನಗಳನ್ನು ಪಡೆದವರು. ಇನ್ನೊಂದು ಕಡೆಯಾಗುವಂತೆ ಸ್ವಾತಂತ್ರ್ಯೋದಯ ಸಮಯದಲ್ಲಿಯೇ ರೂಪಿಸಿದವು.

ಇಲ್ಲಿ ಕಥಾ ನಾಯಕ ವಿಜಯ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಜೈಲು ಸೇರಿ ಕರುಳ ಬೇನೆಯನ್ನು ತಂದುಕೊಂಡು ನರಳುತ್ತಿರುತ್ತಾನೆ. ಆಸ್ಪತ್ರೆಯಲ್ಲಿ ಆತನ ಸಹಪಾಠಿ ಹಾಗೂ ಸ್ನೇಹಿತೆ ಮನೋರಮೆಯ ಪ್ರೀತಿಯ ಆರೈಕೆಯಲ್ಲಿ ಇದ್ದರೂ ಸ್ವಾತಂತ್ರ್ಯೋತ್ಸವವನ್ನು ವೀಕ್ಷಿಸುವ ಉತ್ಕಟೇಚ್ಛೆಯಿಂದ ಹೋಗಿ ತನ್ನ ಸಾವನ್ನು ತಂದುಕೊಳ್ಳುವ ಹೃದಯವಿದ್ರಾವಕ ಸನ್ನಿವೇಶಗಳಿಂದ ಈ ಕಾದಂಬರಿ ಕೊನೆಗೊಳ್ಳುತ್ತದೆ.

ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಾಗ ನಡೆಸಿದ ಉತ್ಸವದ ವೇಳೆಯಲ್ಲಿನ ಘಟನೆಗಳನ್ನು ಕಾದಂಬರಿಯಲ್ಲಿ ಸಾಂದರ್ಭಿಕವಾಗಿ ಚಿತ್ರಿಸಲಾಗಿದೆ. ಒಂದೆಡೆಯಲ್ಲಿ ದೇಶದ ಸ್ವಾತಂತ್ರ್ಯವಾದರೆ ಮತ್ತೊಂದೆಡೆ ಮತ, ಧರ್ಮದ ವೈಷಮ್ಯದ ಕರಾಳ ಕುಂಡ ಉರಿಯತೊಡಗಿದೆ. ದೇಶಕ್ಕೆ ಸ್ವಾತಂತ್ರ್ಯ ಲಭಿಸುತ್ತದೆ ಎಂಬ ಸುದ್ದಿ ತಿಳಿಯುವುದೇ ತಡ ರಾಜಕೀಯ ನಾಯಕರೆಲ್ಲ ಅಧಿಕಾರ ಹಂಚಿಕೊಳ್ಳುವ ಉತ್ಸಾಹದಲ್ಲಿದ್ದರೆ; ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವಿಜಯನಂಥ ಎಷ್ಟೋ ದೇಶಾಭಿಮಾನಿಗಳಿಗೆ ನಿರಾಶೆ ಆವರಿಸುತ್ತದೆ. ನಾಳೆಗೆ ದೊರಕುವುದು ರಾಜಕೀಯ ಸ್ವಾತಂತ್ರ್ಯ.

ನಿಜವಾದ ಸ್ವಾತಂತ್ರ್ಯದ ಅರ್ಥವನ್ನು ಹೊಂದಬೇಕಾದದ್ದು ಇನ್ನು ಬಾಕಿ ಇದೆ. (ಇನಾಂದಾರ.ವಿ.ಎಂ., ೧೯೪೪, ಪುಟ-೯೭)

ಸ್ವಾತಂತ್ರ್ಯಕ್ಕಾಗಿ ಹೋರಾಡಿದ ದೇಶಭಕ್ತರು ಆಸ್ಪತ್ರೆಯಲ್ಲಿ ನರಳುತ್ತಿದ್ದರೆ, ರಾಜಕೀಯ ನಾಯಕರು ಅವರನ್ನು ಗಮನಿಸದೆ ಉತ್ಸವಾಚರಣೆಯ ತವಕದಲ್ಲಿದ್ದಾರೆ. ಗಾಂಧಿ ಅಹಿಂಸಾವಾದವನ್ನು ಒಪ್ಪದವರೆ ರಾಷ್ಟ್ರದ ಆಡಳಿತ ಸೂತ್ರವನ್ನು ಹಿಡಿಯಲಿದ್ದಾರೆ. ಗಾಂಧೀಜಿಯವರು ಬೋಧಿಸುತ್ತಿದ್ದ ಆದರ್ಶವನ್ನು ವ್ಯವಹಾರಿಕವಾಗಿ ಹೊಂದಿಸಿಕೊಂಡು ಹೋಗುವುದು ಅಸಾಧ್ಯವೆಂಬುದನ್ನು ರಾಜಕೀಯ ಮುಂದಾಳುಗಳು ಸ್ವಾತಂತ್ರ್ಯ ಲಭಿಸುವ ಮೊದಲೇ ವ್ಯಕ್ತಪಡಿಸಿದ್ದರು. "ಕಾವಿಬಟ್ಟೆಯ ಜೋಳಿಗೆಯಲ್ಲಿ ಸ್ವಾತಂತ್ರ್ಯವನ್ನು ಭಿಕ್ಷೆಯಾಗಿ ಯಾರೂ ಹಾಕುವುದಿಲ್ಲ" (ಇನಾಂದಾರ. ವಿ.ಎಂ. ೧೯೪೪, ಪುಟ-೫೪.) ಎಂದು ಹೇಳುವ ಮೋರೋಪಂಥನ ಮಾತುಗಳನ್ನು ರಂಗಣ್ಣನು ಸಹ ಒಪ್ಪಿಕೊಳ್ಳುತ್ತಾನೆ. ಹೀಗೆ ಹೇಳುವ ಮೋರೋಪಂಥನ ಮಾತುಗಳಲ್ಲಿ ಅಂದಿನ ಸ್ವಾತಂತ್ರ್ಯವು ಯಾರಿಗಾಗಿ ಮತ್ತು ಏತಕ್ಕಾದರೂ ಸಿಗುತ್ತಿದೆ? ಅದರಿಂದ ಯಾರಿಗೆ ಉಪಯೋಗ? ಸಮಸ್ತ ಭಾರತೀಯರಿಗೋ ಅಥವಾ ರಾಜಕೀಯ ನಾಯಕರಿಗೋ! ಎಂಬ ದುಗುಡವನ್ನು ಊಹಿಸಬಹುದು.

ಚಳುವಳಿಯಲ್ಲಿ ಪಾಲ್ಗೊಂಡು ಜೈಲುಸೇರಿ ಕ್ಷಮಾಪಣೆ ಪಡೆದು ಹೊರಬಂದ ರಂಗಣ್ಣ ಮುಂದೆ ಉಪ ಸಚಿವನಾಗುತ್ತಾನೆ. ಗ್ರಾಮೋದ್ಯೋಗಗಳ ಬೆಳವಣಿಗೆ ಕುರಿತು ಮಾತನಾಡುತ್ತಾನೆ. ಗ್ರಾಮೀಣ ಜನತೆಗೆ ಸರ್ಕಾರ ಕೊಡುವ ಸವಲತ್ತುಗಳನ್ನು ಪ್ರಶಂಸಿತ್ತಾನೆ. 'ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು ಕುರಿಗಳನ್ನು ಆಳಲು ಅಸಾಧ್ಯ' ಎಂಬ ಸತ್ಯವನ್ನು ವಿಜಯನು ರಂಗಣ್ಣನಿಗೆ ಮಾರ್ಮಿಕವಾಗಿ ಮುಟ್ಟಿಸುತ್ತಾನೆ. ಇಲ್ಲಿ ವಿಜಯನ ಸ್ವಾತಂತ್ರ್ಯ ಆಕ್ರೋಶವನ್ನು ಕಾಣುತ್ತೇವೆ. ಸ್ವಾತಂತ್ರ್ಯ ಸಿಕ್ಕಿರುವುದು ಸಾಮ್ರಾಜ್ಯಶಾಹಿಗಳಿಂದ, ಅಧಿಕಾರಶಾಹಿಗಳಿಂದ ಮುಕ್ತಿಯನ್ನು ಪಡೆಯದ ಹೊರತು ಮತ್ತೆ ಅದೇ ದರ್ಪ ಅಧಿಕಾರದಲ್ಲಿ ಕುಳಿತ ರಾಜಕಾರಣಿಗಳು ದೇಶವನ್ನು ನಿಯಂತ್ರಿಸುವ ಕುತಂತ್ರವನ್ನು ತೋರಿಸುವ ಚಿತ್ರಣವನ್ನು ರಂಗಣ್ಣನ ರಾಜಕೀಯ ಆಶ್ವಾಸನೆಗಳನ್ನು ವಿರೋಧಿಸುವ ಮೂಲಕ ವಿಜಯ ತನ್ನ ಸ್ವಾತಂತ್ರ್ಯ ವಾಸ್ತವತೆಯನ್ನು ತೋರ್ಪಡಿಸುತ್ತಾನೆ.

ಸ್ವಾತಂತ್ರ್ಯೋತ್ಸವ ಆಚರಿಸುವ ವೇಳೆ ಗಾಂಧೀ ದೆಹಲಿಯಲ್ಲಿ ಇರಲಿಲ್ಲ. ನೌಕಾಲಿಯಲ್ಲಿ ಜಾತಿಯ ದ್ವೇಷಗಳನ್ನು ಹತ್ತಿಕ್ಕಲು ಪಾದಯಾತ್ರೆ ಕೈಗೊಂಡಿದ್ದರು. ಇವರನ್ನು ಮರತೇ ಜನರು ಸ್ವಾತಂತ್ರ್ಯೋತ್ಸವವನ್ನು ಆಚರಿಸಿದರು. ಆದರೆ ಗಾಂಧೀಜಿ ಮಾತ್ರ ಉಪವಾಸವನ್ನು ಆಚರಿಸಿದರು. ಸ್ವಾತಂತ್ರ್ಯ ಬಂದ ಹುಮ್ಮಸ್ಸಿನಿಂದ ರಾಜಕೀಯ ನಾಯಕರಲ್ಲಿ ಅಹಂಕಾರ ದುರಭಿಮಾನ

ಸೇರಿಕೊಂಡವು. ಜನರ ಈ ಪ್ರವೃತ್ತಿಯನ್ನು ಕಂಡು ಅಂದಿನ ಗಾಂಧಿವಾದಿಗಳು ಸ್ವತಂತ್ರ ಭಾರತದ ಭವಿಷ್ಯದ ಬಗ್ಗೆ ಸಂದೇಹ ವ್ಯಕ್ತಿಪಡಿಸಿದರು.

ಸ್ವಾತಂತ್ರ್ಯದ ಆಚರಣೆಯ ದಿನ ಧ್ವಜವಂದನೆ ಮಾಡಲು ಉತ್ಸಾಹದಿಂದ ಬಂದ ಆಂಗ್ಲ ಕಲೆಕ್ಟರ್ ಒಬ್ಬನನ್ನು ತಡೆಯುವುದನ್ನು ಕಂಡು ತನ್ನ ಕೈಯಿಂದ ತಮ್ಮ ರಾಷ್ಟ್ರ ಧ್ವಜವನ್ನು ಇಳಿಸಿ ನಮ್ಮ ಧ್ವಜವನ್ನು ಏರಿಸಬೇಕೆಂಬ ಉದಾರ ಬುದ್ಧಿಗೆ ಬಾಯಿಯಿಲ್ಲದೇ ಹೋಯಿತು (ಇನಾಂದಾರ.ವಿ.ಎಂ. ೧೯೪೮, ಪುಟ-೫೮.) ಎಂದು ವಿಜಯನು ವಿಷಾದವನ್ನು ವ್ಯಕ್ತಪಡಿಸುತ್ತಾನೆ. "ಊರಿನ ಚಿಕ್ಕ ಬಯಲಿನಲ್ಲಿ ಗಾರ್ಡ್ ಆಫ್ ಆನರ್ ಮತ್ತು ಪರೇಡ್ ಮಾಡಲು ಅನುಕೂಲವಾಗುವದಿಲ್ಲವೆಂದು ಪೋಲೀಸ್ ಅಧಿಕಾರಿ ಹೇಳಿದರು. ಇವರು ಇನ್ನ ಮೇಲೆ ಮೊದಲಿನಂತೆ ತಮ್ಮ ದರ್ಪವನ್ನ ನಡೆಸಲಾಗುವುದಿಲ್ಲ ಎನ್ನುವದು ತಿಳಿದಂತೆ ಕಾಣುವುದಿಲ್ಲ (ಇನಾಂದಾರ. ವಿ.ಎಂ. ೧೯೪೮, ಪುಟ-೫೮.) ಎನ್ನುವ ರಾಜಕೀಯ ಧುರಿಣರ ದುರಭಿಮಾನದ ಮಾತುಗಳನ್ನು ಕೇಳಿಯೇ ಗಾಂಧಿವಾದಿಗಳು ಪಶ್ಚಾತ್ತಾಪ ಪಟ್ಟರು.

"ಕಾರ್ಯಕ್ರಮವನ್ನು ಗೊತ್ತು ಪಡಿಸುವದರಲ್ಲಿಯೇ ಇಷ್ಟು ಗೊಂದಲವನ್ನು ಎಬ್ಬಿಸಿದವರು ನಾಳೆ ಅವನ್ನು ನಡೆಸಿಕೊಂಡು ಹೋಗುವುದು ಹೇಗೆ?" (ಇನಾಂದಾರ. ವಿ.ಎಂ. ೧೯೪೮, ಪುಟ-೯೮.) ಎಂಬ ಮಾತುಗಳಲ್ಲಿ ಮುಂದಿನ ಭಾರತದ ಭವಿಷ್ಯದ ಅತಂತ್ರತೆಯನ್ನು ಸೂಚಿಸುತ್ತಾರೆ ಕಾದಂಬರಿಕಾರರು. "ನಾವಿನ್ನೂ ಸ್ವಾತಂತ್ರ್ಯಕ್ಕೆ ಅರ್ಹರಾಗಲಿಲ್ಲ..... ಸ್ವಾತಂತ್ರ್ಯ ಸಿಕ್ಕರೂ ನಮ್ಮ ಪಾಲಿಗೆ ಸಮಸ್ಯೆ ಆದೀತು ಹೊರತಾಗಿ ಜನರ ಸುಖಕ್ಕೆ, ಹಿತಕ್ಕೆ ಸಾಧನವಾಗಲಿಕ್ಕಿಲ್ಲ." (ಶೇಷಗಿರಿರಾವ್. ಎಲ್.ಎಸ್. ೧೯೫೭.) ಈ ಮಾತುಗಳಲ್ಲಿ ವಿಜಯನಿಂದ ಸ್ವಾತಂತ್ರ್ಯ ನಂತರದ ಭಾರತಕ್ಕೆ ಭವ್ಯವಾದ ಭವಿಷ್ಯವನ್ನು ಕಲ್ಪಿಸುವುದು ರಾಜಕಾರಣಿಗಳಿಂದ ಅಸಾಧ್ಯವೆಂದು ಲೇಖಕರು ಕಳವಳ ವ್ಯಕ್ತಪಡಿಸುತ್ತಾರೆ. ಅಂದು ಸ್ವಾತಂತ್ರ್ಯಕ್ಕಾಗಿ ಹೋರಾಡಲು ದೈಹಿಕವಾಗಿ ಹೋರಾಡಲು ನಿಶ್ಶಕ್ತನಾದ ವಿಜಯನಿಗೆ ಆದರ್ಶವನ್ನು ಸಾಧಿಸದೇ ಇರುವುದಕ್ಕಾಗಿ ಆತನಿಗೆ ಆದ ವಿಷಾದ ದಿನಚರಿಯ ಪುಟಗಳಲ್ಲಿ ಮನಕರಗುವಂತೆ ಮೂಡಿಬಂದಿದೆ.

ವಿಜಯ ಭಾರತಕ್ಕೆ ಸ್ವಾತಂತ್ರ್ಯ ದೊರೆತಾಗ ಮನೋರಮೆಯನ್ನು ಮದುವೆಯಾಗುತ್ತೇನೆಂದು ಮಾತು ಕೊಟ್ಟಿದ್ದರಿಂದ ಆಕೆ ಇಮ್ಮಡಿ ಉತ್ಸಾಹದಲ್ಲಿದ್ದಾಳೆ. ದೇಶಕ್ಕಾಗಿ ಹೊರಾಡಿದ ಅದೆಷ್ಟೋ ರೋಗಿಗಳ ಆರೈಕೆ ಅವಳ ಪಾಲಿಗೆ ಜೊತೆಗೆ ವಿಜಯನದೂ ಸಹ ಆದರೆ ಉತ್ಸವದ ದಿನ ವಿಜಯನ ಅಂತ್ಯವಾಗುತ್ತದೆ ಎಂದು ಅನ್ನಿಸಿರಲಿಲ್ಲ. ವಿಜಯ ಯಾತ್ರೆ ಕಾದಂಬರಿಯ ಶೀರ್ಷಿಕೆಯೇ ಶ್ಲೇಷೆಯಿಂದ ಕೂಡಿರುವುದು. ಸ್ವಾತಂತ್ರ್ಯ ದೊರಕಿದ ವಿಜಯೋತ್ಸವವನ್ನು ಮತ್ತು ವಿಜಯ ಎನ್ನುವ ಆದರ್ಶವಾದಿ ಸ್ವಾತಂತ್ರ್ಯ ಯೋಧನ

ಸ್ಮಶಾನಯಾತ್ರೆಯನ್ನು ಒಂದೇ ದಿನ ನಡೆಸಿ ವಿಜಯ ಯಾತ್ರೆ, ವಿಜಯನ ಸ್ಮಶಾನ ಯಾತ್ರೆಯಾಗಿ; ನಮ್ಮ ದೇಶಾಭಿಮಾನದ ನೆಲೆಯನ್ನು ಅದುರಿಸುತ್ತದೆ.

ಕಾದಂಬರಿಯಲ್ಲಿ "ಮೊದಲಿನಿಂದ ವಿಜಯನನ್ನು ಮುಸುಕಿದ ವಿಷಾದದ ಬೇರು ಅವನ ವೈಯಕ್ತಿಕ ಜೀವನದಲ್ಲಿದೆ. ಸ್ವಾತಂತ್ರ್ಯ ಉದಯವಾದರೆ ಅವನು ವ್ಯಕ್ತಪಡಿಸುವ ನಿರಾಸೆಗೆ ಕಾದಂಬರಿಯಲ್ಲಿ ತಕ್ಕಷ್ಟು ಆಧಾರವಿಲ್ಲ ಎನ್ನುವುದು ಕೃತಿಯ ಪರಿಣಾಮವನ್ನು ದುರ್ಬಲಗೊಳಿಸುತ್ತದೆ..." (ಮೋಹನ್ ಕುಂಟಾರ್, ೧೯೯೪, ಪುಟ-೧೯.) ಎಂದು ಎಲ್.ಎಸ್. ಶೇಷಗಿರಿರಾವ್ ವಿಮರ್ಶಿಸುತ್ತಾರೆ.

ಮೂರಾಬಟ್ಟೆಯಲ್ಲಿ ಹೆಣ್ಣು-ಗಂಡಿನ ವಿವಾಹ ಪೂರ್ವ ಲೈಂಗಿಕ ಮೂಲದ ಸಂಬಂಧದ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಹೋರಾಟದ ಚಿತ್ರಣವಿದ್ದರೆ 'ವಿಜಯ ಯಾತ್ರೆ' ಕಾದಂಬರಿಲ್ಲಿ ಆದರ್ಶವಾದಿ ಕಾಲೇಜು ವಿದ್ಯಾರ್ಥಿ ವಿದ್ಯಾರ್ಥಿನಿಯರ ದೇಶ ಸೇವೆ ಹಂಬಲದ ನಡುವೆ ಪರಸ್ಪರ ಗುಣಗಳಿಂದ ಪ್ರೇಮಾಕರ್ಷಣೆಗೆ ಒಳಗಾಗುವ ಆದರ್ಶದ ಪ್ರೇಮದ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಹೋರಾಟ ಮತ್ತು ಅದರ ವಿಜಯೋತ್ಸವಗಳ ಚಿತ್ರ ಇದೆ. ಇಲ್ಲಿನ ತಂತ್ರ ವಿಶಿಷ್ಟವಾದುದು. ಕಥೆ ಕೇಂದ್ರ ಪಾತ್ರ 'ವಿಜಯ' ಮತ್ತು ಅವನ ಆತ್ಮೀಯಳಾದ 'ಮನೋರಮೆ' ಇವರ ನೆನಪುಗಳ ನೆಲೆಯಲ್ಲಿಯೇ ಬಹುಮಟ್ಟಿಗೆ ಕಾದಂಬರಿಯು ಸಾಗುತ್ತ ದೇಶದ 'ವಿಜಯ ಯಾತ್ರೆ' ವಿಜಯನ ಅಂತ್ಯದ ಯಾತ್ರೆಯೊಂದಿಗೆ ಕೊನೆಗೊಳ್ಳುತ್ತದೆ. ಒಟ್ಟಿನಲ್ಲಿ ಸ್ವಾತಂತ್ರ್ಯದ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಈ ಕಾದಂಬರಿ ಐತಿಹಾಸಿಕ ಮಹತ್ವವನ್ನು ಪಡೆಯುತ್ತದೆ. ನಿರ್ಧಿಷ್ಟ ವ್ಯಕ್ತಿಗಳನ್ನೊಳಗೊಂಡಿಲ್ಲವಾದರೂ ಸನ್ನಿವೇಶದ ಹಿನ್ನೆಲೆಯಿಂದ ನಿರ್ದಿಷ್ಟವಾದ ಕಾಲವನ್ನು ಪ್ರತಿನಿಧಿಸುತ್ತದೆ. ಸಮಕಾಲೀನ ಘಟನೆಗಳಿಂದಲೇ ಪ್ರಚೋದನೆಗೊಂಡ ಇಂತಹ ಕಾದಂಬರಿಗಳು ಕನ್ನಡ ಸಾಹಿತ್ಯಕ್ಕೆ ಇನಾಂದಾರರ ವಿಶಿಷ್ಟ ಕೊಡುಗೆ. (ಕೃಷ್ಣರಾಯರು.ಅ.ನ ಸಂ. ೨, ಮುನ್ನುಡಿ ಪುಟ-೧೦.)

### ಅನಕೃ ಅವರ ಸ್ವಾತಂತ್ರ್ಯ ನಂತರದ ಕಾದಂಬರಿಗಳಲ್ಲಿನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು

ಅನಕೃ ನೂರಾ ಹತ್ತಕ್ಕೂ ಹೆಚ್ಚು ಕಾದಂಬರಿಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಸ್ವಾತಂತ್ರ್ಯ ಹೋರಾಟದ ಚಿತ್ರಣವನ್ನು ಒಳಗೊಂಡ ಕಾದಂಬರಿ ಎಂದರೆ "ಅಮರ್ ಅಗಸ್ಟ್" ಮತ್ತು "ಹೇಗಾದರೂ ಬದುಕೋಣ" ಎಂಬುವವು ಪ್ರಮುಖವಾಗುತ್ತವೆ. ಪ್ರಸ್ತುತ ಮಹಾಪ್ರಬಂಧದಲ್ಲಿ ಪ್ರಗತಿಶೀಲ ಲೇಖಕರ ಕಾದಂಬರಿಗಳಲ್ಲಿನ ಸ್ವಾತಂತ್ರ್ಯದ ಚಿತ್ರಣವನ್ನು ವಿಶ್ಲೇಷಿಸುವದರಿಂದ ಇವರ ಈ ಎರಡೂ ಕಾದಂಬರಿಗಳು ಅಧ್ಯಯನದ ವ್ಯಾಪ್ತಿಗೆ ಬರುತ್ತವೆ. ಮುಖ್ಯವಾಗಿ ಕೃಷ್ಣರಾಯರು ಮೊದಲಿನಿಂದಲೂ ಬಂಡಾಯ ಮನೋವೃತ್ತಿಯವರು. ಅವರ ತಂದೆ

ಬ್ರಿಟೀಷವಾದಿಯಾಗಿದ್ದರು. ಕೃಷ್ಣರಾಯರು ದೇಶಪ್ರೇಮಿಗಳಾಗಿದ್ದರು. ಕೆಲವು ವೇಳೆ ತಂದೆ ಮಗನಲ್ಲಿ ಮಾತಿನ ಚಕಮಕಿ ನಡೆಯುತ್ತಿತ್ತು. ಆದರೆ ಅವರೆಂದೂ ತನ್ನ ಮನಸ್ಸಿನ ವಿರುದ್ಧ ನಡೆದುಕೊಳ್ಳಲಿಲ್ಲ. ತಂದೆಯ ಹಂಗಿನಲ್ಲಿದ್ದರೂ ತನ್ನ ತತ್ತ್ವ ಬಿಟ್ಟುಕೊಡಲಿಲ್ಲ..ಈ ರೀತಿಯ ದಿಟ್ಟ ಮನೋಧೋರಣೆಯನ್ನು ಅವರ ಸ್ವಾತಂತ್ರ್ಯ ಹೋರಾಟದ ಕಾದಂಬರಿಗಳಲ್ಲಿ ಪ್ರಭಾವ ಬೀರಿರುವುದನ್ನು ಕಾಣುತ್ತೇವೆ. "ಅನಕೃ ಅವರನ್ನು ಕನ್ನಡದ ಪ್ರಗತಿಶೀಲ ಕಾದಂಬರಿಗಳ ಜನಕ ಎನ್ನಬಹುದು". (ಅನಕೃ, ೨೦೧೩, ಮುನ್ನುಡಿ.) ವಾಸ್ತವಮಾರ್ಗದ ಸಾಮಾಜಿಕ ಕಾದಂಬರಿಗಳನ್ನು ರಚಿಸಿದ ಶ್ರೇಯಸ್ಸು ಅ.ನ.ಕೃ. ಅವರಿಗೆ ಸಲ್ಲುತ್ತದೆ. ಸಾಹಿತ್ಯ ಸಾಮಾನ್ಯ ಜನತೆಯ ಜೀವದುಸಿರಾಗಬೇಕೆಂಬ ಪ್ರಗಶೀಲರ ಪ್ರಜ್ಞೆಯನ್ನು ಅವರ ಕಾದಂಬರಿಗಳಲ್ಲಿ ಕಾಣುತ್ತೇವೆ. ಪ್ರಗತಿಶೀಲ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಹೋರಾಟವನ್ನೇ ವಸ್ತುವನ್ನಾಗಿಸಿಕೊಂಡು ಬರೆದ ಲೇಖಕರಲ್ಲಿ ಅನಕೃ ಅವರೂ ಒಬ್ಬರು. ವಸಾಹತುವಿನಿಂದ ವಿಮೋಚನೆ ಹೊಂದುವುದು ಮಾರ್ಕ್ಸ್‌ವಾದದ ಭಾಗವೇ ಆಗಿದ್ದರಿಂದ ಪ್ರಗತಿಶೀಲರು ಸ್ವಾತಂತ್ರ್ಯ ಚಳುವಳಿಯಲ್ಲಿ ತೊಡಗಿಸಿಕೊಂಡರು. ರಾಜಕೀಯ ಕ್ಷೇತ್ರ ಪ್ರಗತಿಶೀಲರ ಪ್ರಭಾವದಿಂದಾಚೆಗೆ ಉಳಿದುಕೊಳ್ಳುವಂತಹ ಕಾದಂಬರಿಗಳನ್ನು ಅನಕೃ ಅವರು ರಚಿಸಿದರು. ಪ್ರಸ್ತುತ ಅವರ 'ಅಮರ್ ಅಗಸ್ಟ್' ಮತ್ತು 'ಹೇಗಾದರೂ ಬದಕೋಣ' ಕಾದಂಬರಿಗಳಲ್ಲಿ ರೈತರ, ಕೂಲಿಕಾರ್ಮಿಕರ, ದೀನ, ದಲಿತರ ಕುರಿತು ಸ್ವಾತಂತ್ರ್ಯ ಪೇಮವನ್ನು, ದೇಶಭಕ್ತಿಯನ್ನು ಚಿತ್ರಿಸುತ್ತಾರೆ.

ಪ್ರಸ್ತುತ ಮಹಾಪ್ರಬಂಧದಲ್ಲಿ ಸ್ವಾತಂತ್ರ್ಯ ನಂತರದ ಸ್ವಾತಂತ್ರ್ಯ ಹೋರಾಟವನ್ನು ಕುರಿತು ವಿಶ್ಲೇಷಣಾತ್ಮಕವಾಗಿ 'ಅಮರ್ ಅಗಸ್ಟ್' ಮತ್ತು 'ಹೇಗಾದರೂ ಬದುಕೋಣ' ಕಾದಂಬರಿಗಳನ್ನು ಅಧ್ಯಯನ ಕೈಗೊಳ್ಳಲಾಗಿದೆ. ಇವುಗಳಲ್ಲಿ ಹೆಚ್ಚಾಗಿ ಸ್ವತಂತ್ರ ಭಾರತದಲ್ಲಿ ಸ್ವಾತಂತ್ರ್ಯದ ಕುರಿತು ಜನರಲ್ಲಿದ್ದ ಸಾಮಾಜಿಕ ಜೀವನದ ಚಿತ್ರಣವನ್ನು ಕಾಣುತ್ತೇವೆ.

**ಅಮರ ಅಗಸ್ಟ್ (೧೯೫೦)**

ಭಾರತದ ಭವ್ಯ ಇತಿಹಾಸದಲ್ಲಿ ೧೯೪೨ರ ಅಗಸ್ ತಿಂಗಳು ನಡೆದ ಮಹಾಕ್ರಾಂತಿ ಒಂದು ಸುವರ್ಣಪುಟ. ಸಾಮ್ರಾಜ್ಯಶಾಹಿ ಆಳರಸರು, ಅಧಿಕಾರದ ಮತ್ತಿನಲ್ಲಿದ್ದ ಬ್ರಿಟೀಷ್ ಕುನ್ನಿಗಳು ಭಾರತವನ್ನು ಇಂಚಿಂಚು ದೋಚುತ್ತಿದ್ದರು. ಇದರ ವಿರುದ್ಧ ನಡೆದ ಅಗಸ್ಟ್ ತಿಂಗಳ ಚಳುವಳಿ ದೇಶಾದ್ಯಂತ ಉಗ್ರ ಸ್ವರೂಪವನ್ನು ಪಡೆದು ಹಿಂದೆಂದೂ ಆಗದ ರೀತಿಯಲ್ಲಿ ಹೋರಾಟಗಳು ಬುಗಿಲೆದ್ದವು. ಲೇಖಕರೇ ಮುನ್ನುಡಿಯಲ್ಲಿ ಹೇಳುವಂತೆ "ಭಾರತ ಸ್ವಾತಂತ್ರ್ಯ ಚಳುವಳಿ ಕೇವಲ ಪಟ್ಟಣಗಳಿಗೆ, ನಾಗರಿಕರಿಗೆ ಮೀಸಲಾಗಲಿಲ್ಲ. ಎಂದಿನವರೆಗೆ ಅದು

ಮೈನೋವು ಮಾಡಿಕೊಳ್ಳದ ರಾಜಕೀಯ ಚದುರಂಗದ ಆಟಗಾರರ ಕೈಗೊಂಬೆಯಾಗಿತ್ತೋ ಅಂದಿನವರೆಗೆ ಪರಿಸ್ಥಿತಿ ಸುಧಾರಿಸಲಿಲ್ಲ. ನಮ್ಮ ನಡೆ ಮುಂದು ಸಾಗಲಿಲ್ಲ. ಭರತ ದಿಗಂತದಲ್ಲಿ ಬಾಪೂ ಬೆಳಗಿದಂದು ನಮ್ಮ ಅರಣೋದಯವಾಯಿತು. ಸ್ವಾತಂತ್ರ್ಯಾಕಾಂಕ್ಷೆ ಅದಕ್ಕೆ ಬೇಕಾದ ಸಾಧನ ಭಾರತದ ಹಳ್ಳಿಹಳ್ಳಿಗಳಲ್ಲಿ ಹಬ್ಬಿತ್ತು." (ಅನಕೃ, ೨೦೧೩, ಮುನ್ನುಡಿ.) ಅಂಥ ಚಿತ್ರಣಗಳನ್ನು 'ಅಮರ ಅಗಸ್ಟ' ಕಾದಂಬರಿ ಬಿತ್ತರಿಸುತ್ತದೆ.

ಒಂದು ಕುಗ್ರಾಮವನ್ನು ಕೇಂದ್ರವಾಗಿಟ್ಟುಕೊಂಡು ಇಲ್ಲಿ ಲೇಖಕರು ಕ್ರಾಂತಿಯ, ಹೋರಾಟದ ಕಥೆಯನ್ನು ನಮಗೆ ಹೇಳುತ್ತಾರೆ. ಸಾಧು ವಾಸ್ವಾನಿಯವರು ಒಮ್ಮೆ ಹೇಳಿದರು 'ದಬ್ಬಾಳಿಕೆ–ನಮ್ಮನ್ನು ಒಯ್ಯುವುದೆಲ್ಲಿಗೆ? ಸ್ವಾತಂತ್ರ್ಯದ ಹೆಬ್ಬಾಗಿಲಿಗೆ!' ಹಿಂದಿನ ಬಂಗಾಳ ವಿಭಜನೆಯಿಂದ ಇಂದಿನ ಬಂಗಾಳ ಕ್ಷಾಮದವರೆಗೆ ನಮ್ಮ ದೇಶದ ಕಥೆ ಸಾಮ್ರಾಜ್ಯಶಾಹಿ ಬ್ರಿಟೀಷರ ಅನ್ಯಾಯ, ದಬ್ಬಾಳಿಕೆ, ವಂಚನೆ, ರಕ್ತಶೋಷಣೆಯ ಕಥೆಯಾಗಿದೆ. (ಅನಕೃ, ೨೦೧೩, ಪುಟ–೫೧.)

ಇಲ್ಲಿ ನಂದಿಗ್ರಾಮ ಪೋಲೀಸರ ದೌರ್ಜನ್ಯದಿಂದ ನಲುಗಿ, ಅಲ್ಲಿ ಯಾರೂ ವಾಸಿಸದಂತಹ ಸ್ಥಿತಿ ನಿರ್ಮಾಣವಾಗಿರುತ್ತದೆ. ಗೌಡರ ಆಡಳಿತಕ್ಕೆ ರೋಷಿಹೋದ ಇಲ್ಲಿನ ಜನ ಅವರ ವಿರುದ್ಧ ಹೋರಾಟಕ್ಕೆ ಇಳಿಯುತ್ತಾರೆ. ಅದು ಗಾಂಧೀಜಿಯವರ ಆದರ್ಶದ ಹಿನ್ನಲೆಯಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಪ್ರೇರಣೆಯಾಗಿರುತ್ತದೆ. ಇಲ್ಲಿ ಮುಖ್ಯವಾಗಿ ಎರಡು ಪಾತ್ರಗಳು ಇಡಿ ಕಾದಂಬರಿಯುದ್ದಕ್ಕೂ ಪ್ರಮುಖ ಪಾತ್ರ ವಹಿಸುತ್ತವೆ. ಕಾದಂಬರಿ ಆರರಭದಿಂದಲೂ ಅಂತ್ಯದವರೆಗೆ ಒಬ್ಬ ಸ್ವಾತಂತ್ರ್ಯಪ್ರೇಮಿ ರಾಮಮೂರ್ತಿಗೆ ನಿರೂಪಕ ಹಾಗೂ ಕಾದಂಬರಿಯ ಪೋಷಕ ಪಾತ್ರದಂತೆ ರಂಗೇಗೌಡರು ಕಥೆಯನ್ನು ಹೇಳಿಕೊಂಡು ಹೋಗುತ್ತಾರೆ.

ಮುಖ್ಯವಾಗಿ ಮಾನಪ್ಪ ಹಾಗೂ ಪುಟ್ಟಸ್ವಾಮಿ ಪಾತ್ರಗಳು ಸ್ವಾತಂತ್ರ್ಯದ ತುಡಿತವನ್ನು ಹೊಂದುವ ಮೂಲಕ ಕೊನೆಗೆ ಇಬ್ಬರೂ ಪೋಲೀಸರ ಗುಂಡಿಗೆ ಬಲಿಯಾಗುವುದನ್ನು ಮನೋಜ್ಞವಾಗಿ ಚಿತ್ರಿಸಲಾಗಿದೆ. ಪೋಲೀಸರ ದೌರ್ಜನ್ಯದ, ಅವರ ಕ್ರೌರ್ಯವು ಅಂದಿನ ಸಮಾಜದಲ್ಲಿನ ದರ್ಪಕ್ಕೆ ಸಾಕ್ಷಿಯಂತೆ ಬಿತ್ತರಗೊಂಡಿದೆ. ಆರಂಭದಲ್ಲಿ ಬೈರಪ್ಪ, ರಾಮಮೂರ್ತಿ ಹಾಗೂ ವಿಶ್ವನಾಥರ ನಡುವೆ ಸಂಭಾಷಣೆ ಆರಂಭವಾಗಿ ಅಗಸ್ಟ್ ೧೫ರ ಉತ್ಸವ ಇದ್ದರೂ ಬೈರಪ್ಪನ ಊರಾದ ಚಲುವನಹಳ್ಳಿಗೆ ಹೋಗುವ ಸನ್ನಿವೇಶ ಕಂಡುಬರುತ್ತದೆ. ವಿಶ್ವನಾಥನ ಮಧ್ಯಸ್ಥಿಕೆಯಿಂದ ಬೈರಪ್ಪನ ಜತೆ ರಾಮಮೂರ್ತಿ ಚಲುವನಹಳ್ಳಿಗೆ ಬರುತ್ತಾನೆ. ಬೈರಪ್ಪನವರ ಮನೆಯಲ್ಲಿ ಸ್ವಾತಂತ್ರ್ಯ ಹೋರಾಟದ ಸ್ವರೂಪ, ಅದರಲ್ಲಿ ಭಾಗಿಯಾಗಿ ಪ್ರಾಣಾರ್ಪಣೆ

ಮಾಡಿದವರ ಘಟನೆ ತಿಳಿಯುತ್ತದೆ. ಮಾನಪ್ಪ ಹಾಗೂ ಪುಟ್ಟಸ್ವಾಮಿ ಸ್ವಾತಂತ್ರ್ಯಕ್ಕಾಗಿ ಪೋಲೀಸರ ಗುಂಡಿಗೆ ಬಲಿಯಾಗಿದ್ದು ಹೋರಾಟದ ಉಗ್ರ ಸ್ವರೂಪವನ್ನು ತೋರಿಸುತ್ತದೆ.

ರಂಗೇಗೌಡರು ಹಾಗೂ ಆತನ ಕುಟುಂಬದವರು ನಂದಿಗ್ರಾಮಕ್ಕೆ ತೆರಳಲು ಸಿದ್ದರಾಗುತ್ತಾರೆ. ಅಲ್ಲಿಗೆ ಹೋಗುವ ಸಂದರ್ಭದಲ್ಲಿ ರಂಗೇಗೌಡರು ರಾಮಮೂರ್ತಿಗೆ ತನ್ನ ಹಾಗೂ ಮಾನಪ್ಪನ ಕುಟುಂಬದ ಬಗ್ಗೆ ವಿವರಿಸುತ್ತಾನೆ. ಊರಿಗೆ ಹಿರಿಯರಾಗಿದ್ದ ದೇವೇಗೌಡರು, ಜೊತೆಗೆ ಕಾಳಾ ಜೋಯಿಸರು, ವೆಂಕಟೇಶ್ವರ ಗುಡಿ ಪೂಜಾರಿಗಳಾಗಿ ದೊಡ್ಡೇಗೌಡರ ಅಣತಿಯಂತೆ ನಡೆಯುತ್ತಿತ್ತು. ಜವರೇಗೌಡರಿಗೆ ಮಾನಪ್ಪ, ಬೈರಪ್ಪ ಮಕ್ಕಳಿದ್ದರು. ದೇವಗೌಡರ ಪ್ರಸಿದ್ಧಿ ಇತರರಿಗಿಂತ ಹೆಚ್ಚಾಗುತ್ತಾ ಹೋಯಿತು ಇದು ಕಾಳಾ ಜೋಯಿಸ ಮತ್ತು ಜವರೇಗೌಡರಿಗೆ ಅಸಮಾಧಾನ ತಂದಿತ್ತು. ಇದೇ ಸಂದರ್ಭದಲ್ಲಿ ದೇವೆಗೌಡರಿಗೆ ವಿರುದ್ಧವಾದ ಗುಂಪು ಹುಟ್ಟಿತು. ಇದರಲ್ಲಿ ಅನಂತಯ್ಯಶೆಟ್ಟಿ, ಸಣ್ಣಂಭಟ್ಟನು ಸೇರಿಕೊಂಡಿದ್ದರು.

ಬೆಂಗಳೂರಿನಲ್ಲಿ ಸ್ವರಾಜ್ಯ, ನೂಲು ತೆಗೆಯುವ ಹಾಗೂ ದೇಶ ಸ್ವಾತಂತ್ರ್ಯದ ಕುರಿತು ಆಲೋಚನೆ ಆರಂಭವಾಗಿ ಬಹಳ ದಿನಗಳೇ ಕಳೆದಿತ್ತು. ಅಲ್ಲಿಗೆ ತೆರಳಿದ್ದ ಪುಟ್ಟಸ್ವಾಮಿ ಹಾಗೂ ಮಾನಪ್ಪರ ಸ್ವಾತಂತ್ರ್ಯಾಂದೋಳನದ ಬಗೆಗೆ ಚರ್ಚೆಗಳು ನಡೆದವು. 'ಚರಕದಿಂದ ಸ್ವತಂತ್ರ ಬರುವ ಹಾಗೆ ಇದ್ದರೆ ಅಮೇರಿಕಾ, ರಷ್ಯಾದವರು ಲಕ್ಷಾಂತರ ಚರಕ ತಿರುಗಿಸುತ್ತಿದ್ದರು' ಎಂದು ಪುಟ್ಟಸ್ವಾಮಿ ಹೇಳಿದಾಗ; ಆಗ ಮಾನಪ್ಪ "ಅವರಲ್ಲಿ ಬಾಪು ಹುಟ್ಟಲಿಲ್ಲ ..." ಎನ್ನುತ್ತಾನೆ. ಈ ರೀತಿಯ ವಾದ ವಿವಾದಗಳು ಇಬ್ಬರ ನಡುವೆ ಆಗಾಗ ನಡೆಯುತ್ತಿದ್ದವು. ಇದರಿಂದ ಇಬ್ಬರಲ್ಲಿ ಸ್ವಾತಂತ್ರ್ಯದ ಕುರಿತು ಭಿನ್ನಾಭಿಪ್ರಾಯಗಳು ಇರುವುದನ್ನು ಕಾದಂಬರಿಕಾರರು ಚಿತ್ರಿಸುತ್ತಾರೆ. ಮಾನಪ್ಪನು "ನಾವು ಮೊದಲು ತರಪೇತು ಪಡೆಯಬೇಕು, ಹಳ್ಳಿಗರಿಗೆ ಅವರ ಸ್ಥಿತಿಗತಿಗಳ ಅರಿವು ಮಾಡಿಕೊಡಬೇಕು. ನಮ್ಮೂರಿನಲ್ಲಿ ನಮಗೆ ಸಹಕಾರ ನೀಡುವ ಕೆಲವರನ್ನು ಕೂಡಿಕೊಂಡು ಅವರ ಮೂಲಕ ನಾವು ಪ್ರಸಾರ ಕಾರ್ಯ ಆರಂಭಿಸಬೇಕು" (ಅನಕೃ, ೨೦೧೩, ಪುಟ-೫೧.) ಎಂದು ಸ್ವಾತಂತ್ರ್ಯದ ಪೂರ್ವ ತಯಾರಿ ಮಾಡುತ್ತಾನೆ. ಪುಟ್ಟಸ್ವಾಮಿ ಮತ್ತೇ ಗಾಂಧಿ ಮಾರ್ಗದ ಬಗ್ಗೆ ಅಸಹನೆ ವ್ಯಕ್ತ ಪಡಿಸುತ್ತಾ: "೧೯೨೨ರ ಚೌರಿ ಚೌರಾ ದುರಂತವಾಯಿತೆಂದು ಗಾಂಧೀಜಿ ಸತ್ಯಾಗ್ರಹವನ್ನು ನಿಲ್ಲಿಸಿ ಸುಖವಾಗಿ ಸೆರೆ ಮನೆ ಸೇರಿದರಲ್ಲಾ, ಆಗಲೆ ಬಾಪೂ ಮಾರ್ಗ ತನ್ನ ಬುನಾದಿ ಕಳೆದುಕೊಂಡಿತು......... ಉದ್ಘೋಷದಿಂದ ಬಂದ ಲಾಭವೇನು? ಈಗ ಅರವತ್ತು ವರ್ಷಗಳ ನಮ್ಮ ಸ್ಥಿತಿಗೂ ಏನು ವ್ಯತ್ಯಾಸವಿದೆ?" (ಅನಕೃ, ೨೦೧೩, ಪುಟ-೬೩.) ಎನ್ನುವ ಮಾತುಗಳಲ್ಲಿ ಗಾಂಧೀಜಿಯ ಆದರ್ಶವನ್ನು ಒಪ್ಪಿಕೊಳ್ಳದಿರುವುದು ಪುಟ್ಟಸ್ವಾಮಿಯಲ್ಲಿ ವ್ಯಕ್ತವಾಗಿದೆ.

ಮಾನಪ್ಪನಿಗೆ ಮದುವೆ ಮಾಡುವ ಸಂದರ್ಭದಲ್ಲಿ "ದೇಶಕ್ಕೆ ಸ್ವತಂತ್ರ ಬರಲಿ ಅನಂತರ ಲಗ್ನವಾಗುತ್ತೇನೆ" (ಅನಕೃ, ೨೦೧೩, ಪುಟ-೭೩.) ಎನ್ನುತ್ತಾನೆ. ಯುವಕನಿಗೆ ತನ್ನ ಸಂಸಾರಕ್ಕಿಂತ ದೇಶದ ಚಳುವಳಿ ಮುಖ್ಯವಾಗಿರುವುದನ್ನು ಲೇಖಕರು ತೋರಿಸುತ್ತಾರೆ. ಇದು ಕೇವಲ ಮಾನಪ್ಪನಿಗೆ ಮಾತ್ರ ಸೀಮಿತವಾಗಿದ್ದಲ್ಲ. ಇಂಥಹ ಯುವ ಸಮುದಾಯವನ್ನು ಕಾದಂಬರಿಯ ಮಾನಪ್ಪನು ಪ್ರತಿನಿಧಿಸುತ್ತಾನೆ. ಅವನು ದೇಶಕ್ಕಾಗಿ ತನ್ನ ಸಂಸಾರ ಸಂಬಂಧವನ್ನು ತಡೆದು ನಿಲ್ಲಿಸುವುದು ಅವನ ಸ್ವಾತಂತ್ರ್ಯ ಪ್ರೇಮದ ಉತ್ಕಟೇಚ್ಛೆಯನ್ನು ವ್ಯಕ್ತಪಡಿಸುತ್ತದೆ. ಆದರೂ ಹಿರಿಯರ ಮಾತನ್ನು ಒಪ್ಪಿಕೊಂಡು ಮಾನಪ್ಪ ಮದುವೆಯಾಗಿ ಬೆಂಗಳೂರಿಗೆ ತೆರಳುತ್ತಾನೆ. ಅಲ್ಲಿ "ಕಾಂಗ್ರೆಸ್‌ನ ಪ್ರತಿಯೊಂದು ಸಂದೇಶವು ಪ್ರತಿಯೊಂದು ಹಳ್ಳಿ ಸ್ವೀಕರಿಸಿ, ಸ್ಥಳೀಯ ಸಂಸ್ಥೆಗಳನ್ನು ಬಲಪಡಿಸಬೇಕು. ಸ್ವಯಂ ಸೇವಕರನ್ನೂ ಸಿದ್ಧಗೊಳಿಸಬೇಕು. ಜನತೆಯೊಂದಿಗೆ ನಾಯಕರು ನಿಕಟ ಬಾಂಧವ್ಯ ಇಟ್ಟುಕೊಳ್ಳಬೇಕು. ಏನೇ ಕಷ್ಟ ಬಂದರೂ ಹಳ್ಳಿಗಳು ಎದುರಿಸಲು ಸಿದ್ಧವಾಗಬೇಕು" (ಅನಕೃ, ೨೦೧೩, ಪುಟ-೮೦.) ಎಂಬ ಗಾಂಧೀಜಿಯ ಸಂದೇಶಕ್ಕೆ ಪ್ರಭಾವಿತನಾಗುತ್ತಾನೆ.

ಇದರ ಪ್ರಭಾವದಿಂದ ವಯಸ್ಸಿನಲ್ಲಿ ಚಿಕ್ಕವನಾದರೂ ತನಗಿಂತ ಹಿರಿಯರಿಗೆ ಸ್ವಾಂತಂತ್ರ್ಯದ ಬಗೆಗೆ ದೇಶಾಭಿಮಾನ ಮೂಡುವಂತೆ ಎಲ್ಲೆಡೆಯಲ್ಲೂ ಸಾರುತ್ತಾ; "ಅದು ಅನಿವಾರ್ಯ, ತಾಯಿಯ ಗರ್ಭದಿಂದ ಹೊರಬೀಳುವ ಮಗು ತಾಯಿಯ ಹೊಟ್ಟೆಯನ್ನು ಹರಿದು ರಕ್ತ ಚೆಲ್ಲಿ ಹೊರಬರುತ್ತದೆ. ಭಾರತದ ವಿರಾಟ ಗರ್ಭದಿಂದ ಸ್ವಾತಂತ್ರ್ಯ ಜನಿಸುವಾಗಲೂ ಹಾಗೆಯೇ-ರಕ್ತಪಾತವಾಗಬಹುದು. ಆದರೆ ಕಾದಾಟ ಎಷ್ಟು ದಿನ ನಡೆಯಲು ಸಾಧ್ಯ. ಈ ದೇಶ ಹಿಂದೂ, ಮುಸಲ್ಮಾನ, ಕ್ರೈಸ್ತ, ಪಾರಸಿಗಳೆಲರಿಗೂ ಸೇರಿದ್ದು, ಅವರು ಅಣ್ಣ-ತಮ್ಮಂದಿರಂತೆ ಬಾಳಲೇ ಬೇಕು, ಹಾಗೆ ಬಾಳುವುದರಿಂದಲೇ ತಮ್ಮ ಶ್ರೇಯಸ್ಸು-ದೇಶದ ಕಲ್ಯಾಣ ಎನ್ನುವ ಸತ್ಯ ಅವರಿಗೆ ಹೊಳೆಯದೇ ಇರುವುದಿಲ್ಲ" (ಶಿವರುದ್ರಪ್ಪ. ಜಿ.ಎಸ್., ೨೦೦೭, ಪುಟ-೧೪೦) ಇದು ನರಸಿಂಹಯ್ಯನವರಿಗೆ ಮಾನಪ್ಪ ಸಾತಂತ್ರ್ಯದ ಮಹತ್ವವನ್ನು ಕುರಿತು ತಿಳಿಸಿಕೊಡುತ್ತಾನೆ.

ಅಗಸ್ಟ್ ೮ ರಂದು ಕಾಂಗ್ರೆಸ್ ಸಮಿತಿ ಕ್ವಿಟ್ ಇಂಡಿಯಾ ನಿರ್ಣಯ ಸಾರಿತು, ಅಗಸ್ಟ ೯ರಂದು ಗಾಂಧೀಜಿ ಕಾಂಗ್ರೆಸ್ ನಾಯಕರ ಬಂಧನವಾಯಿತು. ಭಾರತೀಯರು ಆಕ್ರೋಶಗೊಂಡರು. ಅಲ್ಲದೆ ಭಾರತದಲ್ಲಿನ ಪ್ರತಿಯೊಂದು ಘಟನೆ, ಸನ್ನಿವೇಶಗಳನ್ನು ಮಾನಪ್ಪನು ಹೇಳುತ್ತಿದ್ದನು. ಹೀಗೆ ಭಾರತದಲ್ಲಿ ನಡೆಯುವ ಎಲ್ಲ ಚಲನವಲನಗಳನ್ನು ಹಳ್ಳಿಯ ಜನರಿಗೆ ತಲುಪುತ್ತಿದ್ದವು. ಇದು ಸ್ವಾತಂತ್ರ್ಯವನ್ನು ಪಡೆಯುವಲ್ಲಿ ಹೋರಾಟಕ್ಕೆ ಜನರನ್ನು ಹುರುದುಂಬಿಸುವಂತೆ ಮಾಡುತ್ತಿತ್ತು.

ಒಂದು ದಿನ ಪುಟ್ಟಸ್ವಾಮಿ ಸಭೆ ಮಾಡಿ ರಾಕ್ಷಸ ರಾಜ್ಯ ಅಳಿಸಲು ನಿರ್ಧರಿಸಿ, ಇಡಿ ವ್ಯವಸ್ಥೆಯನ್ನು ಬುಡಮೇಲು ಮಾಡಲು ಪೋಲೀಸರ ದರ್ಪವನ್ನು ಅಡಗಿಸಲು ನಿರ್ಧರಿಸಿದರು. ರಾಕ್ಷಸ ರಾಜ್ಯ ನಿರ್ಮೂಲನೇ ಮಾಡೋಕೆ ಎಲ್ಲರೂ ಸಿದ್ಧರಾದರು. ಹೋರಾಟಕ್ಕೆ ಇಳಿದು ಟೆಲಿಗ್ರಾಪ್ ತಂತಿ ಕತ್ತರಿಸಿದರು. ಎಲೆಕ್ಟ್ರಿಕ್ ಆಫೀಸ್‌ಗೆ, ಪೋಲೀಸ್ ಸ್ಟೇಷನ್‌ಗೆ ಬೆಂಕಿಯಿಟ್ಟರು. ರಾಯಪ್ಪನನ್ನು ಕೊಂದು ಅವರ ಮನೆಯನ್ನು ಸುಟ್ಟರು. ಈ ರೀತಿಯ ಹಿಂಸಾ ಮಾರ್ಗದಲ್ಲಿ ಕ್ರೌರ್ಯವು ಹೋರಾಟದ ಸ್ವರೂಪ ತಲುಪಲು ಪುಟ್ಟಸ್ವಾಮಿಯೇ ಕಾರಣನಾಗುತ್ತಾನೆ. ಇದನ್ನು ಸಹಿಸಿಕೊಳ್ಳದ ಮಾನಪ್ಪ "ಅಹಿಂಸೆಗೆ ಮಾನಭಂಗವಾಯಿತು" ಎಂದು ಹಪಹಪಿಸಿದ. ಇದನ್ನು ತಡೆಯಲು ಪುಟ್ಟಸ್ವಾಮಿಗೆ ತಿಳಿಸಿದ. ಮಾನವಪ್ಪನಿಗೆ ಹೋರಾಟದ ಉಗ್ರ ಸ್ವರೂಪವು ಎಚ್ಚೆತ್ತುಕೊಳ್ಳುವಂತೆ ಮಾಡಿತು. ತಾನೇ ಪೋಲೀಸಿನವರ ಕೈಗೆ ಸಿಕ್ಕಿಕೊಳ್ಳುತ್ತಾನೆ. ಸಿಕ್ಕಿಕೊಂಡ ಮಾನಪ್ಪನನ್ನು ಬಟ್ಟೆ ಬರೆಗಳಿಲ್ಲದೆ ನಗ್ನಮಾಡಿ ಅವಮಾನಿಸುತ್ತಾರೆ. ಇದನ್ನು ಸಹಿಸಿಕೊಳ್ಳದ ಜನರು ಪೊಲೀಸರ ವಿರುದ್ಧ ಮತ್ತಷ್ಟು ದಂಗೆ ಏಳುತ್ತಾರೆ. ಇದನ್ನು ತಡೆಯಲು ಮುಂದಾದ ಪೊಲೀಸಿನವರಿಂದ ಗುಂಡು ಮಾನಪ್ಪನಿಗೆ ತಗುಲಿ ಅಸುನೀಗುತ್ತಾನೆ.

ಹೀಗೆ ಸ್ವಾತಂತ್ರ್ಯ ಚಳುವಳಿಯನ್ನು ವಸ್ತುವನ್ನಾಗಿಸಿಕೊಂಡು ಭಾರತದ ತರುಣ ಜನಾಂಗವು ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಂಡ ಬಗೆಯನ್ನು ಇದು ಚಿತ್ರಿಸುತ್ತದೆ. ಇಲ್ಲಿನ ಮಾನಪ್ಪ ಗಾಂಧೀಜೀಯವರ ಅಹಿಂಸಾ ಪರವಾದ ಹೋರಾಟ ಒಂದೆಡೆಯಾದರೆ; ಪುಟ್ಟಸ್ವಾಮಿಯ ಹೋರಾಟದ ಧೋರಣೆ ಬೇರೆ. ಅವನು ಗಾಂಧೀಜಿಯವರ ಅಹಿಂಸಾವಾದವನ್ನು ತಿರಸ್ಕರಿಸುತ್ತಾನೆ. ಅಷ್ಟೇ ಅಲ್ಲ ಅವನಿಂದಲೇ ಕಾದಂಬರಿಯ ಕೊನೆಗೆ ಹೋರಾಟವು ಉಗ್ರಸ್ವರೂಪವನ್ನು ತಾಳಿ ಮಾನಪ್ಪನ ಕೊಲೆಯಲ್ಲಿ ಅಂತ್ಯವನ್ನು ಕಾಣುತ್ತದೆ. ಇಲ್ಲಿ ಗ್ರಾಮದಿಂದ ಬಂದಂತ ಮಾನಪ್ಪ ಮತ್ತು ಪುಟ್ಟಸ್ವಾಮಿಯರು ಭಾರತದ ಇತರ ಹಳ್ಳಿಯ ಯುವಕರನ್ನು ಪ್ರತಿನಿಧಿಸುತ್ತಾರೆ. ಅವರಲ್ಲಿರುವ ಹೋರಾಟದ ದ್ವಂದ್ವವನ್ನು ಲೇಖಕರು ನಿರೂಪಿಸುತ್ತಾರೆ. ಒಬ್ಬ ಸೌಮ್ಯ ಮತ್ತೊಬ್ಬ ಉಗ್ರ ಹೋರಾಟಕ್ಕೆ ಸಾಕ್ಷಿಯಾಗಿ ನಿಲ್ಲುತ್ತಾರೆ. ಪೋಲೀಸರ ಕಣ್ಣಿಗೆ ಮಣ್ಣು ಎರಚುವುದು, ರೈಲು ಕಂಬಿಗಳನ್ನು ಕಿತ್ತು, ಟೆಲಿಪೋನು ತಂತಿಗಳನ್ನು ಕತ್ತರಿವುದು, ಸಂಚಾರ-ಸಂಪರ್ಕಗಳನ್ನು ಸ್ಥಗಿತಗೊಳಿಸುವುದು, ಸರ್ಕಾರಿ ಖಜಾನೆ ಲೂಟಿ ಮಾಡುತ್ತ, ಸರ್ಕಾರಿ ಕಛೇರಿಗಳಿಗೆ ಬೆಂಕಿ ಹಚ್ಚುತ್ತಾ ಆಡಳಿತವನ್ನು ಬುಡಮೇಲು ಮಾಡುವದರ ಮೂಲಕ ಹೋರಾಟಕ್ಕೆ ಧುಮುಕುತ್ತಾರೆ. ಇಲ್ಲಿ ಪ್ರತಿ ಚಿತ್ರಣವು ಅಂದಿನ ಭಾರತದಲ್ಲಿ ಬುಗಿಲೆದ್ದ ಸ್ವಾತಂತ್ರ್ಯದ ತುಡಿತವನ್ನು ಕಾದಂಬರಿಕಾರರು ಹೇಳುತ್ತಾ ಹೋಗುತ್ತಾರೆ. ಈ ಹೋರಾಟವು ಕಾಲ್ಪನಿಕವಾದದ್ದೇನೂ ಅಲ್ಲ. ಇದು ಲೇಖಕರ ಅನುಭವಕ್ಕೆ ವೇದ್ಯವಾದ ವಾಸ್ತವ ಸತ್ಯಗಳಾಗಿವೆ. ಯುವಕರಲ್ಲಿನ ಸ್ವಾತಂತ್ರ್ಯ ಚಳುವಳಿ "ಗಾಂಧಿಯವರು ಹಾಕಿಕೊಟ್ಟ

ಅಹಿಂಸಾತ್ಮಕ ವಿಧಾನದಲ್ಲಿರಬೇಕೆಂದು ತಿಳಿಯದ ವಿಷಯವೇನಲ್ಲ. ಆದರೆ ಅಂದಿನ ಬ್ರಿಟೀಷ್ ಸರ್ಕಾರ ಚಳುವಳಿಯನ್ನು ಹತ್ತಿಕ್ಕುವಲ್ಲಿ ತಾಳಿದ ಸಶಸ್ತ್ರಕ್ರಮಗಳು, ಸಹಜವಾಗಿಯೇ ಈ ತರುಣರನ್ನು ಕೆರಳಿಸಿ ಅವರ ಹೋರಾಟದ ವಿಧಾನವನ್ನು, ಹಿಂಸಾತ್ಮಕವಾಗಿ ಮಾಡಿದವು." (ಅ.ನ.ಕೃ. ೨೦೦೬, ಮುನ್ನುಡಿ.) ಪ್ರಸ್ತುತ ಕಾದಂಬರಿಯಲ್ಲಿಯೂ ಹೀಗೆ ನಡೆಯುತ್ತದೆ. ಮಾನಪ್ಪನು ಅಹಿಂಸಾವಾದಿಯಾಗಿದ್ದರೂ ಅವನು ಪೋಲಿಸರ ಗುಂಡಿಗೆ ಬಲಿಯಾಗಿ ಸ್ವಾತಂತ್ರ್ಯಕ್ಕಾಗಿ ಮಡಿದು 'ಅಮರ'ನಾಗಿ ಉಳಿದುಕ್ಕೊಳ್ಳುತ್ತಾನೆ. ಹಾಗೆಯೇ 'ಅಮರ ಅಗಸ್ಟ'ನಲ್ಲಿ 'ಅಮರ'ವಾಗುವ ಮನ್ನಣೆಗೆ ಮಾನಪ್ಪ ಪಾತ್ರನಾಗುತ್ತಾನೆ.

ಅಗಸ್ಟ್ ಭಾರತೀಯ ಇತಿಹಾಸದಲ್ಲಿ ಎಂದೆಂದಿಗೂ ಅಮರವಾದ ಪದ. ಭಾರತೀಯರು ಸ್ವತಂತ್ರವಾದ ದಿನವಾದರೆ ಆ ಸ್ವಾತಂತ್ರ್ಯವನ್ನು ನಾವಿಂದು ಹೇಗೆ ಬಳಸಿಕೊಳ್ಳುತ್ತಿದ್ದೇವೆ ಎಂಬುದನ್ನು ಸಹ ನೆನಪಿಸಿಕೊಳ್ಳಬೇಕಾದ ಪದವೂ ಅಗಸ್ಟ್. ಅನೇಕ ರಕ್ತದಾನದಿಂದ ಪಡೆದ ಅಗಸ್ಟ್ ಸ್ವಾತಂತ್ರ್ಯ ಇಂದು ಅನೇಕರ ರಕ್ತಹೀರುತ್ತಿದೆಯೋ ಎಂಬ ವಿಡಂಬನೆಯನ್ನು ಹೊತ್ತುಕೊಂಡ ನಿಂತ ತಿಂಗಳವೇ ಅಗಸ್ಟ್. ಎಂದೂ ಮರೆಯದ ಭಾರತ ರತ್ನಗಳನ್ನೂ ಆತ್ಮಾರ್ಪಣೆ ಪಡೆದುಕೊಂಡದ್ದೂ ಒಂದೆಡೆಯಾದರೆ , ಭಾರತರತ್ನಗಳನ್ನು ಪಡೆಯಬೇಕೆಂಬ ಹಂಬಲದ ಮಾಸವು ಅಗಸ್ಟ್ ; ಹಾಗಾಗಿ ಅಗಸ್ಟ್ ಎಂದೆಂದಿಗೂ ಅಮರ ಎಂಬುದನ್ನು ಪ್ರಸ್ತುತ ಕೃತಿಯಲ್ಲಿ ಸಾರ್ಥಕವಾಗಿ ವಿವರಿಸಿರುವುದರಿಂದ ಇದೊಂದು ಮೌಲಿಕ ಕೃತಿ.

**ಹೇಗಾದರೂ ಬದುಕೋಣ (೧೯೬೪)**

ಅನಕೃರವರ ಮತ್ತೊಂದು ಸ್ವತಂತ್ರ ಹೋರಾಟದ ಕಾದಂಬರಿ "ಹೇಗಾದರೂ ಬದುಕೊಣ". ಇದರಲ್ಲಿ ಮುಖ್ಯವಾಗಿ ಹರಿಜನರ ಉದ್ದಾರ, ಗಾಂಧೀಜಿಯವರ ಸಪ್ತ ಸ್ವರದ ಪಾಲನೆ, ವಿದೇಶಿ ವಸ್ತುಗಳ ಬಹಿಷ್ಕಾರ ಗಾಂಧೀಜಿಯವರ ಪ್ರಭಾವ, ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುವ ವಿದ್ಯಾರ್ಥಿಗಳ ಉತ್ಕೇಟೇಚ್ಛೆ ಕಂಡುಬಂದಿದೆ. ಇಲ್ಲಿ ಗಾಂಧೀಜಿಯವರ ಹರಿಜನರ ಉದ್ಧಾರದ ತತ್ವಗಳು ಹೆಚ್ಚಾಗಿ ಕಾರ್ಯರೂಪಕ್ಕೆ ತರಲು ಇಲ್ಲಿಯ ಪಾತ್ರಗಳು ಪ್ರಯತ್ನಿಸಿದ್ದು ಕಾಣುತ್ತದೆ. ಜೊತೆಗೆ ಜೈಲಿನಲ್ಲಿ ಖೈದಿಗಳನ್ನು ನೋಡಿಕೊಳ್ಳುವ ಆಡಳಿತಶಾಹಿ ವ್ಯವಸ್ಥೆ ವಾಸ್ತವತೆ ಚಿತ್ರಣವು ಕಂಡುಬರುತ್ತದೆ.

ಪ್ರಸ್ತುತ ಕಾದಂಬರಿಯಲ್ಲಿನ ಪರಮೇಶಯ್ಯನ ಕುತಂತ್ರ ಸಂಜೀವಯ್ಯನ ಮೂಲ ಗುರಿಗೆ ಧಕ್ಕೆ ಬರುವಂತೆ ನಡೆದುಕೊಳ್ಳುವುದು ಹೋರಾಟಕ್ಕೆ ಒಂದು ಕಾರಣವೂ ಆಗಬಹುದು. ಸ್ವಾತಂತ್ರ್ಯ ದೊರೆತರೂ ಕೆಲವು ಅಧಿಕಾರಿಶಾಹಿಗಳ ಕೈಯಲ್ಲಿ ಸಿಕ್ಕು ಆಗುವ ಅನ್ಯಾಯಗಳನ್ನು ಸುಮ್ಮನೆ ಕುಳಿತು ನೋಡುವಂತಹ ದುಃಸ್ಥಿತಿ ಹೋರಾಟಗಾರರಿಗೆ ಬರುತ್ತದೆ. ಸ್ವತಃ ಲೇಖಕರೇ

ಹೇಳುವಂತೆ ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ಮೇಲೆ ಸಮಕಾಲೀನ ಇತಿಹಾಸಕ್ಕೆ ಒಂದು ಹೊಸ ಮುಖ ಬಂದಿತು. ಸ್ವಾತಂತ್ರ್ಯ ಸಾಧನೆಗೆ ಸರ್ವಸ್ವವನ್ನೂ ಬಲಿದಾನವಾಗಿ ಮಾಡಿದ ಹೊಸ ಪೀಳಿಗೆ ಬೆಲೆಯನ್ನು ಪಡೆಯಿತು. (ಅ.ನ.ಕೃ. ೨೦೦೬, ಪುಟ–೬.) ಈ ಜನ ತ್ಯಾಗದ ಸ್ಥಾನದಲ್ಲಿ ಸ್ವಾರ್ಥವನ್ನು ಪ್ರತಿಷ್ಠಾಪಿಸಿದರು, ಈ ಎರಡು ವರ್ಗಗಳ ಮನೋಭಾವ, ಕಾರ್ಯಾಚರಣೆಗಳ ಸೂಕ್ಷ್ಮ ಚಿತ್ರವನ್ನು ಈ ಕಾದಂಬರಿಯಲ್ಲಿ ನೋಡಬಹುದು. ಇಲ್ಲಿ ಬರುವ ಪಾತ್ರಗಳು ಪ್ರಸ್ತುತ ಭಾರತದ ಪ್ರತೀಕವಾಗಿ ಗೋಚರಿಸುತ್ತವೆ.

ಗಾಂಧೀಜಿಯವರ ಪ್ರಭಾವ ಹೆಚ್ಚಾಗಿರುವುದು ಕಂಡುಬಂದು, ಆರಂಭದಿಂದಲೂ ಅಂತ್ಯದವರೆಗೂ ಗಾಂಧೀಜಿಯವರ ಅನುಕರಣೆ ಬರುತ್ತದೆ.. ಕಾದಂಬರಿ ಆರಂಭದಲ್ಲಿ ಭಾರತದಿಂದ ಬ್ರಿಟೀಷರನ್ನು ಓಡಿಸಬೇಕೆಂದು, ಓಡಿಸದೇ ಯಾವುದೇ ಮೋಕ್ಷವಿಲ್ಲ ಎಂಬ ಗಾಂಧೀಜಿಯವರ ಸಪ್ತ ಸ್ವರದ ಭಾಷಣ ಕೇಳಿ ಬರುತ್ತದೆ. ಈ ಭಾಷಣವನ್ನು ಪರಮೇಶಿ ಹಾಗೂ ಜನಾರ್ಧನ ಕೇಳಿಕೊಂಡು ಪರಸ್ಪರ ಸ್ವಾತಂತ್ರ್ಯ ಗಳಿಸಲು ಹಾತೊರೆಯುತ್ತಾರೆ. ಇಲ್ಲಿ ಗಾಂಧೀಜಿಯ ಭಾಷಣದ ಪ್ರಭಾವವು ಯುವಕರ ಮೇಲೆ ಎಷ್ಟು ಪರಿಣಾಮಕಾರಿಯಾಗಿತ್ತು ಎಂದು ಗ್ರಹಿಸಬಹುದು. ಆಗ ಪರಮೇಶಿ "ನೂರೈವತ್ತು ವರ್ಷಗಳಿಂದ ಇಲ್ಲಿ ತಳವೂರಿ ಕೂತಿರುವ ಬ್ರಿಟೀಷರನ್ನು ಓಡಿಸಲು ಶಕ್ಯವೇ ಜನ್ನ? ಅವರ ಸೈನ್ಯಬಲ–ನೌಕಾಬಲ–ವಿಮಾನಬಲಗಳ ಮುಂದೆ ನಾವು ನಿಲ್ಲಬಲ್ಲವೇ? ನಮ್ಮ ಪ್ರತಿಭಟನೆಯನ್ನು ಅವರು ಒಂದೇ ದಿನದಲ್ಲಿ ಬಗ್ಗು ಬಡಿಯಬಲ್ಲರು" (ಅ.ನ.ಕೃ. ೨೦೦೬, ಪುಟ–೬.) ಎಂದಾಗ ಅದಕ್ಕೆ ಪ್ರತಿರೋಧವಾಗಿ ಜನಾರ್ಧನು "ಹಾಗೆಂದುಕೊಂಡು ನಾವು ದಾಸ್ಯವನ್ನೇ ಅನುಭವಿಸುತ್ತ ಹೋಗೋಣವೇ?" (ಅ.ನ.ಕೃ. ೨೦೦೬, ಪುಟ–೭.) ಎಂದು ಪ್ರಶ್ನಿಸುತ್ತಾನೆ. ಇವರಿಬ್ಬರ ಈ ಸಂಭಾಷಣೆ ಸ್ವಾತಂತ್ರ್ಯ ಬಗೆಗಿನ ಯುವಕರಲ್ಲಿನ ಅನಂತ ಪ್ರಶ್ನೆಗಳನ್ನು ಹೊರಹಾಕುತ್ತದೆ. ನಿಶ್ಚಿತವಾದ ಸ್ವಾತಂತ್ರ್ಯ ಹೋರಾಟದ ಕಲ್ಪನೆ ಅಂದಿನ ಯುವಕರಲ್ಲಿ ಕಡಿಮೆ ಎನ್ನಬಹುದು. ಆದರೆ ಗಾಂಧೀಜಿಯಂತ ಮಹಾತ್ಮರ ಭಾಷಣಗಳು, ಹೋರಾಟಗಳು, ಚಳುವಳಿಗಳು ಅವರನ್ನು ಸ್ವಾತಂತ್ರ್ಯದ ಹೋರಾಟದಲ್ಲಿ ಸೆಳೆದು ಮಾರ್ಗದರ್ಶನ ಮಾಡುತ್ತವೆ. ಇಂಥ ಅನೇಕ ಪ್ರಸಂಗಗಳನ್ನು ಅನಕೃ ಕಾದಂಬರಿಯಲ್ಲಿ ಬಳಸಿಕೊಂಡಿದ್ದಾರೆ. ಇಬ್ಬರಲ್ಲಿಯೂ ಪರಸ್ಪರ ಸ್ವಾತಂತ್ರ್ಯದ ಕುರಿತು ಭಿನ್ನಾಭಿಪ್ರಾಯ ಮೂಡಿಬಂದಿದೆ. "ಯುದ್ಧ–ರಕ್ತಪಾತವಿಲ್ಲದೆ ಒಂದು ದೇಶ ಸ್ವಾತಂತ್ರ್ಯ ಗಳಿಸಿಕೊಳ್ಳುವುದು ದುಸ್ತರವೆಂಬುದನ್ನು ನಾನು ಬಲ್ಲೆ, ಜಗತ್ತಿನ ಇತಿಹಾಸದಲ್ಲಿ ಹಾಗೆ ಸ್ವಾತಂತ್ರ್ಯ ಗಳಿಸಿಕೊಂಡ ಒಂದು ರಾಷ್ಟ್ರವೂ ಇಲ್ಲ. ಆದರೆ ನಾವು ಗಾಂಧೀಜಿ ಹೇಳಿರುವಂತೆ ಅಹಿಂಸಾ ಮಾರ್ಗದಲ್ಲಿ ಸ್ವಾತಂತ್ರ್ಯ ಸಂಪಾದಿಸಿದರೆ ಇತಿಹಾಸದಲ್ಲಿ ಒಂದು

ಹೊಸ ಪುಟವನ್ನೇ ಆರಂಭಿಸಿದಂತಾಗುತ್ತದೆ" (ಅ.ನ.ಕೃ. ೨೦೦೬, ಪುಟ-೨೧.) ಎನ್ನುವ ಜನಾರ್ಧನ ಮಾತುಗಳಲ್ಲಿ ಗಾಂಧೀಜಿಯ ಪ್ರಭಾವ ಎಷ್ಟಿತ್ತೆಂದು ಕಾಣಬಹುದು.

ಕಾದಂಬರಿಯ ಮೊದಲನೆ ಭಾಗದಲ್ಲಿ ವಿದೇಶಿ ವಸ್ತುಗಳನ್ನು ಬಹಿಷ್ಕರಿಸುವ, ಸ್ವದೇಶಿ ವಸ್ತುಗಳನ್ನು ಪುರಸ್ಕರಿಸುವ ಚಿತ್ರಣಗಳು ಮೂಡಿಬಂದಿವೆ. ೧೯೨೨ರಲ್ಲಿ ಚೌರಿ ಚೌರಾದಲ್ಲಿ ನಡೆದ ಘಟನೆ ಎಲ್ಲರನ್ನೂ ರೊಚ್ಚಿಗೆಬ್ಬಿಸಿತು. ಗಾಂಧೀಜಿ ಇದನ್ನು ಕಂಡು ಸಾಮೂಹಿಕ ಸತ್ಯಾಗ್ರಹ ನಿಲ್ಲಿಸಿ ವೈಯಕ್ತಿಕ ಸತ್ಯಾಗ್ರಹಕ್ಕೆ ಅನುವು ಮಾಡಿಕೊಟ್ಟಿದ್ದರು. ಗಾಂಧೀಜಿಗೆ ಶಿಕ್ಷೆ ವಿಧಿಸಿದ್ದರಿಂದ ಕಾಲೇಜು ಸೇರಿದ್ದ ಪರಮೇಶಿ ಹಾಗೂ ಜನಾರ್ಧನರಲ್ಲಿ ಕಾಲೇಜು ಬಿಡುವ ಯೋಚನೆ ಬರುತ್ತದೆ. ಆದರೆ ಪರಮೇಶಿ ಅಷ್ಟಾಗಿ ಇದಕ್ಕೆ ಒಪ್ಪಲಿಲ್ಲ. ನನ್ನ ದಾರಿ ನನಗೆ ನಿನ್ನ ದಾರಿ ನಿನಗೆ ಎನ್ನುತ್ತಾನೆ. ಈ ರೀತಿಯ ಮನೋಧೋರಣೆಗಳು ಅಂದಿನ ಅನೇಕ ಗ್ರಾಮೀಣ, ಪಟ್ಟಣ ಯುವಕರಲ್ಲಿ ಇತ್ತು ಎಂಬುದನ್ನು ಇಲ್ಲಿ ಗಮನಿಸಬಹುದು. ಇದಕ್ಕೆ ಅವರ ತಂದೆ-ತಾಯಿಗಳ ಬೆಂಬಲವು ಸ್ವಾತಂತ್ರ್ಯ ಹೋರಾಟಕ್ಕೆ ಇರಲಿಲ್ಲ ಎಂಬುದನ್ನು ನಾವು ಊಹಿಸಬಹುದು.

ಇಲ್ಲಿಯೂ ಹಾಗೆಯೇ ವೆಂಕಪ್ಪ ಶಾಸ್ತ್ರೀಗಳ ಮಗನಾಗಿದ್ದ ಜನಾರ್ಧನ ಕಾಲೇಜು ಬಿಡುವುದು ತಂದೆ ತಾಯಿಗಳಿಗೆ ನೋವುಂಟು ಮಾಡುತ್ತಿತ್ತು. ಆದರೆ ಎಲ್ಲರೂ ಸೆರೆಮನೆ ಸೇರಿದಾಗ ನಾನು ಕಾಲೇಜು ಕಲಿಯುವುದೇ ಎಂದು ಕಾಲೇಜು ಬಿಡುವ ನಿರ್ಧಾರಕ್ಕೆ ಬಂದು ಬಿಡುತ್ತಾನೆ. ಇದೇ ರೀತಿಯಲ್ಲಿ ನಂಜಪ್ಪ-ಗಂಗಮ್ಮನ ಮಗನಾದ ಪರಮಮೇಶಿ ಗಾಂಧೀಜಿ ಪ್ರಭಾವಕ್ಕೆ ಒಳಗಾಗಿ, ಯಾರೂ ಕಾಲೇಜಿಗೆ ಬರುತ್ತಿಲ್ಲ ನಾನು ಕಾಲೇಜು ಬಿಡುತ್ತೇನೆಂದು ಬಿಡುತ್ತಾನೆ. ಆದರೆ ಅವನಿಗೆ ಸ್ವಾತಂತ್ರ್ಯದ ಬಗ್ಗೆ, ದೇಶಾಭಿಮಾನದ ಬಗ್ಗೆ ಗೌರವ ಇರುವುದನ್ನು ಕಾಣಬಹುದು. ಅದು ಅಧಿಕಾರಶಾಹಿಯ ರೂಪದಲ್ಲಿ ಇರುತ್ತದೆ.

ಮನೆಬಿಟ್ಟ ಜನಾರ್ಧನ ವಾಪಸ್ ಬೆಂಗಳೂರಿಗೆ ಬಂದು ಕಾಂಗ್ರೆಸ್‌ನಲ್ಲಿ ಸೇರಿಕೊಳ್ಳುತ್ತಾನೆ. ಅಲ್ಲಿ ಗುಮಾಸ್ತ ಸುಬ್ಬನಿಗೆ ಭೇಟಿಯಾಗಿ 'ನಾನು ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸುತ್ತೇನೆ' ಎಂದು ಅಧ್ಯಕ್ಷ 'ಸಂತಾನಂ'ನನ್ನು ಭೇಟಿಯಾಗುತ್ತಾನೆ. ಆಗ ಸಂತಾನಂ ಆಲೋಚಿಸಿ "ನಿಮ್ಮಂಥಹ ತರುಣರು ದೇಶಸೇವೆಗೆ ಮುಂದೆ ಬರುತ್ತಿರುವುದು ಬಹಳ ಸಂತೋಷದ ಸಂಗತಿ, ನೀವು ನಮ್ಮ ಸೇವಾದಳ ಸೇರಿ ಶಿಕ್ಷಣ ಪಡೆಯಬೇಕೆನ್ನುತ್ತಾರೆ." (ಅ.ನ.ಕೃ. ೨೦೦೬, ಪುಟ-೮೭.) ಇದು ಅವನಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕುವಂತೆ ಮತ್ತಷ್ಟು ಪ್ರೇರೇಪಿಸುತ್ತದೆ.

ಬೆಳಗಾವಿಯಲ್ಲಿ ನಡೆದ ಕಾಂಗ್ರೇಸ್ ಅಧೀವೇಶನ ಯಶಸ್ವಿಯಾಯಿತು. ೧೯೩೦ರಲ್ಲಿ ದಂಡಿ ಸತ್ಯಾಗ್ರಹ ಆರಂಭವಾಗಿದ್ದು ಪ್ರಸ್ತಾಪವಾಗಿ ಇದಕ್ಕೆ ಕರ್ನಾಟಕದಿಂದ ಜನಾರ್ಧನ ಆಯ್ಕೆಯಾದರು. ಜನಾರ್ಧನ ಸ್ವಾತಂತ್ರ್ಯ ಹೋರಾಟಕ್ಕೆ ಅಣಿಯಾದರೆ, ಪರಮೇಶಿ ಲಾಯರ್ ಆಗಿ ಬೇರೆ ರೀತಿಯ ಜೀವನಕ್ಕೆ ಕಾಲಿಟ್ಟನು. ಜನಾರ್ಧನನು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಅನೇಕ ಸಲ ಸೆರೆಮನೆವಾಸ ಅನುಭವಿಸುತ್ತಾನೆ. ಸರೆಮನೆವಾಸದಲ್ಲಿ ಸಂಜೀವಯ್ಯನ ಪರಿಚಯವಾಗುತ್ತದೆ. ಇಬ್ಬರು ಶಿಕ್ಷೆ ಮುಗಿದ ಮೇಲೆ ಸೆರೆಮನೆಯಿದ ಹೊರಬಿದ್ದಾಗ ಸಂಜೀವಯ್ಯನಲ್ಲಿ ಹಾಗೂ ಜನಾರ್ಧನನ ನಡುವೆ ಮಾತುಕತೆ ಬೆಳೆದು ಇಬ್ಬರೂ ಸ್ವಾತಂತ್ರ್ಯದ ಬಗ್ಗೆ ಭಿನ್ನಾಭಿಪ್ರಾಯ ವ್ಯಕ್ತಪಡಿಸುತ್ತಾರೆ. ಆದರೆ ಗುರಿ ಒಂದೇ ಆಗಿರುತ್ತದೆ.

ಸಂಜೀವಯ್ಯ ಆಲದಹಳ್ಳಿಯಲ್ಲಿ ಹೊಸದಾಗಿ ಆಶ್ರಮವೊಂದನ್ನು ಸ್ಥಾಪಿಸಿ, ಅದರ ಮೂಲಕ ಹೊಲೆಯರ ಉದ್ಧಾರವನ್ನು ಮಾಡಲು ಪ್ರಯತ್ನಿಸುತ್ತಾನೆ. ಅದಕ್ಕೆ ಮಾದೇಗೌಡ, ತಿಪ್ಪಾಶಾಸ್ತ್ರಿ, ಶಾಣುಭೋಗರು ವಿರೋಧಿಸುತ್ತಾರೆ. ಆದರೂ ಸಂಜೀವಯ್ಯನು ಅಂದುಕೊಂಡಿದ್ದನ್ನು ಸಾಧಿಸಿದನು. ಹೊಲೆಯರಿಗಾಗಿ ಕೈಮಗ್ಗ ಆರಂಭ ಮಾಡಿದನು. ಗಾಂಧೀಜಿ ಕಂಡ ಸ್ವಾವಲಂಬನೆಯ ಕನಸು ಇಲ್ಲಿ ಸಾಕಾರಗೊಂಡಿತು. ಆದರೆ ಸಂಜೀವಯ್ಯನ ಕೆಲಸ ಅಲ್ಲಿಯ ಮಾದೇಗೌಡರಿಗೆ, ಶಾಸ್ತ್ರೀಗಳಿಗೆ ಸಹಿಸದಂತಾದವು. ಮಾದೇಗೌಡ ಸಂಜೀವಯ್ಯನ್ನು ಕರೆಯಿಸಿ 'ಇದು ಒಳ್ಳೆಯದಲ್ಲ ನೋಡಿ' ಎಂದು ಧಮಕಿ ಹಾಕಿದ. ಇದಕ್ಕೆ ತಲೆಕೆಡಸಿಕೊಳ್ಳದೆ ಸಂಜೀವಯ್ಯನು ಮುಂದುವರೆದ. ಇಲ್ಲಿ ಕಾದಂಬರಿಕಾರರು ಅಂದಿನ ಸಾಮಾಜಿಕ ವರ್ಣ ಕಲಹ ಮತ್ತು ಭೇದ-ಭಾವಗಳನ್ನು ಹಿರಿಯರಿಂದ ಯುವಕರು ಎದುರಿಸುವ ದಿಟ್ಟತನವನ್ನು ಚಿತ್ರಿಸುತ್ತಾರೆ. ಬಾಪು ಬೆಂಗಳೂರಿಗೆ ಬಂದಿದ್ದ ಸುದ್ದಿ ತಿಳಿದ ಜನಾರ್ಧನ ಹಾಗೂ ಸಂಜೀವಯ್ಯ ಬೆಂಗಳೂರಿಗೆ ಹೋಗಿ, ಅವರನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡು ಬರುವ ಏರ್ಪಾಡು ಮಾಡಿಬಂದಿದ್ದರು. ನಿಗದಿತ ಸಮಯದಂತೆ ಬಾಪು ಆಲದಹಳ್ಳಿ ಕೇರಿಗೆ ಹಾಗೂ ಸಂಜೀವಯ್ಯನವರ ಆಶ್ರಮಕ್ಕೆ ಬಂದು "ಪುನರ್ಜನ್ಮವೆತ್ತಲು ನನಗೆ ಇಷ್ಟವಿಲ್ಲ. ನಾನು ಪುನರ್‌ಜನ್ಮ ತಳೆಯಲೇ ಬೇಕಾದರೆ ಅಸ್ಪೃಶ್ಯನಾಗಿ ಹುಟ್ಟಿ ಅವರ ದುಃಖ, ವೇದನೆ, ಅಪಮಾನಗಳ ಪಾಲಗಾರನಾಗಲು ಬಯಸುತ್ತೇನೆ" (ಅ.ನ.ಕೃ. ೨೦೦೬, ಪುಟ-೧೪೪.) ಎಂದು ಸಮಾಜದಲ್ಲಿನ ಮೇಲು-ಕೀಳು ಭಾವನೆಗಳನ್ನು ಕಿತ್ತೊಗೆಯಲು ನಾವೆಲ್ಲ ಪಣ ತೊಡಬೇಕೆಂದು ಜನರನ್ನುದ್ದೇಶಿಸಿ ಮಾತನಾಡಿದರು. ಅಲ್ಲದೆ ಲಕ್ಷ್ಮೀ ಮತ್ತು ಸಂಜೀವಯ್ಯನ ಅಂತರ್ ಜಾತಿ ವಿವಾಹವನ್ನು ಮಾಡಿಸಿ ಎಲ್ಲರಿಗೂ ಅಚ್ಚರಿಯನ್ನು ಮಾಡುತ್ತಾರೆ. ಇದನ್ನು ಊರಿನ ಹಿರಿಯರಾದ ಮಾದೇಗೌಡ, ಶಾನಭೋಗರು, ತಿಪ್ಪೇಶಾಸ್ತ್ರಿ ಮೊದಲಾದವರಿಗೆ ಕಣ್ಣೆದುರೇ ನಡೆದು ಮುಂಗಲಾರದ ತುತ್ತಾಗುತ್ತದೆ.

ಗಾಂಧೀಜಿಯವರು 'ಭಾರತ ಬಿಟ್ಟು ತೊಲಗಿ' ಎಂಬ ಘೋಷಣೆ ಮಾಡುವವರನ್ನೆಲ್ಲಾ ಬ್ರಿಟೀಷರು ಎಳೆದುತಂದು ಜೈಲಿಗೆ ಹಾಕುತ್ತಾರೆ. ಹಾಗೆ ಜೈಲು ಸೇರಿದ ಪರಮೇಶಿ ಮತ್ತು ಜನಾರ್ಧನರು ಅಲ್ಲಿ ಜೈಲಿನ ಬೇರೆ ಬೇರೆ ವ್ಯವಸ್ಥೆಗಳನ್ನು ಕಾಣುತ್ತಾರೆ. ಜೈಲಿನಲ್ಲಿ ಕೈದಿಗಳಿಗೆ 'ಎ' ವರ್ಗ, ಬಿ ವರ್ಗ ಮತ್ತು ಸಿ ವರ್ಗವೆಂದು ಬೇರೆ ಬೇರೆಯಾಗಿ ಕೂಡುಹಾಕಿ ಅವರಿಗೆ ಬೇರೆ ಬೇರೆಯಾದ ಊಟವನ್ನು ನೀಡುತ್ತಿರುತ್ತಾರೆ. ಇದನ್ನು ಕಣ್ಣಾರೆ ಕಂಡ ಜನಾರ್ಧನನು ಜೈಲಿನಲ್ಲಿಯೇ ಸತ್ಯಾಗ್ರಹಕ್ಕೆ ಮುಂದಾಗುತ್ತಾನೆ. ಇದು ಬ್ರಿಟೀಷರ ಕೆಂಗಣ್ಣಿಗೆ ಗುರಿಯಾಗಿ ಪರಮೇಶ್ವರನ ಮಧ್ಯಸ್ಥಿಕೆಯಿಂದ ಸತ್ಯಾಗ್ರಹವನ್ನು ವಾಪಸ್ ಪಡೆಯುತ್ತಾನೆ. ಇಲ್ಲಿ ಜರ್ನಾಧನ ಜೈಲಿನಲ್ಲಿದ್ದರೂ ಸಹ ತನ್ನ ಹೋರಾಟದ ಮನೋಭಾವವನ್ನು ಮುಂದುವರೆಸಿದ್ದು ವೇದ್ಯವಾಗುತ್ತದೆ. ಅವನಲ್ಲಿನ ಅಚಲ ಹೋರಾಟವು ಅನ್ಯಾಯದ ವಿರುದ್ಧ ಎಂದು ತೋರುತ್ತದೆ.

ಲಾರ್ಡ್ ಮೌಂಟ್‌ಬ್ಯಾಟನ್ ಜೂನ್ ೩ ೧೯೪೭ರಂದು ಅಗಸ್ಟ್ ೫ ರಂದು ಭಾರತ ಸ್ವತಂತ್ರ ವೆಂದು ಘೋಷಿಸಿದರು. ಇದನ್ನು ತಿಳಿದ ಸಂಜೀವಯ್ಯ "ಸ್ವತಂತ್ರವೇನೋ ಸಿಕ್ಕಿತು. ಅದನ್ನು ಉಳಿಸಿಕೊಳ್ಳಬೇಕು" ಎಂದು ನಿಟ್ಟುಸಿರುಗಳೆದ. ಅಲ್ಲದೆ ದೈನಂದಿನ ಪತ್ರಿಕೆಯಲ್ಲಿ ಬಂದ ಸ್ವಾತಂತ್ರ್ಯ ನಂತರ ಭಾರತವನ್ನು ಆಳುವ ಮಂತ್ರಿಗಳ ಪಟ್ಟಿಯಲ್ಲಿ ಸಮಾಜ ಕಲ್ಯಾಣ ಹರಿಜನೋದ್ಧಾರ' ಹುದ್ದೆಯನ್ನು ಹರಿಜನ ವಿರೋಧಿಯಾದಂತ ಪರಮೇಶ್ವರಪ್ಪನಿಗೆ ಬಂದಿರುವುದನ್ನು ನೋಡಿ ಜನಾರ್ಧನನು "ಇದಕ್ಕೆ ವಿಧಿಯ ಅಣಕವೆನ್ನುವುದು" ಎನ್ನುತ್ತಾನೆ.

ಪ್ರಸ್ತುತ ಕಾದಂಬರಿ ಅನಕೃ ಅವರ ವಿಭಿನ್ನ ಮುಖದ ಸ್ವಾತಂತ್ರ್ಯ ಧೋರಣೆಯನ್ನು ಯುವಕರ ಮೂಲಕ ಹೇಳಹೊರಟಿರುವುದು ಕಾಣುತ್ತದೆ. ಇಲ್ಲಿನ ಜನಾರ್ಧನ ಪ್ರಗತಿಶೀಲ ಮನೋಧೋರಣೆಯನ್ನು ಹೊಂದಿದ ಗಾಂಧೀವಾದಿ. ಆದರೆ ಸಂಜೀವಯ್ಯನು ಸಹ ಜರ್ನಾಧನನ್ನು ಅನುಸರಿಸಿದರೂ ಅವನಿಗೆ ಸ್ವಾತಂತ್ರ್ಯದ ಸ್ಪಷ್ಟವಾದ ಪರಿಕಲ್ಪನೆ ಜನಾರ್ಧನನಷ್ಟು ಇಲ್ಲ. ಆಳುವ ವರ್ಗವಾಗಿ ಬ್ರಿಟೀಷರು ನಮಗೆ ನೇರವಾಗಿ ಕಂಡರೆ. ಅವರನ್ನು ಎದುರಿಸಿ, ಹೋರಾಡಿ ಹೊಡೆದೋಡಿಸಬಹುದು. ಆದರೆ ದೇಶದೊಳಗಿನ ನಮ್ಮನ್ನು ಸಂವಿಧಾನಿಕವಾಗಿ ಆಳುವ ವರ್ಗದ ಮಂತ್ರಿಗಳನ್ನು ಹೇಗೆ ತಹಬದಿಗೆ ತರುವುದು ಸಾಧ್ಯವೇನೋ ಎಂಬ ಪ್ರಶ್ನೆಯೊಂದನ್ನು ಹುಟ್ಟುಹಾಕಿ ಕಾದಂಬರಿ ಸಾಯುತ್ತದೆ. ಇದು ಅಂದಿನ ಭಾರತದ ವಾಸ್ತವ ರಾಜಕೀಯ ಚಿತ್ರಣವನ್ನು ಕಾದಂಬರಿಕಾರರು ಸ್ವತಃ ಅನುಭವಿಸಿದ ಹಾಗೆ ಕಾಣಿಸುತ್ತದೆ. ಏಕೆಂದರೆ ಸ್ವಾತಂತ್ರ್ಯ ಪೂರ್ವದ ಘಟನೆಗಳೊಂದಿಗೆ ಕಾದಂಬರಿ ಆರಂಭವಾಗಿ ಅಂತ್ಯದಲ್ಲಿ ಸ್ವಾತಂತ್ರ್ಯದಿಂದ ಆದ ಪರಿಣಾಮಗಳನ್ನು ಪ್ರಭಾವಗಳನ್ನು ತಿಳಿಸುತ್ತದೆ.

## ನಿರಂಜನ ಅವರ ಸ್ವಾತಂತ್ರ್ಯ ನಂತರದ ಕಾದಂಬರಿಗಳಲ್ಲಿನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು

ಕುಳಕುಂದ ಶಿವರಾಯ ಅವರು ನಿರಂಜನ ಎಂಬ ಕಾವ್ಯನಾಮದಿಂದ ಹೆಚ್ಚು ಜನಪ್ರಿಯರಾಗಿದ್ದಾರೆ. ಇವರು ಪ್ರಗತಿಶೀಲ ಪಂಥದ ಹಿರಿಯ ಲೇಖಕರು. ಬಾಲ್ಯದಿಂದ ಕಮ್ಯುನಿಷ್ಟ ಧೋರಣೆಯನ್ನು ಅಳವಡಿಸಿಕೊಂಡು ಬೆಳೆದವರು. ಆ ಧೋರಣೆಯನ್ನು ತಮ್ಮ ಸಾಹಿತ್ಯ ಕೃತಿಗಳಲ್ಲಿ ಪ್ರಮುಖವಾಗಿ ಪ್ರತಿಪಾದಿಸಿದ್ದಾರೆ. 'ರಾಷ್ಟ್ರಬಂಧು', 'ಜನಶಕ್ತಿ', 'ಪ್ರಜಾಮತ' ಮೊದಲಾದ ಪತ್ರಿಕೆಗಳಲ್ಲಿ ಸಂಪಾದಕರಾಗಿ ಸೇವೆ ಸಲ್ಲಿಸಿದರು. ಕಮ್ಯುನಿಷ್ಟ್ ಪಕ್ಷವನ್ನು ಸೇರಿ ಕಮ್ಯುನಿಷ್ಟರ ಕಾರ್ಯಗಳನ್ನು ಹಮ್ಮಿಕೊಂಡರು. ಕನ್ನಡ ಸಾಹಿತ್ಯದಲ್ಲಿ ಪ್ರಮುಖ ಕಥೆಗಾರರಾಗಿ, ಕಾದಂಬರಿಕಾರರಾಗಿ ಚಿರಸ್ಮರಣೀಯರಾಗಿದ್ದಾರೆ.

ನಿರಂಜನರು ತಮ್ಮ ಸಾಹಿತ್ಯದಲ್ಲಿ ಮೊದಲಿನಿಂದಲೂ ಸಾಮ್ರಾಜ್ಯಶಾಹಿ, ಅಧಿಕಾರಶಾಹಿ ಧೋರಣೆಗಳ ವಿರುದ್ಧ ಬಂಡೇಳುತ್ತಲೇ ಬರೆಯುತ್ತಾ ಬಂದಿದ್ದಾರೆ. ಬ್ರಿಟೀಷ್‌ರ ವಸಾಹತುಶಾಹಿಯನ್ನು ಕಣ್ಣಾರೆ ಕಂಡ ನಿರಂಜನರು ಅವರ ದರ್ಪದ ಆಡಳಿತಕ್ಕೆ ಮತ್ತು ಅದರಿಂದಾದ ಭಾರತೀಯ ಸಂಸ್ಕೃತಿಯ ಮೇಲೆ ಆದ ಪರಿಣಾಮಗಳಿಗೆ ಮುಖಾಮುಖಿಯಾಗುತ್ತಲೇ ಬಂದವರು. "ಪ್ರಗತಿಶೀಲ ಸಾಹಿತ್ಯ ಚಳುವಳಿ ತನ್ನ ಪ್ರಣಾಳಿಕೆಯಲ್ಲಿ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡುವುದನ್ನು ಒಂದಂಶ ಮಾಡಿಕೊಂಡಿತ್ತು. ನಿರಂಜನರೂ ಸ್ವಾತಂತ್ರ್ಯ ಹೋರಾಟ ಕುರಿತ ಕಥೆ, ಕಾದಂಬರಿಗಳನ್ನು ಬರೆದರು. ಸ್ವಾತಂತ್ರ್ಯ ಹೋರಾಟ ಕುರಿತ ಕಥಾ ಸಾಹಿತ್ಯದ ಕೃಷಿಯಲ್ಲಿ ನಿರಂಜನರ ಪಾತ್ರ ವಿಶಿಷ್ಟವಾದುದು." (ಆಮೂರ.ಜಿ.ಎಸ್., ೨೦೧೦, ಪುಟ-೫೬. )

ನಿರಂಜನರು ೨೫ ಕಾದಂಬರಿಗಳನ್ನು ಪ್ರಕಟಿಸಿದ್ದಾರೆ. 'ವಿಮೋಚನೆ' ಇವರ ಮೊದನೆಯ ಕಾದಂಬರಿ. 'ರಂಗಮ್ಮನ ವಠಾರ', ದೂರದ ನಕ್ಷತ್ರ, ನವೋದಯ, ಕೊನೆ ನಮಸ್ಕಾರ, ಬಂಗಾರದ ಜಿಂಕೆ, ಸ್ವಾಮಿ ಅಪರಾಂಪರ, ಹೆಣ್ಣಾಗಿ ಕಾಡಿತ್ತು ಮಾಯೆ, ಅಭಯ, ಪಾಲಿಗೆ ಬಂದ ಪಂಚಾಮೃತ, ನಂದಗೋಕುಲ, ತೊಟ್ಟಿಲು ತೂಗದ ಕೈ, ದೀಕ್ಷೆ ಮೊದಲಾದವು. ಇವುಗಳಲ್ಲಿ ಸ್ವಾತಂತ್ರ್ಯ ಹೋರಾಟದ ವಸ್ತುವನ್ನುಳ್ಳ ಕಾದಂಬರಿಗಳೆಂದು 'ವಿಮೋಚನೆ' (೧೯೫೩), 'ಚಿರಸ್ಮರಣೆ' (೧೯೫೫), ಕಲ್ಯಾಣಸ್ವಾಮಿ (೧೯೫೬), ಸ್ವಾಮಿ ಅಪರಾಂಪರ (೧೯೬೭), 'ಮೃತ್ಯುಂಜಯ' (೧೯೭೬)ಗಳನ್ನು ಗುರುತಿಸಬಹುದು. ಇವುಗಳಲ್ಲಿ ನೇರವಾಗಿ ಭಾರತ ಸ್ವಾತಂತ್ರ್ಯಕ್ಕೆ ಸಂಬಂಧಿಸದೇ ಇದ್ದರೂ ಸಹ ಅವುಗಳಲ್ಲಿ ಸ್ವಾತಂತ್ರ್ಯದ ಬೇರೆ ಬೇರೆ ರೂಪಗಳು ಅಪ್ರತ್ಯಕ್ಷವಾಗಿ ವ್ಯಕ್ತವಾಗಿರುವದನ್ನು ಕಾಣುತ್ತೇವೆ.

ಪ್ರಸ್ತುತ ಮಹಾಪ್ರಬಂಧದಲ್ಲಿ ನಿರಂಜನರು ರಚಿಸಿದ ಚಿರಸ್ಮರಣೆ, ಮೃತ್ಯುಂಜಯ, ಸ್ವಾಮಿ ಅಪರಾಂಪರ, ಕಲ್ಯಾಣಸ್ವಾಮಿ ಕಾದಂಬರಿಗಳು ಜಮೀನುದಾರಿಕೆಯ ವಿರುದ್ಧ ಸಿಡಿದೆದ್ದ ರೈತರ ಹೋರಾಟವನ್ನು ಪ್ರಧಾನ ವಸ್ತುವನ್ನಾಗಿಯುಳ್ಳ ಕಾದಂಬರಿಗಳಾಗಿವೆ. ರೈತರು ಮತ್ತು ಕೂಲಿಕಾರ್ಮಿಕರ ಪರವಾದ ದೊಡ್ಡ ದನಿಯನ್ನೇ ಈ ಕಾದಂಬರಿಗಳು ಹೊರಹಾಕುತ್ತವೆ. ವಿಮೋಚನೆ ಕಾದಂಬರಿ ರೈತ ಹೋರಾಟಕ್ಕಿಂತ ಭಿನ್ನವಾಗಿ ಕೂಲಿ ಕಾರ್ಮಿಕರ ಪರವಾಗಿ ನಡೆದ ಹೋರಾಟದ ಚಿತ್ರಣವನ್ನು ನೀಡುತ್ತದೆ. ಹೀಗಾಗಿ ಇವುಗಳನ್ನು ಪ್ರಸ್ತುತ ಮಹಾಪ್ರಬಂಧದ ಅಧ್ಯಯನಕ್ಕೆ ಒಳಪಡಿಸಿಕೊಂಡು ವಿಶ್ಲೇಷಿಸಲಾಗಿದೆ.

**ವಿಮೋಚನೆ (೧೯೫೩)**

"೧೯೫೩ರಲ್ಲಿ ಪ್ರಕಟವಾದ 'ವಿಮೋಚನೆ' ಮೊಟ್ಟ ಮೊದಲ ಕಾದಂಬರಿಯಾದರೂ ಅದು ಅವರ ವಿಶಿಷ್ಟ ಸಾಹಿತ್ಯ ಪ್ರತಿಭೆಯ ಎಲ್ಲ ಲಕ್ಷಣಗಳನ್ನು ಹೊಂದಿದೆ. ಅವುಗಳಲ್ಲಿ ಮುಖ್ಯವಾದುದು; ನಿರಂಜನರ ವರ್ಗ ಪ್ರತಿಜ್ಞೆ ಮತ್ತು ಮಾರ್ಕಿಸ್ಟ್ ವಿಚಾರಧಾರೆಯ ಪ್ರಭಾವ, ಗಾರ್ಕಿಯವರ ನಾಟಕ 'ದ ಲೋವರ್ ಡೆಪ್ತ್ಸ್', ಮುಲ್ಕರಾಜ್ ಆನಂದರ ಕಾದಂಬರಿ 'ಕೂಲಿ' ಮತ್ತು ಬಸವರಾಜ ಕಟ್ಟೀಮನಿಯವರ 'ಜ್ವಾಲಾಮುಖಿಯ ಮೇಲೆ' ಇಂಥ ಕೃತಿಗಳ ಸಂಪ್ರದಾಯವೇ ವಿಮೋಚನೆ ಸಂಪ್ರದಾಯ. ಯಾವದೊಂದು ಸಿದ್ಧಾಂತವನ್ನು ಪ್ರಸ್ತಾಪಿಸಲೆಂದು ಹೊರಟ ಕೃತಿಯಲ್ಲವಾದರೂ ತಾತ್ವಿಕತೆ ಈ ಕಾದಂಬರಿಯ ಬೆನ್ನೆಲಬು. ಚಿರಸ್ಮರಣೆ ಅಥವಾ ಮೃತ್ಯುಂಜಯ ವರ್ಗ ಕಲಹದ ಪ್ರಶ್ನೆಯನ್ನು ನೇರವಾಗಿ ಎತ್ತಿಕೊಂಡು ಬರೆದ ಕಾದಂಬರಿಗಳು. ಆದರೆ 'ವಿಮೋಚನೆ' ಇಂಥ ವರ್ಗ ಕಲಹಕ್ಕೆ ಪೂರ್ವಭಾವಿಯಾದ ಸಾಮಾಜಿಕ ವಿಷಮತೆ ಮತ್ತು ಅದರಿಂದ ಹುಟ್ಟಿಕೊಳ್ಳುವ ಮಾನವೀಯ ಯಾತನೆ ಇವುಗಳ ಯಥಾವತ್ತಾದ ಚಿತ್ರಣದಲ್ಲಿ ಕೊನೆಗೊಳ್ಳುತ್ತದೆ." (ನಿರಂಜನ, ೨೦೧೭, ಪುಟ-೨೭.)

ಹೀಗಿರುವ ಕಾದಂಬರಿಯಲ್ಲಿ ನೇರವಾಗಿ ಸ್ವಾತಂತ್ರ್ಯ ಹೋರಾಟವನ್ನು ನಾವು ಕಾಣದೆ ಹೋದರೂ ವರ್ಗ ಕಲಹಗಳಲ್ಲಿ ಆಳುವ ವರ್ಗದಿಂದ ಮುಕ್ತಿಯನ್ನು ಪಡೆಯುವದಕ್ಕಾಗಿ ನಡೆಸುವ ಹೋರಾಟವೇ ಹೆಚ್ಚು ಮೂಡಿಬಂದಿದೆ. ಅಲ್ಲದೆ ಸಾಮ್ರಾಜ್ಯಶಾಹಿ ದರ್ಪವನ್ನು ಬ್ರಿಟೀಷರಿಂದ ಬಳುವಳಿಯಂತೆ ಪಡೆದುಕೊಂಡ ಭಾರತೀಯ ಶ್ರೀಮಂತ, ಜಮೀನ್ದಾರಿ ವರ್ಗಗಳು ಬಡವರನ್ನು ಬ್ರಿಟೀಷರಿಗಿಂತಲೂ ಹೆಚ್ಚಾಗಿ ಕೀಳುಮಟ್ಟದಲ್ಲಿ ನಡೆಸಿಕೊಂಡರು ಎಂಬುದನ್ನು ಕಾದಂಬರಿ ಒಳಗೊಂಡಿದೆ. ಅದರ ವಿರುದ್ಧ ಚಂದ್ರುನಂಥ ಯುವ ಸಮುದಾಯವು ನಡೆಸಿದ ಹೋರಾಟವು ಸ್ವಾತಂತ್ರ್ಯ ಹೋರಾಟದಷ್ಟೇ ಮಹತ್ವವನ್ನು

ಪಡೆದುಕೊಂಡಿದೆ. ಆದ್ದರಿಂದ ಪ್ರಸ್ತುತ ಮಹಾಪ್ರಬಂಧದ ವ್ಯಾಪ್ತಿಯಲ್ಲಿ ಬರುವ 'ವಿಮೋಚನೆ' ಕಾದಂಬರಿ ಇಲ್ಲಿ ಅಧ್ಯಯನ ವಿಶ್ಲೇಷಣೆಗೆ ಒಳಗಾಗಿದೆ.

'ವಿಮೋಚನೆ' ನಿರಂಜನರ ಪ್ರಥಮ ಕಾದಂಬರಿ. ಹೀಗಾಗಿ ಇಲ್ಲಿ ಅನೇಕ ಮಿತಿಗಳಿವೆ ಚಿರಸ್ಮರಣೆ ಮತ್ತು ಮೃತ್ಯುಂಜಯ ಕಾದಂಬರಿಗಳಂತೆ ವರ್ಗ ಹೋರಾಟ ಪ್ರಧಾನವಾಗಿರದೆ ಪ್ರಾಸಂಗಿಕವಾಗಿ ಬರುತ್ತದೆ. ಇಲ್ಲಿ ಬರುವ ಚಂದ್ರುವಿನ ಪಾತ್ರ ಸಮಾಜ ವ್ಯವಸ್ಥೆಯ ಅಸಹಾಯಕತೆಯ ಪ್ರತೀಕದಂತಿದೆ. ಚಂದ್ರುನನ್ನು ಪ್ರಾಮಾಣಿಕವಾಗಿ ಬದುಕಲು ಬಿಡದ ಈ ಅಸಮಾನತೆ ವ್ಯವಸ್ಥೆ ಅವನನ್ನೂ ಕಳ್ಳನನ್ನಾಗಿ ಸುಳ್ಳನನ್ನಾಗಿ ಬೆಳೆಸುತ್ತದೆ. ಚಂದ್ರು ನಡೆಸುವ ಇಲ್ಲಿನ ಹೋರಾಟ ಸೈದ್ಧಾಂತಿಕ ಶಿಸ್ತಿನಿಂದ ಬಂದುದಾಗಿರದಿದ್ದರೂ ಅದು ಅನೇಕ ಮಗ್ಗಲುಗಳನ್ನು ಪಡೆದು ಕುತೂಹಲ ಕೆರಳಿಸುತ್ತದೆ. ಚಂದ್ರುವಿನ ಹೋರಾಟದ ವೈವಿಧ್ಯತೆ ಹಳ್ಳಿಯಿಂದ ಪ್ರಾರಂಭವಾಗಿ ಮುಂಬೈದಂತ ನಗರದ ವರೆಗೂ ಮುಂದುವರೆಯುತ್ತದೆ. ಚಂದ್ರು ಮುಂಬೈ ಸೇರುವಾಗಿನ ಪ್ರಸಂಗಗಳು ನೇರವಾಗಿ ವರ್ಗಹೋರಾಟಕ್ಕೆ ಸಂಬಂಧಿಸದಿದ್ದರೂ ಬಡತನದ ತೀವ್ರತೆ ನೋವಿನ ಪರಿಣಾಮಗಳು ಪರಿಣಾಮಕಾರಿಯಾಗಿ ಮೂಡಿಬಂದಿವೆ. ಆದರೆ ಇಲ್ಲಿ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು ನೇರವಾಗಿ ಬರದೆ ಹೋದರು ವರ್ಗಹೋರಾಟದ ಮೂಲಕ ಬಡತನದಿಂದ ಸ್ವಾತಂತ್ರ್ಯವನ್ನು ಪಡೆಯಲು ನಡೆಸುವ ಹೋರಾಟವೇ ಭಾರತದ ಸ್ವಾತಂತ್ರ್ಯದ ಫಲವಾಗಿ ಚಂದ್ರುವಿನ ಮೂಲಕ ವ್ಯಕ್ತವಾಗುವುದನ್ನು ಪ್ರಸ್ತುತ ಅಧ್ಯಯನ ಎತ್ತಿ ಹಿಡಿಯುತ್ತದೆ.

**ವರ್ಗಸಂಘರ್ಷದಲ್ಲಿ ವ್ಯಕ್ತವಾದ ಸ್ವಾತಂತ್ರ್ಯ ಹೋರಾಟ:**

ವರ್ಗಸಂಘರ್ಷವು ಕಾದಂಬರಿಯಲ್ಲಿ ಎದ್ದು ಕಾಣುತ್ತದೆ. ಅದರ ಮೂಲಕ ಸ್ವಾತಂತ್ರ್ಯದ ಹೋರಾಟವು ಕಾದಂಬರಿಯ ನಾಯಕನಿಂದ ಮೂಡುತ್ತದೆ. ಈ ಕಾದಂಬರಿಯಲ್ಲಿ ನಗರದ ಮಿಲ್ ಮಾಲೀಕರ ಕಾರ್ಮಿಕರ ನಡುವಿನ ವರ್ಗ ಸಂಘರ್ಷ ಮುಖ್ಯವಾಗುತ್ತದೆ. ಚಂದ್ರು ಇಲ್ಲಿ ನಿವೇದಕನ ಪಾತ್ರವಹಿಸುತ್ತಾನೆ. ಈ ವರ್ಗ ಸಂಘರ್ಷದ ಮುಂಚುಣಿಯಲ್ಲಿರುವ ಮಿಲ್ ಮಾಲಿಕ ಶ್ರೀಕಂಠ ಹಾಗೂ ಮಿಲ್ ಕಾರ್ಮಿಕ ನಾಯಕ ನಾರಾಯಣ ಇಬ್ಬರೂ ಚಂದ್ರುವಿನ ಸಹಪಾಠಿಗಳಾಗಿದ್ದರು. ಆದರೆ ಅಸಮಾನತೆಯ ವ್ಯವಸ್ಥೆಯಲ್ಲಿ ಇವ್ಯಾವು ಗಣನೆಗೆ ಬರುವುದಿಲ್ಲ. ಕೇವಲ ಹಣ ಸಂಪತ್ತು, ಅಧಿಕಾರ ದರ್ಪಗಳು ಮಾತ್ರ ಮುಖ್ಯವಾಗುತ್ತವೆ. ಶ್ರೀಕಂಠನ ಸಾಮೀಪ್ಯ ಹೊಂದಿ ಅವರ ಆಶ್ರಯದಲ್ಲಿದ್ದ ಚಂದ್ರು, ಅದೇ ಇನ್ನೊಬ್ಬ ಸಹಪಾಠಿ ನಾರಾಯಣನ ನೋವಿಗೆ ಶೋಷಣೆಗೆ ಕಾರಣವನ್ನು ತಿಳಿದುಕೊಂಡರೂ ಮೌನ ವಹಿಸಬೇಕಾಗುತ್ತದೆ. ತನ್ನ ಮಗನನ್ನು ವಿದ್ಯಾವಂತನನ್ನಾಗಿ ಮಾಡಬೇಕು. ಆತ ದೊಡ್ಡ ವ್ಯಕ್ತಿಯಾಗಿ ಬೆಳೆಯಬೇಕು ಎಂದು ಚಂದ್ರುವಿನ

ತಂದೆಯಂಥವರು ಕಟ್ಟಿಕೊಂಡಿದ್ದ ಕನಸುಗಳು ಈ ಅಸಮಾನತೆಯ ವ್ಯವಸ್ಥೆಯಲ್ಲಿ ಪುಡಿಪುಡಿಯಾಗುತ್ತವೆ. ತಂದೆಗೆ ಮಾಯವಾಗದ ರೋಗ. "ನಾನು ಬಡವ; ನನ್ನ ಲೋಕ ಬೇರೆ... ತಂದೆ ಬೆಳಿಗ್ಗೆ ಕೆಮ್ಮಿದಾಗ, ನನ್ನ ಕರುಳು ಕತ್ತರಿಸಿದ ಹಾಗೆ ನನಗೆ ನೋವಾಗಿತ್ತು. ತಂದೆಗೆ ಸರಿಯಾದ ಚಿಕಿತ್ಸೆ ಮಾಡಿಸಲೇಬೇಕು. ತಂದೆ ಗುಣಮುಖವಾಗಲೇಬೇಕು" (ಬಸವರಾಜ ಸಬರದ, ೧೯೯೯, ಪುಟ-೩೪-೩೫.) ಎಂದುಕೊಂಡು ಅನಾರೋಗ್ಯದಿಂದ ಬಳಲುವ ತಂದೆಯನ್ನು ಹೇಗಾದರುಮಾಡಿ ಸರಿಯಾದ ಚಿಕಿತ್ಸೆ ಕೊಡಬೇಕೆಂಬ ಒತ್ತಡ ಒಂದೆಡೆಯಾದರೆ ಆಳುವ ವರ್ಗದ ಮೇಲಿನ ಸಿಟ್ಟು ಮತ್ತೊಂದೆಡೆ.

ಚಂದ್ರು ಓದಿ ದೊಡ್ಡವನಾಗಲು ಈ ವ್ಯವಸ್ಥೆಯಲ್ಲಿ ಸಾಧ್ಯವಾಗದೇ ಹೋಗುತ್ತದೆ. ಕಿತ್ತು ತಿನ್ನುವ ಬಡತನ-ತಂದೆಯ ಅನಾರೋಗ್ಯ, ಉಳ್ಳವರಿಂದ ದೊರೆಯದ ಸಹಾಯ ಚಂದ್ರು ಓದನ್ನು ಮುಂದುವರೆಸದಂತೆ ಮಾಡುತ್ತವೆ. ಕೊನೆಗೆ ಚಂದ್ರು ಪತ್ರಿಕೆ ಮಾರುವ ಕೆಲಸ ಹಿಡಿಯುತ್ತಾನೆ. ಅಲ್ಲಿ ಪಿಕ್ ಪಾಕೆಟ್ ಮಾಡಿದ ಆರೋಪಕ್ಕೆ ಗುರಿಯಾಗಿ ಪೋಲೀಸ್ ಲಾಕಪ್ಪಿನ ಮೊದಲ ರುಚಿಯನ್ನು ಪಡೆಯುತ್ತಾನೆ. ಅವನಿಗೆ ಪೋಲೀಸರ ದೌರ್ಜನ್ಯದ ಮೊದಲ ಮುಖ ಪರಿಚಯವಾಗುತ್ತದೆ. ಬಡ ತಂದೆಯ ಕನಸುಗಳೆಲ್ಲ ಅಲ್ಲಿಯೇ ಚೂರು ಚೂರಾಗುತ್ತವೆ. ಸಮಾಜವು ಜೈಲಿಗೆ ಹೋಗಿಬಂದ ಚಂದ್ರುವನ್ನು ಕಳ್ಳನಂತೆ ನೋಡುತ್ತದೆ. ಚಂದ್ರು ನಿಜವಾದ ಕಳ್ಳನಾಗಿ ಮುಂಬೈಯನ್ನು ಸೇರಿಕೊಳ್ಳುತ್ತಾನೆ. ಅದೇ ಅವನ ಉದ್ಯೋಗವಾಗಿ ಮುಂದೊಂದು ದಿನ ಶ್ರೀಮಂತನಾದ ಗೆಳೆಯ ಶ್ರೀಕಂಠನನ್ನು ಉಳಿಸಲು ಹೋಗಿ ತಾನೇ ದುರಂತದಲ್ಲಿ ಕೊನೆಗೊಳ್ಳುತ್ತಾನೆ.

ಇಲ್ಲಿ ಚಂದ್ರು ಆಳುವ ವರ್ಗದವರಿಂದ ತನ್ನ ಪ್ರಾಣವನ್ನು ಪಣವಿಡುವದರಿಂದ, ಸ್ವಾತಂತ್ರ್ಯ ಹೋರಾಟದಲ್ಲಿ ಹೋರಾಡಿ ಮಡಿದವರಷ್ಟೇ ಗೌರವವನ್ನು ಪಡೆದುಕೊಳ್ಳುತ್ತಾನೆ. ಏಕೆಂದರೆ ಅವನು ತನ್ನ ಸ್ವಾರ್ಥಕ್ಕಾಗಿ ಮಾಡಿದ ಹೋರಾಟವಲ್ಲ. ಅದು ಸಾಮಾಜಿಕ ಪಿಡುಗಾಗಿ ಕಾಡುತ್ತಿದ್ದ ಬಡವ-ಬಲ್ಲಿದರ ನಡುವಿನ ಹೋರಾಟ. ಅದರಲ್ಲಿ ಅವನಿಗೆ ಜಯ ಸಿಗುವುದು ಪ್ರಮುಖ ಗುರಿ. ಆದರೆ ಅದನ್ನು ಸಾಧಿಸಿಯೇ ತೀರುತ್ತೇನೆ ಎಂದುಕೊಂಡ ಚಂದ್ರು ಗೆಲ್ಲಲಾರದೇ ಹೋಗುತ್ತಾನೆ. ಈ ರೀತಿಯ ಚಿತ್ರಣವು 'ಚಿರಸ್ಮರಣೆ' ಮತ್ತು 'ಮೃತ್ಯುಂಜಯ' ಕಾದಂಬರಿಗಳಲ್ಲಿ ಬಂದಿರುವುದನ್ನು ಇಲ್ಲಿ ಉಲ್ಲೇಖಿಸಬಹುದು.

**ಸ್ವಾತಂತ್ರ್ಯ ಹೋರಾಟದ ತುಡಿತ:**

ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರವೂ ಮೇಲ್ವರ್ಗದ ಶೋಷಣೆ ಮುಂದುವರೆದಿರುವ ಸಂಗತಿಯನ್ನು 'ವಿಮೋಚನೆ' ಹೇಳಿದರೆ; ಸ್ವಾತಂತ್ರ್ಯ ಪೂರ್ವದ ಸ್ಥಿತಿಯೂ ಇದನ್ನೇ ಹೇಳುತ್ತದೆ.

ಹೀಗಾಗಿ ಈ ದೇಶಕ್ಕಾಗಿ ಲಭಿಸಿದ ಸ್ವಾತಂತ್ರ್ಯ ಬಡವರಿಗೆ, ಕಾರ್ಮಿಕರಿಗೆ, ರೈತರಿಗೆ ಯಾವ ಬದಲಾವಣೆಯನ್ನೂ ತಂದುಕೊಟ್ಟಿಲ್ಲವೆಂಬ ಸಂಗತಿ ಇದರಿಂದ ಸ್ಪಷ್ಟವಾಗುತ್ತದೆ. ಪೋಲೀಸರಿಂದ ಹೊಡೆತ ತಿನ್ನುವುದು, ಲಾಕಪ್ಪಿನಲ್ಲಿ ಸಾಯುವುದು, ಕೂಲಿಯಿಲ್ಲದೆ ಒಳಲುವುದು, ಕೆಲಸಕ್ಕಾಗಿ ಅಲೆಯುವುದು, ನೋವಿನಿಂದ ನರಳುವುದು ಈ ಎಲ್ಲ ಕ್ರಿಯೆಗಳಲ್ಲಿ ಏನೂ ಬದಲಾವಣೆಯಾಗದೇ ಇರುವುದನ್ನು ಗಮನಿಸಿದಾಗ ಈ ಸ್ವಾತಂತ್ರ್ಯ ಯಾರಿಗೆ ಬಂತು? ಎಲ್ಲಿಗೆ ಬಂತು? ಎಂಬಂತಹ ಪ್ರಶ್ನೆಗಳು ಮುಖ್ಯವಾಗುತ್ತವೆ. ಈ ಎಲ್ಲ ಪ್ರಶ್ನೆಗಳ ಹುಡುಕಾಟವಾಗಿ ನಿರಂಜರ ಕಾದಂಬರಿಗಳಲ್ಲಿ ವರ್ಗ ಸಂಘರ್ಷ ಸ್ಫೋಟಿಸಿದೆ. ಬಿಳಿಯರು ಹೋದರು, ಕರಿಯರು ಅಧಿಕಾರ ಹಿಡಿದುಕೊಂಡರು. ಆದರೆ ಆದದ್ದೇನು? ದರ್ಪ ತೋರುವಲ್ಲಿ, ಅನ್ಯಾಯ ಎಸಗುವಲ್ಲಿ, ಶೋಷಣೆ ಮಾಡುವಲ್ಲಿ ಏನೂ ವ್ಯತ್ಯಾಸವಿಲ್ಲವೆಂಬ ಸಂಗತಿಗಳನ್ನು ನಿರಂಜನರ ಕೃತಿಗಳು ಪರಿಣಾಮಕಾರಿಯಾಗಿ ಹಿಡಿದಿಡುತ್ತವೆ. ಸ್ವಾತಂತ್ರ್ಯ ದಿನಾಚರಣೆಯಂದೂ ಹಸಿವಿನಿಂದ ಸಾಯುವ ಸಹಸ್ರಾರು ಜನ, ಈ ದಿನದಂದೇ ಲಾಕಪ್ಪಿನಲ್ಲಿ ಅಸುನೀಗುವ ನೂರಾರು ಜನ ಈ ದೇಶದ ಸ್ವಾತಂತ್ರ್ಯದ ಪೊಳ್ಳುತನಕ್ಕೆ ಸಾಕ್ಷಿಯಾಗಿದ್ದಾರೆ. ಇಂತಹ ಅನೇಕ ಪ್ರಸಂಗಗಳನ್ನು ನಿರಂಜನರು ಈ ಕಾದಂಬರಿಯ ಮೂಲಕ ಪರಿಣಾಮಕಾರಿಯಾಗಿ ಹೇಳಿದ್ದಾರೆ (ಬಸವರಾಜ ಸಬರದ, ೧೯೯೯, ಪುಟ-೬೭.)

ಸ್ವಾತಂತ್ರ್ಯಕ್ಕೆ ನಡೆದ ಹೋರಾಟ, ಹೋರಾಟದಲ್ಲಿ ನಿಜವಾಗಿ ಪಾಲ್ಗೊಂಡವರು ದೇಶಕ್ಕಾಗಿ ಮಡಿದವರ ಸಾಲಿಗೆ ಚಂದ್ರು ಸಹ ಒಬ್ಬನಾಗುತ್ತಾನೆ. ಇವನದು ನೇರವಾಗಿ ದೇಶಮುಕ್ತಿಗಾಗಿ ನಡೆಸಿದ ಸ್ವಾತಂತ್ರ್ಯ ಹೋರಾಟವಲ್ಲ. ಸ್ವಾತಂತ್ರ್ಯವೆಂಬುದಿಲ್ಲಿ ಆಳುವ ವರ್ಗದಿಂದ ಆಳಿಸಿಕೊಳ್ಳುವ ವರ್ಗ ಪಡೆದುಕೊಳ್ಳುವ ಹೋರಾಟವಾಗಿದೆ. ಇದಕ್ಕೆ ಯುವಕನೋರ್ವ ಪ್ರಾಣವನ್ನು ಪಣವಿಡುವ ಸಂಗತಿ ಪ್ರಸ್ತುತ ಕಾದಂಬರಿಯಲ್ಲಿ ಮೂಡಿಬಂದಿದೆ.

ಇಲ್ಲಿ ಕಾದಂಬರಿ ಯಾವ ಸಿದ್ಧಾಂತವನ್ನು ಮಂಡಿಸುವುದಿಲ್ಲ ಎನ್ನುವುದು ನಿಜವಾದರು ಅದು ತನ್ನ ಸಾಮಗ್ರಿಯನ್ನು ನಮ್ಮೆದುರಿಗೆ ಇಡುವ ಕ್ರಮದಲ್ಲಿಯೇ ಅದರ ತಾತ್ವಿಕತೆ ವ್ಯಕ್ತವಾಗುತ್ತದೆ. ಇಲ್ಲಿ ಶೋಷಕ ವರ್ಗದ ಪರವಾಗಿ ಶ್ರೀಕಂಠನ ಮಾವನಂಥ ಉದ್ದಿಮೆದಾರರು ಪೋಲೀಸರ ಒಕ್ಕಟ್ಟಿನ ಹಿಂದೆ ತಮ್ಮ ಸ್ಥಾನ ಸಂಪತ್ತುಗಳನ್ನು ಎಂಥ ವಿಧಾನದಿಂದಲೂ ರಕ್ಷಿಸಿಕೊಳ್ಳಬೇಕು ಎಂಬ ಸ್ವಾರ್ಥ ಪ್ರೇರಕಶಕ್ತಿಯಾದರೆ ಶೋಷಿತ ವರ್ಗದ ಒಕ್ಕಟ್ಟಿನ ಹಿಂದೆ ನೋವಿನ, ಅನುಕಂಪದ, ಮಾನವೀಯ ಸಹಾನುಭೂತಿಯ ಅನುಭವವಿದೆ. ಮೇಲ್ವರ್ಗಗಳಲ್ಲಿ ನಡೆಯುವ ನಿರ್ಮಾಣವಿಕರಣದ ಅನೇಕ ಉದಾಹರಣೆಗಳನ್ನು ಕಾದಂಬರಿಗಳಲ್ಲಿ ಕಾಣುತ್ತೇವೆ. ಪ್ರತಿಷ್ಠೆಯ ಬೆನ್ನುಹತ್ತಿದ ಲೋಕಪರಾಯಣ ರಾಮಸ್ವಾಮಿಯೇ ಐಶ್ವರ್ಯದ ಮೇಲೆ ಕಣ್ಣಿಟ್ಟ ವನಜ, ಐಶಾರಾಮಿ ಜೀವನಕ್ಕಾಗಿ ತನ್ನನ್ನೇ ಮಾರಿಕೊಂಡ ಶ್ರೀಕಂಠ ನೈತಿಕ ಮೌಲ್ಯಗಳ ಕಲ್ಪನೆ

ಇಲ್ಲದೆ ಶಾರದೆ ಶಿಕ್ಷಣದಂತ ಪವಿತ್ರ ಕಾರ್ಯದಲ್ಲಿ ತೊಡಗಿಯೂ ಸುಲಿಗೆಗೆ ಇಳಿಯುವ ಉಪಾಧ್ಯಾಯ ಇವರೆಲ್ಲರೂ ಅಮಾನವೀಕೃತ ವ್ಯಕ್ತಿಗಳೇ. ಆದರೆ ಸಮಾಜದಲ್ಲಿ ಪ್ರತಿನಿಧಿಸುವವರು ಕೂಡಾ ಇವರೇ ಆಗಿದ್ದಾರೆ. ಇದಕ್ಕೆ ವಿರುದ್ಧವಾಗಿ ಆರ್ಥಿಕ ಭದ್ರತೆ ಇಲ್ಲದೆ ಸಮಾಜದ ಹೊರಗೆ ಉಳಿದುಕೊಂಡ ಶೋಷಿತರೆಲ್ಲ ಅಪರಾಧಿಗಳಾದರೂ ತಮ್ಮ ಮಾನವೀಯತೆಯನ್ನು ಕಳೆದುಕೊಂಡವರಲ್ಲ. ಚಂದ್ರಶೇಖರನಿಗೆ ಮುಂಬೈನಲ್ಲಿ ಆಶ್ರಯ ನೀಡುವ ಅಮೀರ್-ಶೀಲ, ಅಣ್ಣನಂತೆ ಪ್ರೀತಿಸುವ ಥಲಂ ಸಹಾಯ ಹಸ್ತವನ್ನು ಎಂದಿಗೂ ಹಿಂದೆ ತೆಗೆದುಕೊಳ್ಳದ ಶೇಷಗಿರಿ, ಬಡತನವನ್ನು ಎದುರಿಸಿಯೂ ಕೂಲಿಕಾರರ ಹಿತಕ್ಕಾಗಿ ಹೋರಾಡುವ ನಾರಾಯಣ, ಸ್ವತಃ ಚಂದ್ರಶೇಖರ ಇವರೆಲ್ಲರೂ ಮಾನವೀಯತೆಯನ್ನು ಮೆರೆದವರಾಗಿದ್ದಾರೆ.

ಹೀಗೆ ಅತ್ಯಂತ ಪ್ರಸ್ತುತವಾದ ವಸ್ತುವಿನ ಆಯ್ಕೆ ನಿರ್ವಹಣೆಗಳಲ್ಲಿ, ವಾಸ್ತವದ ಜೀವನವನ್ನು ಪ್ರತಿಬಿಂಬಿಸುವ ಪಾತ್ರಗಳ ನಿರ್ಮಾಣದಲ್ಲಿ, ಆಧುನಿಕ ತಂತ್ರದ ಯಶಸ್ವಿ ಪ್ರಯೋಗದಲ್ಲಿ, ತಾತ್ವಿಕತೆಯನ್ನು ಕಲೆಯಾಗಿಸುವಲ್ಲಿ 'ವಿಮೋಚನೆ' ಜಯ ಗಳಿಸುತ್ತದೆ. ಆದರೆ ಕಾರ್ಮಿಕರ ಹೋರಾಟ ವಿಫಲವಾಗುತ್ತದೆ. ಇಲ್ಲಿ ಕಾರ್ಮಿಕರ ಹೋರಾಟದ ಪರಿಣಾಮ ಮಾತ್ರ ತುಂಬಾ ತೀವ್ರತರವಾಗಿದೆ. ಇಪ್ಪತ್ತು ಸಾವಿರ ಜನ ಕಾರ್ಮಿಕರು ತಮಗೆ ಸಿಗಬೇಕಾದ ನ್ಯಾಯಕ್ಕಾಗಿ ಇಲ್ಲಿ ಹೋರಾಡುತ್ತಾರೆ. ಆದರೆ ಶ್ರೀಕಂಠನಂತಹ ಮಾಲೀಕರು, ಈ ಕಾರ್ಮಿಕರ ಹೋರಾಟವನ್ನು ತಮ್ಮ ಹಣದ ಮೂಲಕ, ಅಧಿಕಾರದ ಮೂಲಕ-ದಮನಗೊಳಿಸಿ ಮೆರೆಯುತ್ತಾರೆ. ಶ್ರೀಕಂಠನ ಪ್ರಕಾರ ಈ ಸಮಾಜದಲ್ಲಿ ಬದುಕಬೇಕಾದವುಗಳು ಎರಡೇ ವರ್ಗ. ಒಂದು ಕಾರ್ಮಿಕರದು ಮತ್ತೊಂದು ಮಾಲಿಕರದು. ನಡುವೆ ನವೆಯುವ ಮಧ್ಯಮವರ್ಗ ಶ್ರೀಕಂಠನಂತವರಿಗೆ ಅಪಾಯಕಾರಿಯಾಗಿ ಕಾಣಿಸುತ್ತದೆ. ಆದರೆ ಮಧ್ಯಮ ವರ್ಗದ ಅದರಲ್ಲೂ ಕೆಳಮಧ್ಯಮ ವರ್ಗವು ಅನಕ್ಷರಸ್ಥರಾದ ಕೂಲಿಕಾರರ ವರ್ಗದಲ್ಲಿ ಜಾಗೃತಿಯನ್ನುಂಟು ಮಾಡುತ್ತದೆ.

ನಿರಂಜನರ ಮೊದಲ ಕಾದಂಬರಿಯಾದ ಇದು ಮನುಷ್ಯ ಸಾಧ್ಯತೆಯ ವೈವಿಧ್ಯತೆಯನ್ನು ಹರಳುಗಟ್ಟಿಸುವಂತೆ ನೀಡುತ್ತದೆ. ಕಥಾನಾಯಕ ಚಂದ್ರಶೇಖರ ಬದುಕಿನುದ್ದಕ್ಕೂ ಹೋರಾಡುವ ಚಿತ್ರಣ ಪರಿಣಾಮಕಾರಿಯಾಗಿದೆ. ತಾಯಿ-ತಂದೆಗಳನ್ನು ಕಳೆದುಕೊಂಡು ಹಳ್ಳಿಬಿಟ್ಟು ನಗರವನ್ನು ಸೇರಿ, ಬದುಕುವ ಅನೇಕ ಮಾರ್ಗಗಳನ್ನು ಹುಡುಕುತ್ತ ಪರಿತಪಿಸುವ ಚಿತ್ರ ಒಂದು ಕಡೆ ಮೂಡಿದರೆ, ಅಸಮಾನತೆಯ ವ್ಯವಸ್ಥೆಯಲ್ಲಿ ಏಕಾಂಗಿಯಾಗಿ ಹೋರಾಡಿ ದುರಂತದಲ್ಲಿ ಕೊನೆಗೊಳ್ಳುವ ಚಿತ್ರಣ ಮತ್ತೊಂದೆಡೆ ಇದೆ. (ಬಸವರಾಜ ಸಬರದ, ೧೯೯೯, ಪುಟ-೩೨-೩೩.)

ವಿಮೋಚನೆ ಕಾದಂಬರಿಯ ಕೊನೆಯಲ್ಲಿ ಕಾರ್ಮಿಕರ ಮಾಲಿಕರ ನಡುವೆ ಸಂಘರ್ಷ ತೀವ್ರವಾಗುತ್ತದೆ. ಇದೆಲ್ಲವನ್ನು ಕಣ್ಣಾರೆ ಕಂಡ ಚಂದ್ರು ಸೂತ್ರದ ಗೊಂಬೆಯಂತೆ ಸುಮ್ಮನೆ ಇರಬೇಕಾಗುತ್ತದೆ. ಕೊನೆಗೆ ಕಾರ್ಮಿಕರು ಬಂಧನಕ್ಕೊಳಗಾಗುತ್ತಾರೆ. ಸಂಬಳವಿಲ್ಲದೆ ತೊಂದರೆಗೊಳಗಾಗುತ್ತಾರೆ. ಆಸ್ಪತ್ರೆ ಸೇರುತ್ತಾರೆ. ಜೈಲು ಸೇರುತ್ತಾರೆ. ಮಿಲ್ ಮಾಲಿಕ ಶ್ರೀಕಂಠನಂಥವರು ಮೆರೆಯುತ್ತಲೇ ಇರುತ್ತಾರೆ. ಇಲ್ಲಿ ಕಥಾ ನಾಯಕ ಚಂದ್ರು ನಾರಾಯಣನಂಥವರ ಹೋರಾಟವನ್ನು ಬಲಪಡಿಸದೇ ಶ್ರೀಕಂಠನಂಥವರಿಗಾಗಿ ಬಲಿಯಾಗುವ ದುರಂತದ ಮೂಲಕ ಕಾದಂಬರಿ ಕೊನೆಗೊಳ್ಳುತ್ತದೆ. (ಬಸವರಾಜ ಸಬರದ, ೧೯೯೯, ಪುಟ-೩೦.)

'ವಿಮೋಚನೆ' ಎಂಬ ಶೀರ್ಷಿಕೆಯೇ ಔಚಿತ್ಯವಾದದು. ಯಾವುದರ ವಿಮೋಚನೆ? ಯಾರ ವಿಮೋಚನೆ? ಏಕೆ ಎಂಬ ಇತ್ಯಾದಿ ಪ್ರಶ್ನೆಗಳಡಿಯಲ್ಲಿ ಮೂಡಿ ಬಂದ ಔಚಿತ್ಯಪೂರ್ಣವಾದ ಕೃತಿ.. ನಿರಂಜನರು ಸಾಮಾನ್ಯವಾಗಿ ಯಾವುದೇ ತಾತ್ವಿಕ ಹಾಗೂ ಒತ್ತಡಗಳನ್ನು ಹೇರುವುದಿಲ್ಲ ಎಂಬ ಸಹಜ ಅಭಿಪ್ರಾಯ ಇದ್ದರೂ ಅದರ ಮಧ್ಯದಲ್ಲಿಯೇ ಅಭಿವ್ಯಕ್ತಿಯಲ್ಲಿಯೇ ಸಾಹಿತ್ಯಿಕ ಸಶಕ್ತತೆಯನ್ನು ತೋರಿಸಿರುವುದುಂಟು ಭಾರತೀಯರು ಬ್ರಿಟೀಷರಿಂದ ವಿಮೋಚನೆ ಹೊಂದಿದ್ದರೂ, ಹಸಿವಿನಿಂದ ವಿಮೋಚನೆ ಹೊಂದುವುದು ಯಾವಾಗ? ಎಂಬ ಪ್ರಶ್ನೆಯನ್ನು ಒಡಲಲ್ಲಿ ಇಟ್ಟುಕೊಂಡು ಮೂಡಿ ಬಂದ ಈ ಕಾದಂಬರಿ ಅನೇಕ ನಮ್ಮ ಕಣ್ಣಿಗೆ ಕಾಣುವ ಚಿತ್ರಣಗಳನ್ನು ನಮ್ಮೆದುರು ನಿಲ್ಲಿಸುತ್ತದೆ. ಹಸಿವಿನಿಂದ ಸಾಯುವ ಜನರು ಒಂದೆಡೆಯಾದರೆ, ಜೈಲಿನಲ್ಲಿ ಸಾಯುವ ಜನ ಇನ್ನೊಂದೆಡೆ. ಹೀಗೆ ಎರಡು ದುರಂತ ಚಿತ್ರಣಗಳ ಮೂಲಕ ಸ್ವಾತಂತ್ರ್ಯದ ಅಸ್ತಿತ್ವವನ್ನು ಪ್ರಶ್ನಿಸುವಲ್ಲಿ ನಿರಂಜನರು ಯಶಸ್ವಿಯಾಗಿದ್ದಾರೆ. ಸ್ವಾತಂತ್ರ್ಯ ಪಡೆಯುವುದು ಕೇವಲ ಬ್ರಿಟೀಷರಿಂದ ಪಡೆಯುವುದೇ ಅಷ್ಟೇ ಅಲ್ಲ; ನಾವು ಮುಖ್ಯವಾಗಿ ನಮ್ಮವರಿಂದ ಸ್ವಾತಂತ್ರ್ಯ ಪಡೆಯಬೇಕಾದುದು ತೀರಾ ಅವಶ್ಯವೆಂದು ಈ ಕೃತಿಯ ಒಡಲಾಳದ ಆಶಯ.

ಸ್ವಾತಂತ್ರ್ಯ ಪೂರ್ವದಲ್ಲಿ ಒಂದೇ ಮುಖವಿದ್ದರೆ, ಸ್ವಾತಂತ್ರ್ಯಾನಂತರದಲ್ಲಿ ಎರಡನೇ ಮುಖ ದರ್ಶನವಾಯಿತೆನ್ನುತ್ತ ಎನ್ನುತ್ತ ಬಿಳಿಯರು ಹೋದರು, ಕರಿಯರು ಬಂದರು ಎಂದೆನ್ನುವ ನಿರಂಜನರ ನುಡಿಗಳಲ್ಲಿ ವಿಷಾದದ ಹೊಗೆಯಿದೆ. ಈ ಹೊಗೆ ಅಳಿದು ನಗೆ ಬರಬೇಕಾದರೆ ಸ್ವಾತಂತ್ರ್ಯೋತ್ತರ ಭಾರತಕ್ಕೆ ನಿಷ್ಠೆ-ಪ್ರಾಮಾಣಿಕತೆ ಹಾಗೂ ಬದ್ಧತೆಗಳು ಬಹುಮುಖ್ಯವೆಂದು ಈ ಕೃತಿಯಲ್ಲಿ ಪ್ರತಿಪಾದಿಸಿದ್ದಾರೆ.

**ಚಿರಸ್ಮರಣೆ (೧೯೫೫)**

ಕೇರಳ ರಾಜ್ಯದ ಕಯ್ಯೂರಿನಲ್ಲಿ ಜರುಗಿದ ರೈತ ಬಂಡಾಯದ ಕಥೆಯೇ ಕಾದಂಬರಿಯ ವಸ್ತು. ಆಗ ಸ್ವಾತಂತ್ರ್ಯ ಹೋರಾಟ ದೇಶದಲ್ಲಿ ಹೆಚ್ಚುತ್ತಿರುವ ಕಾಲ. ೧೯೪೧ರಲ್ಲಿ ಕಯ್ಯೂರಿನಲ್ಲಿ ರೈತರು ಜಮೀನ್ದಾರಿ ಪದ್ಧತಿಯ ವಿರುದ್ಧ ಬಂಡೆದ್ದರು. ಇದು ಬ್ರಿಟೀಷ್ ಸರಕಾರದ ವಿರುದ್ಧ ಬಂಡೆದ್ದಷ್ಟೇ ಭೀಕರ ಪರಿಣಾಮವನ್ನು ಬೀರಿತು. ಬ್ರಿಟಿಷ್ ಸರಕಾರ ಕಯ್ಯೂರಿನ ರೈತರ ಹೋರಾಟವನ್ನು ಹತ್ತಿಕ್ಕಲು ಹೊಂಚು ಹಾಕುತ್ತಿತ್ತು. ಆಕಸ್ಮಿಕವಾಗಿ ಜರುಗಿದ ಪೋಲೀಸನೊಬ್ಬನ ಮರಣದ ಘಟನೆ ಅವರಿಗೆ ಸಹಾಯಕವಾಯಿತು. ರೈತ ಹೋರಾಟಗಾರರು ಅವನ ಸಾವಿಗೆ ಕಾರಣರಾಗದಿದ್ದರೂ ಸರಕಾರ ಅವರ ಮೇಲೆ ಕೊಲೆ ಆರೋಪವನ್ನು ಹೊರಿಸಿ ಬಂಧಿಸಿತು. ಕೆಲವರಿಗೆ ಐದು ವರ್ಷದ ಕಠಿಣ ಸಂಜೆಯಾಯಿತು. ನಾಲ್ವರು ಯುವಕರಿಗೆ ಮರಣ ದಂಡನೆ ಶಿಕ್ಷೆಯಾಯಿತು. ಕಯ್ಯೂರಿನ ಈ ಘಟನೆಯೇ ಕಾದಂಬರಿಯ ರಚನೆಗೆ ಪ್ರೇರಣೆಯಾಗಿದೆ. ವಿಚಾರಣೆಯ ಈ ಸಂಗತಿಗಳಲ್ಲದೆ ಕಯ್ಯೂರಿನಲ್ಲಿ ರೈತರು ಕೈಗೊಂಡ ಜಮೀನ್ದಾರಿ ಪದ್ಧತಿಯ ವಿರೋಧಿ ಚಟುವಟಿಕೆಗಳು, ನ್ಯಾಯಪರ ಹೋರಾಟಗಳು, ಸುಧಾರಣಾ ಕ್ರಮಗಳು ಎಲ್ಲವೂ ಕಾದಂಬರಿಯಲ್ಲಿ ಚಿತ್ರಿತಗೊಂಡಿವೆ. ಕಾದಂಬರಿಕಾರ ನಿರಂಜನರು ಕಯ್ಯೂರಿನ ಸುತ್ತಮುತ್ತ ವಾಸಿಸಿದವರು. ಬಂಡಾಯದ ಘಟನೆಗಳನ್ನು ಹತ್ತಿರದಿಂದ ಕಂಡವರು. ಹಾಗೆ ಕಂಡ–ಉಂಡ ತಮ್ಮ ಅನುಭವಗಳನ್ನು ಆಧಾರವಾಗಿ ಇರಿಸಿಕೊಂಡು ಅವರು ಈ ಕಾದಂಬರಿಯನ್ನು ರಚಿಸಿದ್ದಾರೆ. ಅವರ ನೈಜ ಅನುಭವಗಳಿಂದ ಕಯ್ಯೂರಿನ ಬಂಡಾಯದ ಕಥೆ ಈ ಕಾದಂಬರಿಯಲ್ಲಿ ಪರಿಣಾಮಕಾರಿಯಾಗಿ ಮೂಡಿಬಂದಿದೆ.

ಈ ಕಾದಂಬರಿಯಲ್ಲಿ ರೈತರು ನಡೆಸುವ ಹೋರಾಟ ಜಮೀನುದಾರರೊಂದಿಗಾದರೂ ಕೂಡ ನಂತರ ಇದು ಬ್ರಿಟೀಷ ಸಾಮ್ರಾಜ್ಯಸಾಹಿಗಳ ವಿರುದ್ಧ ನಡೆಸಿದ ಹೋರಾಟವೂ ಆಗುತ್ತದೆ. ಈ ಕಾದಂಬರಿಯಲ್ಲಿ ರೈತರು ಮತ್ತು ಕೂಲಿಕಾರರು ಕೂಡಿಕೊಂಡು ನಡೆಸುವ ಚಳುವಳಿಯಲ್ಲಿನ ಘೋಷಣೆಗಳು ಗಮನಾರ್ಹವಾಗಿವೆ. "ಭೂಮಿ ಯಾರದು? ಭೂಮಿ ರೈತನದು! ಉಳುವವನೇ ಹೊಲದೊಡೆಯ! ಹಳೆಯ ಸಾಲಮನ್ನಾ ಮಾಡಿ! ಜಮೀನ್‌ದಾರಿ ಪದ್ಧತಿ ಅಳಿಸಿ ಹೋಗಲಿ! ಸಾಮ್ರಾಜ್ಯಶಾಹಿ ನಾಶವಾಗಲಿ!" ಎಂಬಂತ ಘೋಷಣೆಗಳು ವರ್ಗಸಂಘರ್ಷದ ಪ್ರಮುಖ ಮಾದರಿಗಳಾಗಿವೆ. ಬ್ರಿಟೀಷ್ ಸರಕಾರವು ಅಪ್ಪು, ಚಿರಕುಂಡ, ಕುಞಂಬು, ಅಬೂಬಕರ್ ಈ ನಾಲ್ಕು ರೈತನಾಯಕರಿಗೆ ಮರಣದಂಡನೆಯ ಶಿಕ್ಷೆ ವಿಧಿಸಿದಾಗ ತೀವ್ರ ಅಘಾತಕ್ಕೊಳಗಾದ ಕೈಯೂರು ಇಡೀ ದೇಶದ ಗಮನವನ್ನು ಸೆಳೆಯುತ್ತದೆ.

ಭಾರತ ಇನ್ನೂ ಸ್ವತಂತ್ರವಾಗಿರಲಿಲ್ಲ. ದೇಶದ ಭಾಗವಾದ ಕರಿನಾಡು ಕೇರಳ. ಆ ಪ್ರದೇಶದಲ್ಲಿ ಕಯ್ಯೂರು ಒಂದು ಗ್ರಾಮ. ಚಿರಕುಂಡ ಮತ್ತು ಅಪ್ಪುವಿನ ಹದಿನೈದು–ಹದಿನಾರರ ಸಮಾನ ಹರೆಯದ ಹುಡುಗರು. ಇವರಿಬ್ಬರೂ ತಮ್ಮ ಪ್ರಾಥಮಿಕ ಶಿಕ್ಷಣವನ್ನು ಮಾತ್ರ ಮುಗಿಸಿದ್ದರು. ಮುಂದಿನ ಓದಿಗೆ ತಂದೆ–ತಾಯಿಗಳು ನಿರಾಕರಿಸಿದ್ದರಿಂದ ಅಷ್ಟಕ್ಕೇ ಶಿಕ್ಷಣ ನಿಂತಿತ್ತು. ಜಮೀನುದಾರರಿಂದ ರೈತರ ಮೇಲೆ ಆಗುತ್ತಿದ್ದ ದಬ್ಬಾಳಿಕೆ ಕಂಡು ರೋಸಿದ್ದರು. ಸಹಜವಾಗಿಯೇ ಅವರಲ್ಲಿ ಜಮೀನ್ದಾರರನ್ನು ಪ್ರತಿಭಟಿಸುವ ಮನೋಭಾವ ಬೆಳೆದಿತ್ತು. ಅವರಿಬ್ಬರಿಗೂ ಮಾಸ್ತರ ಮೇಲೆ ತುಂಬಾ ಅಭಿಮಾನ. ಅವರು ಹೇಳಿದಂತೆ ಕಯ್ಯೂರಿನ ಪಕ್ಕದ ಹಳ್ಳಿ ನೀಲೇಶ್ವರಕ್ಕೆ ಬರುತ್ತಾರೆ. ಅಲ್ಲಿಯ ತೋಟವೊಂದರಲ್ಲಿ ಮಾಸ್ತರರು ಮತ್ತು ಪಂಡಿತರೆಂಬುವವರನ್ನು ಪರಿಚಯಿಸುತ್ತಾರೆ. ಪಂಡಿತರ ಕುರಿತು 'ಇವರು ಸಮಾಜದ ಕಾಯಿಲೆಗೆ ಔಷಧಿ ಕೊಡುವ ಪಂಡಿತರು' ಎಂದು ಅರ್ಥಪೂರ್ಣವಾಗಿ ಪರಿಚಯಿಸಿದರು.

ಹೋರಾಟ ಹೇಗೆ ಮಾಡಬೇಕೆಂಬುದನ್ನು ಪಂಡಿತರು ತಿಳಿಸಿಕೊಟ್ಟರು. ಮೊದಲು ಗುಪ್ತವಾಗಿ ಪ್ರಚಾರ ಮಾಡುವುದು, ಹೆಚ್ಚೆಚ್ಚು ರೈತರ ಬೆಂಬಲ ಪಡೆಯುವುದು, ನಂತರ ಬಹಿರಂಗವಾಗಿ ರೈತ ಸಂಘದ ಸ್ಥಾಪನೆ ಹಾಗೂ ಜನಜಾಗೃತಿಯನ್ನುಂಟುಮಾಡುವುದು. ರಾಜಕೀಯ ಜ್ಞಾನ ಬೆಳೆಸುವುದಕ್ಕಾಗಿ, ಹಳ್ಳಿಗೊಂದು ದಿನಪತ್ರಿಕೆ ತರಿಸುವುದು. ಓದು–ಬರಹ ಬಲ್ಲವರು ಅದನ್ನು ಓದಿ ಇತರರಿಗೆ ಹೇಳುವುದು, ಹಳ್ಳಿಗಾಗಿ ಒಂದು ವಾಚನಾಲಯದ ಆರಂಭ ಮಾಡುವುದು ಎಂದು ಯೋಜನೆಗಳನ್ನು ಚಿರಕುಂಡ ಮತ್ತು ಅಪ್ಪುವಿನ ತಲೆಯಲ್ಲಿ ಬಿತ್ತಿದರು.

ಬ್ರಿಟೀಷ್ ಸರಕಾರ ಸಾಮ್ರಾಜ್ಯದ ಉಳಿವಿಗಾಗಿ ಹೋರಾಡುತ್ತಿತ್ತು. ಕಯ್ಯೂರಿನಲ್ಲಿ ನಡೆಯುತ್ತಿರುವ ರೈತ ಸಂಘದ ಚಟುವಟಿಕೆಗಳು ಸಾಮ್ರಾಜ್ಯಶಾಹಿ ಮತ್ತು ಜಮೀನ್ದಾರಿ ವಿರೋಧಿ ಧೋರಣೆ ಅದರ ಗಮನಕ್ಕೆ ಬಾರದೆ ಇರಲಿಲ್ಲ. ಹಳ್ಳಿ ಗೂಢಚಾರರನ್ನು ಕಳುಹಿಸಿ ಎಲ್ಲಿ ಹೇಗೆ ಜನರ ಹೋರಾಟ ಮುರಿಯಬೇಕೆಂಬುದನ್ನು ಕಂಡುಕೊಂಡಿತು. ಒಂದು ದಿನ ಬೆಳಗು ರೈತಸಂಘದವರ ಪ್ರಭಾತ ಫೇರಿ ಸಾಗಿತ್ತು. ಜಮೀನ್ದಾರರ ಮನೆಯ ಮುಂದೆ ಹೊರಟಾಗ ಘೋಷಣೆ ಕೇಳಿ ಎದ್ದು, ಮೆರವಣಿಗೆ ಹಿಂಬಾಲಿಸಿ 'ಇಂಕ್ವಿಲಾಬ ಜಿಂದಾಬಾದ್', 'ಕ್ರಾಂತಿಗೆ ಜಯವಾಗಲಿ', 'ಜಮೀನ್ದಾರಿ ಪದ್ಧತಿ ಅಳಿಯಲಿ, ಸಾಮ್ರಾಜ್ಯಶಾಹಿ ನಾಶವಾಗಲಿ' ಎಂಬ ಮಾತುಗಳು ಮುಗಿಲು ಮುಟ್ಟಿದವು. ಇದನ್ನು ತಡೆಯಲು ಸುಬ್ಬಯ್ಯ ಎಂಬ ಪೋಲೀಸ್ ಬಂದನು. ಮೆರವಣಿಗೆಯ ಸಾಲು ನಿಂತಿತು. ಘೋಷಣೆಗಳು ನಿಂತವು. ಕೆಂಪು ಬಾವುಟವೂ ಸ್ತಬ್ಧವಾಯಿತು. 'ಕಣ್ಣ' ಎಂಬುವವ ದಾರಿ ಬಿಡು ಎಂದು ಸುಬ್ಬಯ್ಯನನ್ನು ದೂಡಿ ಮುಂದೆ ಹೋಗಲು ಪ್ರಯತ್ನಿಸಿದ. 'ಸರಕಾರ ಸತ್ತು ಹೋಯ್ತು ಅಂತಾ ತಿಳಿದಿದ್ದೀರಾ' ಎಂದು ಸುಬ್ಬಯ್ಯ ದರ್ಪ ತೋರಿದ. ಆಗ ಅಬೂಬಕರ ಅವನ ರಟ್ಟೆ ಹಿಡಿದು ಸರಿದು ನಿಲ್ಲು ಎಂದನು. ಅವನ

ಕೆನ್ನೆಗೆ ಏಟು ಬಿದ್ದವು. ಇದರಿಂದ ರೊಚ್ಚಿಗೆದ್ದ ರೈತರು ಸುಬ್ಬಯ್ಯನನ್ನು ಚೆನ್ನಾಗಿ ಥಳಿಸಿದರು. ಅದರಿಂದ ಬಿಡಿಸಿಕೊಳ್ಳಲು ಓಡಲಾರಂಭಿಸಿದ. ಹೇಗಾದರೂ ಜೀವ ಉಳಿಸಕೊಳ್ಳಬೇಕೆಂದು ನದಿಯನ್ನು ಧುಮುಕಿದ ಆದರೆ ಈಜು ಬಾರದೆ ಸತ್ತು ಹೋದ. ಇದು ಚಿರಕುಂಡ, ಅಪ್ಪು, ಅಬೂಬಕರ ಮೊದಲಾದವರಿಗೆ ಗಾಬರಿಯನ್ನುಂಟು ಮಾಡಿತು.

ಪೋಲೀಸನ ಮರಣದ ಘಟನೆ ಜಮೀನ್ದಾರ ನಂಬಿಯಾರನನ್ನು ನಡುಗಿಸಿತು. ಊರು ಬಿಟ್ಟು ಹೋಗಬೇಕೆಂದು ಕೊಂಡನು. ರೈತರು ಯಾವ ಕ್ಷಣವಾದರೂ ತನ್ನ ಮನೆಯ ಮೇಲೆ ಏರಿಬರಹುದೆಂದು ಭಾವಿಸಿದ್ದ. ಆದರೆ ಈ ಘಟನೆಯನ್ನೇ ಮುಖ್ಯವಾಗಿರಿಸಿಕೊಂಡು ರೈತರ ಶಕ್ತಿಯನ್ನು ಮುರಿಯಬೇಕು, ತನ್ನ ಕೋಪವನ್ನು ತೀರಿಸಿಕೊಳ್ಳಬೇಕು ಎಂದು ಸರಕಾರಕ್ಕೆ ಸುದ್ದಿಯನ್ನು ಮುಟ್ಟಿಸಿದ. ಸಂಘವು 'ಪೋಲೀಸನ ಮರಣಕ್ಕೆ ಸಂಘ ಕಾರಣವಲ್ಲ. ಅವನೇ ಓಡಿಹೋಗಿ ನದಿಗೆ ಬಿದ್ದ' ಎಂದು ಸುಮ್ಮನಾಯಿತು. ಆದರೆ ಜಮೀನ್ದಾರ ರೈತ ಮುಖಂಡರಾದ ಚಿರಕುಂಡ, ಅಪ್ಪು, ಅಬೂಬಕರ, ಕೋರ, ಕಣ್ಣ ಮೊದಲಾದವರ ವಿರುದ್ಧ ಫಿರ್ಯಾದು ಸಲ್ಲಿಸಿದ. ಪೋಲೀಸ ಪಡೆ ಬಂದು ಸಂಘದ ಕಚೇರಿಯನ್ನು ಮುತ್ತಿತ್ತು. ಕಯ್ಯೂರು ಕಂಪಿಸಿತು. ಚಿರಕುಂಡ, ಕುಞಂಬು ಕೃಷ್ಣನ್ ನಾಯರ್, ಕೋರನ ಬಂಧನವಾಯಿತು. ಇವರನ್ನು ತಾಕೀತು ಮಾಡಿ ಬಿಡುತ್ತಾರೆಂದು ರೈತರು ಭಾವಿಸಿದ್ದರು. ಆದರೆ ಪೋಲೀಸ್ ಸೈನ್ಯವೇ ಹಳ್ಳಿಗೆ ಬಂದು ರೈತರ ಗುಡಿಸಲುಗಳ ಮೇಲೆ ಆಕ್ರಮಣ ಮಾಡಿದರು. ಹೆಂಗಸರನ್ನು 'ಎಲ್ಲಿ ಬಚ್ಚಿಟ್ಟಿದ್ದೀರಿ', 'ಓಡಿಹೋದ ಗಂಡಸರು ಎಷ್ಟು ಜನ ಎಂದು ಮೊದಲಾಗಿ ವಿಚಾರಣೆ ಮಾಡಿದರು. 'ಸಾಮ್ರಾಜ್ಯಶಾಹಿ ನಾಶವಾಗಲಿಂತ ಈಗ ಹೇಳಿ ನೋಡೋಣ' ಎಂದು ಮೂದಲಿಸಿದರು. ಅಪ್ಪು, ಅಬೂಬಕರ ಸೇರಿದಂತೆ ಮೂವತ್ತು ಜನ ರೈತರನ್ನು ಬಂಧಿಸಿದರು.

ನ್ಯಾಯ ವಿಚಾರಣೆಯ ನಂತರ ಶಿಕ್ಷೆಗೆ ಗುರಿಯಾದವರನ್ನು ಗಾಡಿಯಲ್ಲಿ ಹತ್ತಿಸಿಕೊಂಡು ಸೆರೆಮನೆಗೆ ಕರೆದುಕೊಂಡು ಹೋಗಲು ಮುಂದಾದರು. ಆಗ ಊರಿನ ಜನರು ಬಂದು ಅವರನ್ನು ಕಂಡರು. ಪ್ರೀತಿಯಿಂದ ಮಾತನಾಡಿಸಿದರು. ನ್ಯಾಯಕ್ಕೆ ಕೊನೆಗೂ ಅನ್ಯಾಯವೇ ಲಭಿಸಿತು ಎಂದು ಗೋಳಾಡಿದರು. ಅಪ್ಪು, ಚಿರಕುಂಡ, ಕುಂಯಿಬೂ, ಅಬೂಬಕರ್ ಕುಟ್ಟಿ ಕೃಷ್ಣ ಮೊದಲಾದವರು ಮೋಟಾರು ಹತ್ತಿದ್ದರು. ಕಯ್ಯೂರಿನ ಅಭಿಮಾನಿ ಜನರು, ರೈತರು ಅವರೂ ಮೋಟಾರು ಹತ್ತಲು ಬಂದರು. ಪೋಲೀಸರು ಅವರನ್ನು ತಡೆದರು. ಕೂಡಿದ ಜನರು ಇಂಕ್ವಿಲಾಬ್ ಜಿಂದಾಬಾದ್, ದಬ್ಬಾಳಿಕೆಗೆ ಧಿಕ್ಕಾರ, ಸಾಮ್ರಾಜ್ಯಶಾಹಿ ನಾಶವಾಗಲಿ, ಕ್ರಾಂತಿಗೆ ಜಯವಾಗಲಿ ಎಂಬ ಘೋಷಣೆ ಕೂಗಿದರು. ಪೋಲೀಸ್ ವಾಹನದಲ್ಲಿ ಕುಳಿತ ಕ್ರಾಂತಿಕಾರಿಗಳು 'ಕಯ್ಯೂರು ಬಾಂಧವರಿಗೆ ರಕ್ತ ನಮಸ್ಕಾರ' ಎಂದು ಕೊನೆಯ ನಮಸ್ಕಾರ ಹೇಳಿದರು; ಅದಕ್ಕೆ ಪ್ರತಿಯಾಗಿ ಜನರ ಗುಂಪು 'ಸಂಗಾತಿಗಳೇ ನಿಮಗೆ ರಕ್ತ ನಮಸ್ಕಾರ' ಎಂದು ಕೂಗಿ ಹೇಳಿತು.

ಅಪ್ಪು, ಚಿರಕುಂಡ, ಅಬೂಬಕರ್, ಕುಂಯಿಂಬು ಇವರ ಮರಣ ದಂಡನೆಯ ದಿನ ಬಂದಿತು. ಅವರ ತಂದೆ ತಾಯಿ, ಹೆಂಡತಿ ಮಕ್ಕಳು, ಬಂಧುಗಳು ಕೊನೆಯ ಬಾರಿ ಭೇಟಿಯಾಗಿ ಹೋಗಲು ಬಂದರು. ಮಾಸ್ತರರು ಕೊನೆಯದಾಗಿ ಅವರನ್ನು ಕಂಡು ಮಾತನಾಡಿಸಿದರು. ಕಯ್ಯೂರಿನ ಜನರಿಗೆ ನಮ್ಮ ಕೊನೆಯ ರಕ್ತ ನಮಸ್ಕಾರ ಹೇಳಿದರು. ಕ್ರಾಂತಿಕಾರರ ಕೊನೆಯ ದಿನ ರಾತ್ರಿ ಅಂದು ಯಾರಿಗೂ ನಿದ್ದೆ ಹತ್ತಿರಲಿಲ್ಲ. ಚಿರಕುಂಡ, ಅಪ್ಪು, ಕುಂಯಿಂಬು ಅಬೂಬಕರ ಪರಸ್ಪರ ಮಾತಾಡುತ್ತಾ ತಮ್ಮ ಬಾಲ್ಯದ ದಿನಗಳನ್ನು ನೆನಪಿಸಿಕೊಂಡರು. ರೈತ ಸಮ್ಮೇಳದಲ್ಲಿ ಭಾಗವಹಿಸಿದ್ದು, ಊರಿನಲ್ಲಿ ಕ್ರಾಂತಿಕಾರಕ ಚಟುವಟಿಕೆಗಳನ್ನು ಹಮ್ಮಿಕೊಂಡಿದ್ದು ಎಲ್ಲವೂ ಅವರಿಗೆ ನೆನಪಾಗಿ ಹೆಮ್ಮೆ ಉಂಟಾಯಿತು. 'ನಾವು ವೀರರು. ಸಪ್ಪೆ ಮುಖ ಹಾಕಿ ಸಾವನ್ನು ಎದುರಿಸಬಾರದು. ವೀರರಂತೆ ಸಾವನ್ನು ಸ್ವೀಕರಿಸಬೇಕು. ಸುಬ್ಬಯ್ಯ ಪೋಲೀಸ ಗುಲಾಮಗಿರಿ ಸರಕಾರದ ಚಾಕರಿ ಮಾಡುತ್ತ ನಾಯಿಯಂತೆ ಸತ್ತ. ಆದರೆ ನಮ್ಮದು ವೀರಮರಣ. ಊರಿಗಾಗಿ ನಾವು ಸಾಯುತ್ತಿದ್ದೇವೆ. ನಾಡಿನ ಜಾಗೃತಿಗಾಗಿ ಸಾವನ್ನು ಎದುರಿಸಲಿದ್ದೇವೆ.' ಎಂದು ನಗುನಗುತ್ತ ಗಲ್ಲಿಗೆ ಏರಲು ಸಿದ್ಧರಾದರು.

"ಸಾಮ್ರಾಜ್ಯಶಾಹಿ ನಾಶವಾಗೋದನ್ನ ನೋಡಿ ಸಾಯಬೇಕು ಅಂತ ನಮ್ಮ ಆಸೆ ನಡೆಸಿಕೊಡುತ್ತಿರಾ" ಎಂದು ಚಿರಕುಂಡ ತಮ್ಮ ಕೊನೆಯ ಆಸೆ ಕೇಳಿದ ಪೋಲಿಸನಿಗೆ ಹೇಳಿದ. ಕೊನೆಯದಾಗಿ ಮಾಸ್ತರರನ್ನು ಕಾಣಬೇಕೆಂಬ ಬಯಕೆ ವ್ಯಕ್ತಪಡಿಸಿದರು. ಜೇಲಿನ ಅಧಿಕಾರಿ ಅದನ್ನು ವ್ಯವಸ್ಥೆ ಮಾಡಿದ. 'ನಮ್ಮನ್ನು ಮರಿಬೇಡಿ ಮಾಸ್ತರರೇ ಎಂದು ಕೈಮುಗಿದು ಕೇಳಿಕೊಂಡರು. ಮಾಸ್ತರರಿಗೆ ಸಹಿಸದ ಸಂಕಟ. ಅವರಿಗೆ ಮಾತು ಹೊರಡಲಿಲ್ಲ. ಮಾಸ್ತರರು ಕೊನೆಯ ನಮಸ್ಕಾರ ಮಾಡಿದರು. ನಾಲ್ವರೂ ಕೊನೆಯ ನಮಸ್ಕಾರ ಮಾಡಿದರು.

ರಾತ್ರಿ ಕಳೆದು ಮುಂಜಾವು ಗಲ್ಲಿಗೆ ಏರಿಸುವ ಕ್ಷಣ. ಹೊರಗೆ ಜನರು ನೆರದಿದ್ದರು. ಅವರು ನಾಲ್ವರ ಶವಗಳ ಬೇಡಿಕೆ ಇರಿಸಿದ್ದರು. ಅಧಿಕಾರಿಗಳು ಶವಗಳನ್ನು ಕೊಡದೆ ದಫನ ಮಾಡಲು ನಿರ್ಧರಿಸಿದರು. ಶವಗಳನ್ನು ಕೊಟ್ಟರೆ ಮೆರವಣಿಗೆ ಮಾಡುವ ಮೂಲಕ ಜನರನ್ನು ರೊಚ್ಚಿಗೆ ಎಬ್ಬಿಸಬಹುದೆಂದು ಸರಕಾರ ಶವಗಳನ್ನು ಕೊಡದಿರುವಂತೆ ಸೂಚಿಸಿತ್ತು. ನಾಲ್ವರನ್ನು ಗಲ್ಲಿಗೆ ಏರಿಸಲಾಯಿತು. ಸುದ್ದಿ ಕಯ್ಯೂನಿಂದ ಸುತ್ತಮುತ್ತಿನ ಊರುಗಳಿಂದ ಹಬ್ಬಿತು. ವೀರಪುರುಷರೆಂದು ಜನರು ಮಾತನಾಡಿಕೊಂಡರು. ಅವರು ಸತ್ತರೂ ಅವರು ಜನರಲ್ಲಿ ಬಿತ್ತಿಹೋಗಿದ್ದ ಕ್ರಾಂತಿಯ ಬೀಜ ಸಾಯಲಿಲ್ಲ. ಬದುಕನ್ನು ಪ್ರೀತಿಸಿದ ಆ ಬಾಂಧವರು ಒಳ್ಳೆಯ ಬದುಕಿಗಾಗಿ ದುಡಿದರು. ಅದಕ್ಕಾಗಿ ಅವರು ಮಡಿದರು. ನಾಡಿನ ಇತಿಹಾಸದಲ್ಲಿ ಚಿರಸ್ಮರಣೀಯರಾದರು. ಹಾಗೆಯೇ ಅಳುತ್ತಿದ್ದ ಮಗುವಿಗೆ ಅಪ್ಪುವಿನ ಹೆಂಡತಿ ಆಕಾಶದಲ್ಲಿ

ಮಿನುಗುತ್ತಿದ್ದ ನಕ್ಷತ್ರವೊಂದನ್ನು ತೋರಿಸುತ್ತ "ಮಗು ಅಳಬಾರದು. ಅಪ್ಪ ಅಲ್ಲಿದ್ದಾರೆ ನೋಡು, ಅತ್ತರೆ ಅವರಿಗೆ ನೋವಾಗುವುದು" ಎಂದು ಹೇಳುತ್ತಾಳೆ. ಈ ಮಾತುಗಳು ಓದುಗರಲ್ಲಿ ತೀವ್ರ ಪರಿಣಾಮವನ್ನುಂಟು ಮಾಡುತ್ತವೆ. ಮುಂದಿನ ಅನ್ಯಾಯದ ಹೋರಾಟಕ್ಕೆ ನಾಂದಿಯಾಗುತ್ತದೆ.

ಹೀಗೆ ಕಾದಂಬರಿ ಬೆಂಬಿಡದೇ ಓದಿಸಿಕೊಂಡು ಹೋಗುತ್ತದೆ. ಎಲ್ಲಿಯೂ ಓದುಗನಿಗೆ ತಡೆಯನ್ನು, ಬೇಸರವನ್ನು ನೀಡುವುದಿಲ್ಲ. ಇಲ್ಲಿ ನಿರಂಜನರ ಬರವಣಿಗೆಯ ಬೆಳಕು ಬಿತ್ತಿದ್ದಾರೆ. ಒಂದು ರೈತಕ್ರಾಂತಿ, ದೇಶಪ್ರೇಮ, ಹೋರಾಟದ ವಸ್ತುವನ್ನು ಇಟ್ಟುಕೊಂಡು ಸಹೃದಯನ ಮನವನ್ನು ಗೆಲ್ಲುವ ಸಾಮರ್ಥ್ಯ ಅವರನ್ನು ಗೆಲ್ಲಿಸುತ್ತದೆ. ಹೋರಾಟವು ಹುಟ್ಟುವ ಬಗೆ, ಅದನ್ನು ಎದುರಿಸಿ ನಿಲ್ಲುವ ಅನಕ್ಷರಸ್ಥ ರೈತರು, ಅವರನ್ನು ಒಂದುಗೂಡಿಸಿ ಸಂಘ ಕಟ್ಟುವ ಛಲಗಳು ಕಾದಂಬರಿಯಲ್ಲಿ ತುಂಬಾ ಮುಖ್ಯವಾಗಿ ಕಾಣಿಸುತ್ತವೆ. ಬೆನ್ನೆಲುಬಾಗಿ, ಮಾರ್ಗದರ್ಶಕರಾಗಿ ಚಿತ್ರಣಗೊಂಡ ಮಾಸ್ತರರು ಎಲ್ಲರಿಂದ ಪೂಜಿತರೆನಿಸುತ್ತಾರೆ. ಕೊನೆಯಲ್ಲಿ ಜೈಲಿನ ಸಂದರ್ಭಗಳು ನೇಣುಗಂಬ ಏರುವ ಕುಟುಂಬದ ವೇದನೆ, ರೋದನೆಗಳು ಕರಳು ಹಿಂಡುತ್ತವೆ. ಆದರೂ ಅವರಲ್ಲಿ ದೇಶಸೇವೆಗಾಗಿ ತಮ್ಮ ಮಗನು ಪ್ರಾಣಾರ್ಪಣೆ ಮಾಡುವುದು ಹೆಮ್ಮೆ ಎನಿಸುತ್ತದೆ ಎಂದು ಬೀಗುತ್ತಾರೆ. ಹೋರಾಟಕ್ಕೆ ಧುಮುಕಿದ ಚಿರಕುಂಡ ಮತ್ತು ಅಪ್ಪು ಅವರ ಕೌಟುಂಬಿಕ ಚಿತ್ರಣವು, ಕಯ್ಯೂರಿನಲ್ಲಿ ವಯಸ್ಕರ ಶಾಲೆ ಆರಂಭವಾಗಿ ಮೂಡಿಬಂದ ವಿಚಾರಧಾರೆಗಳು ಹೊಸವೆನಿಸುತ್ತವೆ. ಇಂದಿಗೂ ಅವುಗಳು ಪ್ರಸ್ತುತವೆನಿಸುತ್ತವೆ.

ಪೋಲೀಸ್ ಅಧಿಕಾರಿ ಸುಬ್ಬಯ್ಯ ಹರತಾಳವನ್ನು ನಿಲ್ಲಿಸಲು ಹೋಗಿ ತನಗೆ ತಾನೆ ನದಿಗೆ ಬಿದ್ದು ಪ್ರಾಣ ಕಳೆದುಕೊಳ್ಳುತ್ತಾನೆ. ಇಲ್ಲಿ ರೈತರಿಂದ ನೇರವಾಗಿ ಕೊಲೆಯಾಗದಿದ್ದರೂ ರೈತರನ್ನು ಗಲ್ಲಿಗೇರಿಸಲು ಸೂಚಿಸುವ ನ್ಯಾಯಾಲಯದ ಬಗೆಗೆ ಅಗೌರವವುಂಟಾಗುತ್ತದೆ. "ಪೋಲೀಸನ ಮರಣಕ್ಕೆ ಕಯ್ಯೂರಿನ ರೈತರು ಯಾವ ರೀತಿಯಿಂದಲೂ ಹೊಣೆಗಾರರಲ್ಲ. ನದಿಗೆ ಹಾರದೆ ಇರುತ್ತಿದ್ದರೆ ಅವನಿಗೆ ಏನೂ ಆಗುತ್ತಿರಲಿಲ್ಲ. ನದಿಯಲ್ಲಿ ಅವನು ಆಕಸ್ಮಿಕ ಮರಣಕ್ಕೆ ಒಳಗಾದ." ಇದನ್ನು ನ್ಯಾಯಾಲಯ ಎತ್ತಿ ಹಿಡಿಯದೇ ಮರಣದಂಡನೆ ವಿಧಿಸಿದ್ದು ದೊಡ್ಡ ದುರಂತವೇ ಸರಿ. ಹೀಗೆ ಆಕಸ್ಮಿಕವೆಂಬಂತೆ ಜರುಗಿದ ಪೋಲೀಸನ ಸಾವಿನ ಘಟನೆ ರೈತರ ಬದುಕಿನ ದಿಕ್ಕನ್ನು ಬದಲಿಸಿತು. ಕ್ರಾಂತಿಕಾರಿಗಳು ಬ್ರಿಟೀಷ್ ಸರಕಾರದ ಅನ್ಯಾಯಕ್ಕೆ ಬಲಿಯಾಗಬೇಕಾಯಿತು.

ಸ್ವಾತಂತ್ರ್ಯ ಹೋರಾಟ, ರೈತ ಹೋರಾಟ ಎರಡನ್ನೂ ಏಕಕಾಲದಲ್ಲಿ ಪ್ರತಿನಿಧಿಸುವ ಕೃತಿ 'ಚಿರಸ್ಮರಣೆ'. ಸ್ವಾತಂತ್ರ್ಯ ಹೋರಾಟ ದೇಶದ ಬಿಡುಗಡೆಯನ್ನು ಬಯಸಿದರೆ, ರೈತಹೋರಾಟ ರೈತರ ಬಿಡುಗಡೆಯನ್ನು ಬಯಸುತ್ತದೆ. ಇಲ್ಲಿಯ ಹೋರಾಟಗಾರರಾದ ರೈತರಿಗೆ

ವಸಾಹತುಶಾಹಿ ಮತ್ತು ಜಮೀನ್ದಾರರು ನೇರ ಶತ್ರುಗಳು. ಜಮೀನ್ದಾರ ವ್ಯವಸ್ಥೆ ಅಥವಾ ಊಳಿಗಮಾನ್ಯ ವ್ಯವಸ್ಥೆಯ ಬೆಂಬಲದಿಂದ ಸಾಮ್ರಾಜ್ಯಶಾಹಿ ಅಥವಾ ವಸಾಹತುಶಾಹಿ ನಿಂತಿದೆ. ಸಾಮ್ರಾಜ್ಯಶಾಹಿ ಬೆಂಬಲದಿಂದ ಜಮೀನ್ದಾರ ವ್ಯವಸ್ಥೆ ನಿಂತಿದೆ. ಒಂದನ್ನು ಮತ್ತೊಂದು ಪೋಷಿಸುವ ಈ ಎರಡೂ ಶೋಷಕ ಶಕ್ತಿಗಳನ್ನು ರೈತರು ಏಕಕಾಲಕ್ಕೆ ಎದುರಿಸಬೇಕಾಗಿ ಬರುತ್ತದೆ. ಇಲ್ಲಿ ಲೇಖಕರು ತಮ್ಮ ವಿಚಾರಗಳಿಗೆ ಚಾರಿತ್ರಿಕ ನೆಲೆಯನ್ನು ಕಲ್ಪಿಸಿದ್ದಾರೆ. ಅಲ್ಲದೆ ಇತಿಹಾಸದ ವಸ್ತುವೊಂದನ್ನು ಸಮಕಾಲೀನಗೊಳಿಸುವ ನಿರಂಜನರ ಜಾಣ್ಮೆ ಮತ್ತು ಪ್ರಜ್ಞೆಯನ್ನು ಮೆಚ್ಚಬೇಕು (ಬಸವರಾಜ ಸಬರದ, ೧೯೯೯, ಪುಟ-೬೨-೬೩.) ಎಂದು ಕಾದಂಬರಿ ಕುರಿತ ವಿಮರ್ಶೆಗಳು ಮೂಡುತ್ತವೆ.

'ಚಿರಸ್ಮರಣೆ' ಕೇವಲ ಚರಿತ್ರೆಯ ವ್ಯಾಖ್ಯಾನವಾಗದೆ; ನಿರಂತರ ಹೋರಾಟವನ್ನು ಪ್ರಕಟಿಸುವ ವರ್ತಮಾನವಾಗುತ್ತದೆ. ಕಯ್ಯೂರಿನಲ್ಲಿ ನಡೆದ ರೈತ ಸಂಘಟನೆ ಚಾರಿತ್ರಿಕವಾಗಿರುವುದರೊಂದಿಗೆ ಆಯಾ ಕಾಲದ ಸಮಕಾಲೀನ ಸಂದರ್ಭಗಳಿಗೆ ಮಾದರಿಯಾಗಿದೆ. ಶೋಷಣೆಗೆ ಒಳಗಾದ ಇಲ್ಲಿಯ ರೈತರು ತಮ್ಮ ಹಕ್ಕುಗಳಿಗಾಗಿ ಸಂಘಟಿತ ಹೋರಾಟವನ್ನು ಕಟ್ಟಿ ನಿಲ್ಲಿಸುತ್ತಾರೆ. ಸಾಮ್ರಾಜ್ಯಶಾಹಿ ಶಕ್ತಿಗಳಿಗೆ ಈ ಹೋರಾಟವನ್ನು ಹತ್ತಿಕ್ಕಲಿಕ್ಕಾಗುವುದಿಲ್ಲ. ಹೋರಾಟಗಾರರನ್ನು ಸೋಲಿಸಲಿಕ್ಕಾಗದ ಸಾಮ್ರಾಜ್ಯಶಾಹಿಯ ಕ್ರೌರ್ಯ ತನ್ನ ಅಮಾನುಷತೆಗಳ ಮೂಲಕ ರೈತ ಹೋರಾಟಗಾರರಿಗೆ ಗಲ್ಲುಶಿಕ್ಷೆ ಕೊಡುತ್ತದೆ. ತಮ್ಮ ಹೋರಾಟ ಈ ನೆಲದಲ್ಲಿ ಚಿಗಿತು ಬೆಳೆಯುತ್ತದೆಂಬ ಭರವಸೆಯಿಂದ ಆ ವೀರರು ಸಾವಿಗೆ ಅಳುಕದೆ ಸಂತೋಷದಿಂದ ಸಾವನ್ನು ಸ್ವೀಕರಿಸುತ್ತಾರೆ. ಇಲ್ಲಿಯೇ ಚರಿತ್ರೆ, ಸಮಕಾಲೀನವಾಗಬಯಸುತ್ತದೆ. ಚರಿತ್ರೆಯನ್ನು ನಿರ್ಮಿಸಿದ ಕಯ್ಯೂರು ಹೋರಾಟಗಾರರು ಎಲ್ಲ ಕಾಲದ ಹೋರಾಟಗಳಿಗೂ ಮಾದರಿಯಾಗಿ ಬಿಡುತ್ತಾರೆ (ಬಸವರಾಜ ಸಬರದ, ೧೯೯೯, ಪುಟ-೬೪.) ಎಂದು ಬಸವರಾಜ ಸಬರದ ಅವರು ವಿಮರ್ಶಿಸುತ್ತಾರೆ.

ರಹಸ್ಯವಾಗಿ ನಡೆಯುವ ಚಟುವಟಿಕೆಗಳನ್ನು ಮೊದಲುಮಾಡಿ ಬಹಿರಂಗ ಬಂಡೇಳುವವರೆಗಿನ ಹತ್ತು ಹಲವು ಘಟನೆ, ಸಂಗತಿ ಸನ್ನಿವೇಶಗಳನ್ನು ಕಾದಂಬರಿಕಾರರು ಕಾದಂಬರಿಯಲ್ಲಿ ಚಿತ್ರಿಸಲು ಪ್ರಯತ್ನಿಸಿದ್ದಾರೆ. ಕೆಲವೇ ಕೆಲವು ಹೋರಾಟಗಾರರ ಸಾಂಸಾರಿಕ ಬದುಕಿನ ಚಿತ್ರಣದ ಸನ್ನಿವೇಶ ಬಿಟ್ಟರೆ ಇಡೀ ಕಾದಂಬರಿಯುದ್ದಕ್ಕೂ ರೈತ ಬಂಡಾಯದ ಚಿತ್ರಣವೇ ಕಂಡುಬರುತ್ತದೆ. ಅಂತೆಯೇ ಇದೊಂದು ಕಯ್ಯೂರಿನ ರೈತ ಬಂಡಾಯದ ಕಥೆಯನ್ನು ಕಟ್ಟಿಕೊಡುವ ಒಂದು ಯಶಸ್ವಿ ಕಾದಂಬರಿ ಎನ್ನಬಹುದು. ಕಾದಂಬರಿಯಲ್ಲಿ ಬರುವ ಕಣ್ಣ, ಅಬೂಬಕರ, ನಂಬಿಯಾರ, ಸುಬ್ಬಯ್ಯ ಪೋಲೀಸ, ಪಂಡಿತ, ರಾಜಾರಾವ್ ವಕೀಲ, ಕೋರ, ರಾಮುಣ್ಣಿ ಮೊದಲಾದ ಪಾತ್ರಗಳ ಚಿತ್ರಣವು ತುಂಬಾ ಮಹತ್ವವನ್ನು ಕಲ್ಪಿಸಿದೆ.

"ಇದ್ದವರು ಹಾಗೂ ಇಲ್ಲದವರ ನಡುವೆ ನಡೆಯುವ ಕಯ್ಯೂರಿನ ಸಂಘರ್ಷ ನಾಲ್ವರು ತರುಣರ ಗಲ್ಲುಶಿಕ್ಷೆಯ ಮೂಲಕ ಕೊನೆಗೊಂಡರು ಅದು ಉಂಟುಮಾಡುವ ತಲ್ಲಣ ಮಾತ್ರ ತೀವ್ರವಾದುದಾಗಿದೆ." (ಬಸವರಾಜ ಸಬರದ, ೧೯೯೯, ಪುಟ-೬೦.) ಕಾದಂಬರಿಯಲ್ಲಿ ೨೭ ಪಾತ್ರಗಳು ಬರುತ್ತವೆ. ಕೊನೆಯವರೆಗೂ ಮಾಸ್ತರ, ಮಠದ ಅಪ್ಪು, ಕೋಯಿತಟ್ಟಿನ ಚಿರಕುಂಡ, ಪೊಡವರ ಕುಂಯಿಂಬು ಮತ್ತು ಅಬೂಬಕರ್ ಚಿರಸ್ಮರಣೀಯರಾಗಿ ಉಳಿಯುತ್ತಾರೆ.

ಚಿರಸ್ಮರಣೆಗೆ ಕಯ್ಯೂರು ಕೇಂದ್ರಸ್ಥಳ. ಕಾದಂಬರಿಯಲ್ಲಿ ಅಪ್ಪು, ಚಿರಕುಂಡ ಹಾಗೂ ಅಬೂಬಕರ್ ಎಷ್ಟು ಚಿರಸ್ಮರಣೀಯರೋ ಅಷ್ಟೇ ಮಾಸ್ತರ್ ಕೂಡ ಮುಖ್ಯರೆಂಬುದಿಲ್ಲಿ ಗಮನಾರ್ಹ ಸಂಗತಿ. ಆ ಮುಖಾಂತರ ಆತ್ಮಾರ್ಪಣೆಗಿಂತ ಮುಂಚೆ ಮಾಸ್ತರ್ ನೋಡಲು ಬಯಸಿದ್ದು ಸಾಮಾನ್ಯ ಸಂಗಿತಿಯೇನಲ್ಲ. ಹೋರಾಟಕ್ಕೆ ಆ ಮೂವರನ್ನು ಸಜ್ಜುಗೊಳಿಸಿದ ಮಾಸ್ತರ್ ಜಮೀನ್ದಾರಿ ವಿರುದ್ಧ ಸಿಡಿದೇಳುವಂತೆ ಮಡಿದ್ದೂ ಕೂಡ ಚಿರಸ್ಮರಣೀಯವೆಂದರೆ ತಪ್ಪಾಗಲಾರದು.

ಕಾದಂಬರಿಯಲ್ಲಿ ಕಾಣುವ ಸಣ್ಣ ಪುಟ್ಟ ಸಂಘರ್ಷಗಳು ಕೃತಿಯನ್ನು ಸಶಕ್ತಗೊಳಿಸಿವೆ. ನಿರಂಜನರ ಕಾದಂಬರಿಯಲ್ಲಿ ಹೋರಾಟದ ಸಾತ್ವಿಕ ಸಂಗತಿಗಳನ್ನು ಹಾಗೂ ನೈಜ ನೆಲೆಯನ್ನೂ ಹೇಳುವುದರೊಂದಿಗೆ ಜಮೀನ್ದಾರರ ದಬ್ಬಾಳಿಕೆಗೆ ರೈತರು-ಸಾಮಾನ್ಯರು-ಬಡವರು ತತ್ತರಿಸಿ ಹೋದ ಪರಿಸ್ಥಿತಿಯನ್ನು ಚೆನ್ನಾಗಿ ಅಭಿವ್ಯಕ್ತಿಸಿದ್ದಾರೆ.

ಹೋರಾಟದ ಮಧ್ಯದಲ್ಲಿಯೂ ಅಲ್ಲಲ್ಲಿ ಕೆಲವು ಮಿನುಗು ಮಿಂಚುಗಳನ್ನು ತೋರಿಸಿದ್ದಾರೆ.ಸಾಹಿತ್ಯ ಕೇವಲ ಗಣಿತಶಾಸ್ತ್ರದ ಹಾಗೆ ಲೆಕ್ಕಾಚಾರದೊಂದಿಗೆ ಮುನ್ನಡೆಯುವುದಿಲ್ಲ; ನಡೆಯಲಾರದು. ಹಾಗಾಗಿ ನಿರಂಜನರು ಕಾದಂಬರಿಯ ಅಲ್ಲಲ್ಲಿ ಆಪ್ಯಾಯಮಾನತೆಯಂಥಹ ದೃಶ್ಯಗಳನ್ನು ಕಾಣಿಸಿದ್ದಾರೆ. ಚಿರಕುಂಡನ ಮನೆ, ರಾತ್ರಿ ತಂದೆ ತಾಯಿಗಳು ಮಲಗಿರುವ ಸಮಯದಲ್ಲಿ ಚಂದ್ರ ಅವನ ಮುರುಕು ಗುಡಿಸಿಲಿನ ಮೇಲೆ ಹಾಯ್ದು ಹೋಗುವಾಗ ಇಣಿಕಿ ಹಾಕಿ ಊಟವಾಯಿತೇ? ಎಂದು ಕೇಳುವ ಪ್ರಶ್ನೆಗೆ ಹಸಿದ ಹೊಟ್ಟೆಗಳಿಂದ ಬರುವ ಉತ್ತರ ಶೂನ್ಯವಲ್ಲದೇ ಮತ್ತೇನಾಗಲು ಸಾಧ್ಯ?.

ಅಪ್ಪುವಿನ ದಾಂಪತ್ಯ; ಹೆಚಿಡತಿ-ಮಕ್ಕಳು, ತಂದೆ-ತಾಯಿ, ಅವರ ಮಧ್ಯದ ಬಾಂಧವ್ಯದೊಳಗೆ ನುಸುಳಿ ಬಂದ ಹೋರಾಟದ ಹಾದಿ ಕಳ್ಳುಬಳ್ಳಿಗಿಂತ ಹೆಚ್ಚೆಂಬುದನ್ನು ತೋರಿಸುವಲ್ಲಿ ನಿರಂಜನರು ದಿಟ್ಟ ಹೆಜ್ಜೆ ಇಟ್ಟಿರುವುದನ್ನು ಕಾಣುತ್ತೇವೆ. ಹೊಳೆಯಲ್ಲಿ ತಾನಾಗಿಯೇ ಬಿದ್ದ ಪೊಲೀಸ್ ಮುಳುಗಿ ಸಾಯುವ ದೃಶ್ಯ ಕಣ್ಣಿಗೆ: ಕಟ್ಟಿದಂತಿದೆ. ಅದು

ಕುವೆಂಪುರವರ ಮಲೆಗಳಲ್ಲಿ ಮದುಮಗಳ ಕಾದಂಬರಿಯ ಹುಲಿಯನನ್ನು ನೆನಪಿಸಿಕೊಡುವಷ್ಟು ಸಶಕ್ತವಾಗಿದೆ.

### ಕಲ್ಯಾಣಸ್ವಾಮಿ (೧೯೫೬)

ಕಲ್ಯಾಣಸ್ವಾಮಿ ಮತ್ತು ಸ್ವಾಮಿ ಅಪರಾಂಪರ ಎರಡೂ ಕಾದಂಬರಿಗಳು ಒಂದೇ ನೆಲೆಯಲ್ಲಿ ಮೂಡಿಬಂದವಾಗಿವೆ. ವಿಮೋಚನೆ, ಚಿರಸ್ಮರಣೆ ಮತ್ತು ಮೃತ್ಯುಂಜಯ ಕಾದಂಬರಿಗಳಲ್ಲಿ ಗುಲಾಮಗಿರಿ ಮತ್ತು ಬಂಡವಾಳಶಾಹಿಗಳ ವಿರುದ್ಧ ನಡೆದ ಹೋರಾಟವು ಎದ್ದು ಕಂಡರೆ. ಕಲ್ಯಾಣಸ್ವಾಮಿ ಮತ್ತು ಸ್ವಾಮಿ ಅಪರಾಂಪರ ಕಾದಂಬರಿಯಲ್ಲಿ ಬ್ರಿಟೀಷರ ಸಾಮ್ರಾಜ್ಯಶಾಹಿಯ ವಿರುದ್ಧ ಬಂಡೇಳುವ ವಿಸ್ತಾರವನ್ನು ಕಾಣುತ್ತೇವೆ. ಹೀಗಾಗಿ ಇಲ್ಲಿ ವರ್ಗವೈಷಮ್ಯಕ್ಕಿಂತ ರಾಜನಿಷ್ಠೆಯ ಪ್ರಧಾನತೆಯನ್ನು ನೋಡಬಹುದು. ಏಕಂದರೆ ಇವೆರಡೂ ಕಾದಂಬರಿಗಳಲ್ಲಿ ಒಂದೇ ಕಥಾವಸ್ತುವನ್ನು ಒಳಗೊಂಡಿವೆ. ಎರಡರಲ್ಲೂ ಚಾರಿತ್ರಿಕ ಅಂಶಗಳು ಇದ್ದು ಚರಿತ್ರೆಯನ್ನು ಸರಳೀಕರಣವಾಗಿ ಚಿತ್ರಿಸಲಾಗಿದೆ. ವಿಮರ್ಶಕರು ಇವುಗಳ ಕುರಿತು "ವರ್ಗ ಸಂಘರ್ಷ ಹಾಗೂ ಸ್ವಾತಂತ್ರ್ಯ ಹೋರಾಟಗಳ ಪ್ರಸ್ತಾಪದಿಂದ ಇವೆರಡೂ ಕಾದಂಬರಿಗಳು ಸಮಕಾಲೀನತೆಯನ್ನು ಒಳಗೊಳ್ಳುವಲ್ಲಿ ಯಶಸ್ವಿಯಾಗಿವೆ. ಮಹಾನ್ ಕಾದಂಬರಿಗಳೆಲ್ಲ ಚರಿತ್ರೆಯ ಲೇಖನಗಳಂತಿರುತ್ತವೆ; ಅಲ್ಲಿ ಮುಖಾಮುಖಿಯಾಗುವ ಸಂಘರ್ಷ ಬಹಳ ಕಡಿಮೆ. ಆದರೆ ನಿರಂಜನರ 'ಕಲ್ಯಾಣಸ್ವಾಮಿ' ಮತ್ತು 'ಸ್ವಾಮಿ ಅಪರಾಂಪರ' ಕಾದಂಬರಿಗಳಲ್ಲಿ ನೇರವಾದ ಮುಖಾಮುಖಿಯಿದೆ. ಅಂತೆಯೇ ನಿರಂಜನರು ಈ ಚಾರಿತ್ರಿಕ ಕಾದಂಬರಿಗಳ ರಚನೆಯಲ್ಲಿ ವಿಶಿಷ್ಟರಾಗಿ ಕಾಣುತ್ತಾರೆ" (ನಿರಂಜನ, ೨೦೦೫, ಪುಟ-೬೮.)

'ಕಲ್ಯಾಣಸ್ವಾಮಿ' ಕಾದಂಬರಿಯಲ್ಲಿ ಕೊಡಗಿನ ವೀರರ ಪರಾಕ್ರಮವನ್ನು ಚಾರಿತ್ರಿಕವಾಗಿ ದಾಖಲಿಸಿದ್ದು ಕಾಣಿಸುತ್ತದೆ. ಇತಿಹಾಸದ ಕಲ್ಯಾಣಸ್ವಾಮಿಯೊಂದಿಗೆ ಇತರ ಪಾತ್ರಗಳನ್ನು ಸೃಷ್ಟಿಸಿರುವ ನಿರಂಜನರು ಅವರಲ್ಲಿನ ವೀರತನವನ್ನು ಹೋರಾಟದ ರೂಪದಲ್ಲಿ ಕಾದಂಬರಿಯಾಗಿಸಿದ್ದಾರೆ. ಇಲ್ಲಿ ಬರುವ ಪುಟ್ಟಬಸವ ವೀರಪಂಪರೆಯ ಸಾಕ್ಷಿಯಾಗಿ ನಿಲ್ಲುತ್ತಾನೆ. ತನ್ನ ಜನ ಸಮುದಾಯವನ್ನು ಹುರುದುಂಬಿಸಿ ಹೋರಾಟವನ್ನು ಜನಸಾಮಾನ್ಯನಲ್ಲಿ ಮೂಡಿಸುತ್ತಾನೆ. ಕೇವಲ ರಾಜ-ರಾಣಿ-ಸೇನಾಪತಿಗಳಷ್ಟೇ ಸಮರ್ಥವಾಗಿ ಸಾಮಾನ್ಯ ಜನರೂ ಬ್ರಿಟಿಷ್‌ರ ವಿರುದ್ಧ ಹೋರಾಡಿದ ಪರಿಣಾಮಕಾರಿ ಚಿತ್ರಣವನ್ನು ನಿರಂಜನರು ಕಾದಂಬರಿಯಲ್ಲಿ ಎತ್ತಿ ಹಿಡಿಯುತ್ತಾರೆ.

ಕಾದಂಬರಿಯ ಶೀರ್ಷಿಕೆ 'ಕಲ್ಯಾಣಸ್ವಾಮಿ' ಎಂದು ನಿರಂಜನರು ಕರೆದಿರುವದಕ್ಕೆ ಒಂದು ಐತಿಹಾಸಿಕ ಘಟನೆಯನ್ನು ನೀಡುತ್ತಾರೆ. ಚರಿತ್ರೆಯ ನಾಯಕನಾಗಿ ಚಿತ್ರಿತನಾದ 'ಪುಟ್ಟಬಸವ'ನೇ

ಕಲ್ಯಾಣ ಸ್ವಾಮಿಯಾಗಿದ್ದಾನೆ. "...ಚಿಕ್ಕೋನಿದ್ದಾಗ ನಮ್ಮ ಸ್ವಾಮಿಯೋರು ಇಲ್ಲಿಗೆ ದಯಮಾಡಿಸಿದ್ರು. ನನ್ನನ್ನು ನೋಡಿ ಅವರು. 'ಕಲ್ಯಾಣಪ್ಪ ಇಲ್ಲಿ ಬಾ ಮಗೂ' ಅಂದ್ರು. ನನ್ನ ಹೆಸರು ಪುಟ್ಟಬಸ್ವಾಂತ ಎಂದೆ. ಇರಲಿ ಬಿಡಪ್ಪ, ಆ ಕಲ್ಯಾಣಸ್ವಾಮಿ ಕೃಪೆ ಇದ್ದಿದ್ರಿಂದ್ಲೇ ನೀನು ಹೀಗೆ ಬೆಳೀತಾ ಇದೀಯೆ ಎಂದರು. ಆಮೇಲೆ ನಮ್ಮಜ್ಜಿ ಇರೋವರೆಗೂ ಒಮ್ಮೊಮ್ಮೆ ನನ್ನನ್ನು ಕಲ್ಯಾಣಪ್ಪ ಅಂತ ಆಕೆ ಕರೆಯೋದಿತ್ತು" (ನಿರಂಜನ, ೨೦೦೫, ಪುಟ-೧೦೫.) ಎಂದು ಪುಟ್ಟಬಸವನು 'ಕಲ್ಯಾಣಸ್ವಾಮಿ'ಯಾದುದನ್ನು ವಿವರಿಸುತ್ತಾನೆ. 'ಕಲ್ಯಾಣಸ್ವಾಮಿ' ಎನ್ನುವುದು ಅವನ ಮನೆದೇವರು. ಅದಕ್ಕೆ ಐತಿಹಾಸಿಕ ಮಹತ್ವನವನ್ನು, ಚರಿತ್ರೆಯನ್ನು ಕಾದಂಬರಿಯಲ್ಲಿ ಕಾಣಬಹದು. ಹೀಗಾಗಿಯೇ ನಿರಂಜನರು ಕೊಡಗಿನ ದಂಗೆಯಲ್ಲಿ ದೇವರಂತೆ 'ಕಲ್ಯಾಣಸ್ವಾಮಿಯೇ' ಧರೆಗೆ ಇಳಿದು ಬಂದು ಬ್ರಿಟಿಷರ ವಿರುದ್ದ ಹೋರಾಟಕ್ಕೆ ನಿಂತನು ಎಂಬಂತೆ ಮೂಡಿಬಂದಿದೆ.

"ಈ ಪವಿತ್ರ ಯುದ್ಧದಲ್ಲಿ ನಾವು ಭಾಗವಹಿಸಿದೆವೊಂತ ನಮ್ಮ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ಅವರ ಮುಂದಿನ ಸಂತಾನ ಯಾವಾಗಲೂ ಹೆಮ್ಮೆ ಪಡಬೇಕು" (ನಿರಂಜನ, ೨೦೦೫, ಪುಟ-೧೦೫.) ಎಂಬಂಥ ಮಾತುಗಳು ಮತ್ತು ".....ಮಳೆಗಾಲದ ಗದ್ದೆ ಕೆಲಸಕ್ಕೆ ನಾವು ವಾಪಸ್ಸಾಗ್ಬೇಕು, ಏನು ಹೇಳ್ತಿರಿ? ಗುಡುಗಿನ ಹಾಗೆ ಸೇನೆಯ ನಡಿಗೆ, ಮಿಂಚಿನ ಹಾಗೆ ವೇಗ. ಇಂಗ್ಲೀಷ್ರ ಪಾಲಿಗೆ ನಾವೇ ಕುಂಭದ್ರೋಣ ಮಳೆ. ಆದರೆ ಬೇಸಗೆ ಮುಗಿಯೋದಕ್ಮುಂಚೆ ನಮ್ಮ ಕೆಲಸ ಮುಗಿಸ್ಬೇಕು ನಾವು. ಸಾಧ್ಯವೋ? ಹೇಳಿ, ಸಾಧ್ಯವೋ?" (ನಿರಂಜನ, ೨೦೦೫, ಪುಟ-೧೧೨.) ಎಂಬಂಥ ಮಾತುಗಳು ಕಲ್ಯಾಣಸ್ವಾಮಿಯ ಸೈನ್ಯದಲ್ಲಿನ ಹೋರಾಟದ ಸ್ವರೂಪವನ್ನು ತೋರುವಂತಹವು. ತಾವು ಹೋರಾಡಿದರೆ ಅದಕ್ಕೆ ವಿಜಯವು ಕಟ್ಟಿಟ್ಟಿದ್ದು. ತಾವು ವಿಜಯಿಗಳಾಗಿ ಮತ್ತೆ ತಮ್ಮ ಗದ್ದೆಗಳನ್ನು ಊಳುವುದು ತಮ್ಮ ಸ್ವಂತ ಜಮೀನೂ ಎಂಬ ಭಾವದಲ್ಲಿ ಎಂದು ಅಭಿಮಾನದಿಂದ ಹೇಳಿಕೊಳ್ಳುವುದು. ಅಲ್ಲದೇ ತಾವು ಮಾಡುವ ಹೋರಾಟವನ್ನು ಯಾರೂ ಮರೆಯಬಾರದು ಅಂತಹ ರೋಚಕವಾದ ಐತಿಹಾಸಿಕತೆಯನ್ನು ಉಳಿಸಿ ಹೋಗಬೇಕೆಂಬ ತುಮುಲವನ್ನು ಸೈನ್ಯ ಹೊಂದಿರುವುದು ಇಲ್ಲಿ ವ್ಯಕ್ತವಾಗುತ್ತದೆ.

ಕಾದಂಬರಿಲ್ಲಿ ಹೋರಾಟದ ಸ್ವರೂಪವನ್ನು ಲೇಖಕರು ಸ್ಪಷ್ಟವಾಗಿ ತಿಳಿಸುತ್ತಾರೆ. "ಜಯ ಲಭಿಸಿದ ಬಳಿಕ ಮೂರು ವರ್ಷಗಳವರೆಗೆ ಭೂಮಿ ಕಂದಾಯವನ್ನ ಎತ್ತುವುದಿಲ್ಲ. ಆಮೇಲೆ ಧಾನ್ಯ ರೂಪದಲ್ಲೇ ಕಂದಾಯವನ್ನು ಪಡೆಯಲಾಗುವುದು. ಇನ್ನು ಮುಂದೆ ಕನ್ನಡ ಜಿಲ್ಲೆಯಲ್ಲಿ ಉಪ್ಪು ಮತ್ತು ಹೊಗೆಸೊಪ್ಪು ಮಾರಾಟದ ಗುತ್ತಿಗೆ ಇರುವುದಿಲ್ಲ. ಯಾರ ಬೇಕಾದರು ಉಪ್ಪು ಮಾಡಬಹುದು. ಹೊಗೆಸಪ್ಪನ್ನು ಬೆಳೆಸಿ ಮಾರಬಹುದು." (ನಿರಂಜನ, ೨೦೦೫, ಪುಟ-೧೧೧.) ಎಂದು ನಂಜಯ್ಯನು ರಾಜಪಾಲರ ಇಸ್ತಿಹಾರನ್ನು ಓದಿದ. ಇದರಿಂದ ಕೊಡಗಿನ

ಕನ್ನಡಿಗರಿಗೆ ವಿಧಿಸಿದ ಕಂದಾಯ ವಿರೋಧವನ್ನು ಮತ್ತು ಅಲ್ಲಿನ ಜನ ಅದಕ್ಕಾಗಿ ಬ್ರಿಟಿಷ್‌ರ ವಿರುದ್ಧ ಹೋರಾಟ ಮಾಡುವುದನ್ನು, ಆ ಮೂಲಕ ಜಯಗಳಿಸಿ ತಾವು ಸ್ವತಂತ್ರವಾಗಿ ಅಭಿವೃದ್ಧಿಯನ್ನು ಹೊಂದಬಹುದೆಂಬ ಆಶಯವನ್ನು ಈ ಮಾತಿನಲ್ಲಿ ಗ್ರಹಿಸಬಹುದು. ಇಲ್ಲಿ ಐತಿಹಾಸಿಕ, ಚಾರಿತ್ರಿಕವಾಗಿ ಚಿತ್ರಿತವಾದ ಕಲ್ಯಾಣಸ್ವಾಮಿಯ ಸೈನ್ಯದ ಹೋರಾಟದ ಮೊದಲಿನ ಪ್ರನಾಳಿಕೆಯಾಗಿ ಇದು ಮೂಡಿಬಂದಿದೆ ಎನ್ನಬಹುದು. ಹೀಗೆ ಕಲ್ಯಾಣಸ್ವಾಮಿಯು ತನ್ನದೇ ಆದ ಸೈನ್ಯ, ಸಾಮ್ರಾಜ್ಯವನ್ನು ಕಟ್ಟಿಕೊಂಡು ಒಗ್ಗಟ್ಟಿನಿಂದ ಬ್ರಿಟೀಷರ ವಿರುದ್ಧ ದಂಗೆ ಏಳುವುದು ಕಾದಂಬರಿಯಲ್ಲಿ ಕಾಣುತ್ತೇವೆ.

ಕೊಡಗನ್ನು ವಶಪಡಿಸಿಕೊಂಡ ಇಂಗ್ಲೀಷರ ವಿರುದ್ಧ ಹೋರಾಟ ನಡೆಸಲು ಪುಟ್ಟಬಸವನ ಮುಂದಾಳುತನದಲ್ಲಿ ಬಂಡಾಯ ಪ್ರಾರಂಭವಾಗುವ ವಿಷಯ ಇಂಗ್ಲಿಷರಿಗೆ ಮೊದಲೇ ತಿಳಿದಿರುತ್ತದೆ. ಆಗ ಮೊದಲನೇ ಬಲಿ ರಾಮಪ್ಪಯ್ಯನದಾಗುತ್ತದೆ. ರಾಮಪ್ಪಯ್ಯನ ಕೊಲೆಯಾದೊಡನೆ ಅಣ್ಣೇಗೌಡ, ಇನ್ನು ಮೇಲೆ ಹೊಲೆಯರೆಲ್ಲ ಸ್ವತಂತ್ರರೆಂದು ಸಾರಿ ರಾಮಪ್ಪಯ್ಯನ ಮನೆಯಲ್ಲಿದ್ದ ಕಾಗದ ಪತ್ರಗಳನ್ನೆಲ್ಲ ಬೆಂಕಿಗೆ ಹಾಕುತ್ತಾನೆ. ಆ ಬೆಳಕಿನಲ್ಲಿ ಬಡಪಾಯಿಗಳಾದ ರೈತರ ಮುಖಗಳು ಬೆಳಗಿದವು. ಕೊಡಗಿನ ಸಮುದಾಯಕ್ಕೆ ತಮ್ಮ ಸ್ವಾತಂತ್ರ್ಯ ಹರಣದ ಜತೆಗೆ ಅಲ್ಲಿಯವರೆಗೆ ಅವರ ಬದುಕನ್ನು ಕಾಪಾಡಿದ ಲಿಂಗರಾಜರ ಶಿಸ್ತಿನ ಜೀವನಕ್ಕೆ ಚ್ಯುತಿ ಉಂಟಾಗುತ್ತದೆ. ಇಂಗ್ಲೀಷರು ಕಂದಾಯವನ್ನು ವಸುಲಿಮಾಡಲು ಸ್ಥಳೀಯರನ್ನು ದೈಹಿಕವಾಗಿ, ಮಾನಸಿಕವಾಗಿ ಒತ್ತಡಕ್ಕೆ ತಳ್ಳುತ್ತಿದ್ದರು. ಹಣದ ರೂಪದಲ್ಲಿಯೇ ಕಂದಾಯವನ್ನು ಕೊಡಬೇಕೆಂದು ಹಟಹಿಡಿಯುತ್ತಿದ್ದರು. ಅದಕ್ಕಾಗಿ ದರ್ಪವನ್ನು ಅಲ್ಲಿನ ಜನಸಾಮಾನ್ಯರಿಗೆ ತೋರಿಸುವದು ಸಹಿಸಿಕೊಳ್ಳಲಾಗದೇ ಅವರ ವಿರುದ್ಧ ದಂಗೆ ಏಳುವುದೇ ಸ್ವಾತಂತ್ರ್ಯದ ಹೋರಾಟದ ಸ್ವರೂಪವನ್ನು ಪಡೆಯುತ್ತದೆ. ಅದಕ್ಕೆ ಪುಟ್ಟಬಸವನಂತವರು ನಾಯಕರಾಗಿ ಜನಸಾಮಾನ್ಯರಿಗೆ ಕಾಣುತ್ತಾರೆ.

ಹೀಗೆ ಆರಂಭವಾದ ಹೋರಾಟವು ಮೊದ ಮೊದಲು ಸ್ಥಳೀಯ ಪ್ರಮುಖ ಜಮೀನ್ದಾರನಾದ ಸುಳ್ಯದ ಸಮೀಪದ ಅಟ್ಲೂರಿನ ರಾಮಪ್ಪಯ್ಯನನ್ನು ಎದುರುಗೊಳ್ಳಬೇಕಾಗುತ್ತದೆ. ಈತನು ಬ್ರಿಟೀಷರ ಕೈಗೊಂಬೆ. ಅವರ ಬೆಂಬಲದಿಂದಾಗಿ ತನ್ನ ದರ್ಪವನ್ನು ಕಂದಾಯ ವಸೂಲಿ ಮಾಡುವಾಗ ತೋರಿಸಿ ಕೆಳವರ್ಗ ಸಮುದಾಯದ ಸಿಟ್ಟಿಗೆ ಗುರಿಯಾಗಿದ್ದನು. ಹೀಗಾಗಿ ಮೊದಲ ಶತ್ರು ರಾಮಪ್ಪಯ್ಯನಾಗಿ ಕಾಣಿಸುತ್ತಾನೆ. ಬ್ರಿಟೀಷರ ವಿರುದ್ಧ ಹೋರಾಡುವ ಮೊದಲು ಇವನನ್ನು ಹತ್ತಿಕ್ಕಲು ಅಲ್ಲಿನ ಜನ ಒಂದುಗೂಡುತ್ತಾರೆ. ಕಲ್ಯಾಣಸ್ವಾಮಿಯೇ ಸೈನ್ಯವನ್ನು ಉದ್ದೇಶಿಸಿ "ಸುಳ್ಯದ ರಾಮಗೌಡರೂ ಕೊಡಗಿನ ಹುಲಿಕುಮದ ನಂಜಯ್ಯನವರೂ ನಮ್ಮ ಸೈನ್ಯದ ದಂಡನಾಯಕರು. ಅಣ್ಣೆಗೌಡರೇ ಕೋಶಾಧಿಕಾರಿ. ಚೆಟ್ಟಿ,

ಕುಡಿಯ ಮತ್ತು ಕುರ್ತು ಕುಡಿಯರು ದಳಪತಿಗಳು. ಇವರ ಆಜ್ಞೆಯನ್ನು ಯಾರೂ ಮೀರಿ ನಡೆಯಬಾರದು" (ನಿರಂಜನ, ೨೦೦೫, ಪುಟ–೧೧೧.) ತನ್ನ ಸೈನ್ಯವನ್ನು ಹುರುದುಂಬಿಸುತ್ತಾನೆ. ರಾಮಪ್ಪಯ್ಯನ ಕೊಲೆಯನ್ನು ಮಾಡುತ್ತಾರೆ. ಅದರಿಂದ ಬ್ರಿಟೀಷರು ಎಚ್ಚೆತ್ತುಕೊಳ್ಳುತ್ತಾರೆ.

ಕೊಡಗನ್ನು ವಶಪಡಿಸಿಕೊಂಡ ಇಂಗ್ಲೀಷರ ವಿರುದ್ಧ ಹೋರಾಟ ನಡೆಸಲು ಪುಟ್ಟಬಸವ ಮುಂದಾಳುತನದಲ್ಲಿ ಬಂಡಾಯ ಪ್ರಾರಂಭವಾಗುತ್ತದೆ. ಈ ವಿಷಯವನ್ನು ಮೊದಲೇ ಅರಿತುಕೊಂಡಿದ್ದ ಬ್ರಿಟೀಷರು ಅದನ್ನು ಹತ್ತಿಕ್ಕಲು ಪ್ರಯತ್ನಿಸುತ್ತಾರೆ. ಅಷ್ಟರಲ್ಲಿ ರಾಮಪ್ಪಯ್ಯನ ಕೊಲೆಯಿಂದ ಪ್ರೇರಿತನಾದ ಹೊಲೆಯರ ಅಣ್ಣೇಗೌಡನು "ಇನ್ನು ಮುಂದೆ ನಾವೆಲ್ಲ ಸ್ವತಂತ್ರರೆಂದು" ಸಾರುತ್ತಾನೆ. ಅಲ್ಲದೆ ರಾಮಪ್ಪಯ್ಯನ ಮನೆಹೊಕ್ಕು ಅಲ್ಲಿದ್ದ ಕಾಗದ ಪತ್ರಗಳನ್ನೆಲ್ಲ ಬೆಂಕಿ ಹಚ್ಚಿ ಸುಟ್ಟು ಹಾಕುತ್ತಾನೆ.

ಕಾದಂಬರಿಯಲ್ಲಿ ಒಂದು ವೈರುದ್ಧ್ಯವು ಎದ್ದು ಕಾಣುತ್ತದೆ. ಅದೇನೆಂದರೆ 'ದೇಶದ್ರೋಹ'. ಕಲ್ಯಾಣಸ್ವಾಮಿ ತನ್ನ ಸೈನ್ಯವನ್ನು ಉದ್ದೇಶಿಸಿ "ನಮ್ಮ ಯುದ್ಧ ಇಂಗ್ಲೀಷಿನೋರ ವಿರುದ್ಧ ಅನ್ನೋದನ್ನು ನೆನಪಿಡಿ. ನಮ್ಮ ನಾಡ ಬಾಂಧವರು ಯಾರೂ ನಮಗೆ ವೈರಿಗಳಲ್ಲ. ರಾಮಪ್ಪಯ್ಯನಂಥ ವಿಷಜಂತುಗಳಿದ್ದರೆ ಮಾತ್ರ. ಅಂಥವರ ಮೇಲೂ ನಾವು ಖಡ್ಗ ಹಿರಿದೇವು" (ಬಸವರಾಜ ಸಬರದ, ೧೯೯೯, ಪುಟ–೬೨.) ಎಂದು ಹೇಳುವ ಮಾತಿನಲ್ಲಿ ದೇಶದ್ರೋಹ ಎಸಗುವ ಬ್ರಿಟೀಷರು ಮಾತ್ರವಲ್ಲ ದೇಶೀಯರನ್ನು ಸಹ ಸಂಹರಿಸುವ ಕೆಚ್ಚು ತುಂಬಿದೆ. ಇಲ್ಲಿ ರಾಮಪ್ಪಯ್ಯ ಮತ್ತು ಬೋಪು ದಿವಾನ ಎಂಬುವವರು ದೇಶದ್ರೋಹಿಗಳಾಗಿ ಚಿತ್ರಿತರಾಗಿದ್ದಾರೆ. ಅದರಲ್ಲೂ ರಾಮಪ್ಪಯ್ಯನ ಕೊಲೆಯ ನಂತರ ದೇಶದ್ರೋಹಿ ಕೆಲಸಗಳಲ್ಲಿ ಸಂಪೂರ್ಣ ತಲ್ಲೀನನಾದ ಬೋಪು ದಿವಾನನ ಕೈವಾಡದಿಂದ ಹೋರಾಟದ ಹಾದಿ ತುರ್ತಿಗೆ ಒಳಗೊಳ್ಳುತ್ತದೆ. ಖಳನಾಯಕನಾಗಿ ಚಿತ್ರಿತವಾದ ಬೋಪು ದಿವಾನನ ಕೈವಾಡ ಪ್ರತಿಯೊಂದು ದುರ್ಘಟನೆಯಲ್ಲಿ ಇರುತ್ತದೆ. "ನಮ್ಮವರ ವಿಶ್ವಾಸದ್ರೋಹ ಹಾಗೂ ಮೋಸದಿಂದಲೇ ಕಲ್ಯಾಣಸ್ವಾಮಿಯ ವೀರಸಂಗ್ರಾಮವನ್ನು ಹತ್ತಿಕ್ಕಲು ಬ್ರಿಟೀಷರಿಗೆ ಸಾಧ್ಯವಾಗಿದೆ. ಆದರೂ ಕಾದಂಬರಿಯಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಕಥೆಯೇ ಮುಖ್ಯವಾಗಿದ್ದರೂ, ಇದರಲ್ಲಿ ಅನೇಕ ಸೂಕ್ಷ್ಮ ಒಳನೋಟಗಳು ಹರಡಿಕೊಂಡಿರುವುದರಿಂದ, ಮನುಷ್ಯನ ಸ್ವಾರ್ಥ–ಅಸೂಯೆ–ದ್ವೇಷಗಳು ಬೆರೆತುಕೊಂಡಿ ರುವುದರಿಂದ ಇಂದಿನ ಪ್ರಸ್ತುತ ಸಂದರ್ಭಕ್ಕೂ ಇಂತಹ ಕೃತಿಗಳು ಮುಖಮಾಡಿ ನಿಲ್ಲಬಲ್ಲವುಗಳಾಗಿವೆ.

### ಸ್ವಾಮಿ ಅಪರಾಂಪರ (೧೯೬೭)

ಬ್ರಿಟೀಷ್ ವಸಾಹತುಶಾಹಿ ಜೀವಂತವಾಗಿದ್ದ ಕಾಲದಲ್ಲಿ ನಿರಂಜನ ಸಹಜವಾಗಿಯೇ ಅದಕ್ಕೆ ಮುಖಾಮುಖಿಯಾದರು. ಪ್ರಗತಿಶೀಲ ಸಾಹಿತ್ಯ ಚಳುವಳಿ ತನ್ನ ಪ್ರಣಾಳಿಕೆಯಲ್ಲಿ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡುವುದನ್ನು ಒಂದಂಶ ಮಾಡಿಕೊಂಡಿದ್ದಿತು. ನಿರಂಜನರೂ ಸ್ವಾತಂತ್ರ್ಯ ಹೋರಾಟ ಕುರಿತ  ಕಥೆ, ಕಾದಂಬರಿಗಳನ್ನು ಬರೆದರು. ಸ್ವಾತಂತ್ರ್ಯ ಹೋರಾಟ ಕುರಿತ ಕಥಾಸಾಹಿತ್ಯದ ಕೃಷಿಯಲ್ಲಿ ನಿರಂಜನರ ಪಾತ್ರ ವಿಶಿಷ್ಟವಾದುದು. ಸ್ವಾತಂತ್ರ್ಯ ಹೋರಾಟದ ವಸ್ತುವನ್ನುಳ್ಳ ಕಾದಂಬರಿಗಳಲ್ಲಿ 'ಸ್ವಾಮಿ ಅಪರಾಂಪರ', 'ಕಲ್ಯಾಣಸ್ವಾಮಿ' ಬಹಳ ಮುಖ್ಯವಾದವುಗಳು. ಸ್ವಾಮಿ ಅಪರಂರಾರ ಮತ್ತು ಕಲ್ಯಾಣ ಸ್ವಾಮಿ ಈ ಇಬ್ಬರು ಮೂಲತಃ ಕೊಡಗನ್ನು ಸಾಮ್ರಾಜ್ಯಶಾಹಿಯಿಂದ ವಿಮುಕ್ತಿಗೊಳಿಸಲು ಜನಾಂದೋಲನಕ್ಕೆ ಚಾಲನೆ ನೀಡುತ್ತಾರೆ. ಕೊಡಗು ನಾಡಿನಾದ್ಯಂತ ಸಂಚರಿಸಿ ಬ್ರಿಟೀಷರ ವಿರುದ್ಧ ಸೈನ್ಯ ಕಟ್ಟುವ ಈ ವ್ಯಕ್ತಿಗಳ ಧೈರ್ಯ, ಸಾಹಸ, ದೇಶಪ್ರೇಮ ಇಲ್ಲಿ ಹೆಪ್ಪುಗಟ್ಟುತ್ತದೆ. ರಾಜನ ಅಧಿಕಾರ ಲಾಲಸೆಯ ಕ್ರೌರ್ಯಕ್ಕೆ ಒಳಗಾಗಿ ಅಪಾರ ಕಷ್ಟಗಳನ್ನು ಎದುರಿಸಿದರೂ ಸಾಮ್ರಾಜ್ಯಶಾಹಿ ಹಿಡಿತದಿಂದ ಕೊಡಗನ್ನು ಉಳಿಸುವ ಸ್ವಾಮಿ ಅಪರಾಂಪರನ ಪಯತ್ನ ಅಸದಳವಾದುದಾಗಿದೆ. (ಬಸವರಾಜ ಸಬರದ, ೧೯೯೯, ಪುಟ-೩೧.)

### ಮೃತ್ಯುಂಜಯ (೧೯೭೬)

ಮೃತ್ಯುಂಜಯ ಕಾದಂಬರಿ ನಿರಂಜನರ ಕಾದಂಬರಿಗಳಲ್ಲಿಯೇ ತುಂಬಾ ಶ್ರೇಷ್ಠವಾದ ಕೃತಿಯೆಂದು ವಿಮರ್ಶಕರ ಮೆಚ್ಚುಗೆಗೆ ಪಾತ್ರವಾಗಿದೆ. ಇಲ್ಲಿ ಹೋರಾಟ ವಿಫಲವಾದರೂ ಮಾನವನ ಉದಾತ್ತತೆ ಹಾಗೂ ನಿರಂತರ ಪ್ರಯತ್ನಗಳನ್ನು ಬಿಂಬಿಸುವಲ್ಲಿ ತೀವ್ರತರವಾದ ಪರಿಣಾಮವನ್ನುಂಟುಮಾಡುತ್ತದೆ. ಕಾದಂಬರಿಯಲ್ಲಿ ಬರುವ ಗುಲಾಮ ರೈತರು ನೀರಾನೆ ಪ್ರಾಂತ್ಯದ ಪೇರೊ ರಾಜನ ಆಡಳಿತದಲ್ಲಿ ತೀವ್ರತರವಾದ ದೌರ್ಜನ್ಯಕ್ಕೊಳಗಾದವರಾಗಿದ್ದಾರೆ. ಭೂಮಾಲೀಕರು ನೇರವಾಗಿ ಈ ಗುಲಾಮಿ ರೈತರನ್ನು ಶೋಷಿಸುತ್ತಾರೆ. ಕಂದಾಯ ವಸೂಲಿಗಾಗಿ ಬಂದ ಪ್ರಾಂತ್ಯಪಾಲನಿಗೆ ನಡೆಸುವ ವಿಲಾಸಿ ಔತಣಗಳು ರೈತರ ಕಂದಾಯದಿಂದ ಕಂಗೊಳಿಸುತ್ತವೆ. ಅರಮನೆಯ ವೆಚ್ಚಕ್ಕೆ ಅಧಿಕಾರಿಗಳ ವಿಲಾಸೀ ಜೀವನಕ್ಕೆ, ಭೂಮಾಲಿಕರ ಭೋಗಕ್ಕೆ –ಹೀಗೆ ಎಲ್ಲದಕ್ಕೂ ಎಲ್ಲರಿಗೂ ರೈತರ ಹಣವೇ ಬೇಕು. ಪಿರಾಮಿಡ್ ಸಂಸ್ಕೃತಿಯೇ ಗುಲಾಮರ ದುಡಿಮೆಯ ಪ್ರತಿಫಲವಾಗಿದೆ. ಇಲ್ಲಿ ರೈತರ ಗುಲಾಮರ ಶೋಷಣೆಗೆ ಕೊನೆಯಿಲ್ಲದಂತಾಗಿದೆ. ಪ್ರಗತಿಶೀಲರು ಪ್ರಭುತ್ವದ ಬೆನ್ನೆಲುಬಾಗಿರುವ ಪುರೋಹಿತಶಾಹಿಯನ್ನು ಒಡೆಯಲು ಇಷ್ಟಪಡುತ್ತಾರೆ. ನಿರಂಜನ ಅವರ 'ಮೃತ್ಯುಂಜಯ'ದಲ್ಲಿ ಬರುವ ಈಜಿಪ್ಷನ

ಹೆಪಾಟ್ ಪುರೋಹಿತಶಾಹಿಯ ಪ್ರತಿನಿಧಿ. ರಾಜನಿಗಿಂತಲೂ ಈ ಮಹಾ ಅರ್ಚಕನಾದ ಹೆಪಾಟ್‌ನೇ ಇಲ್ಲಿ ಶಕ್ತಿಶಾಲಿ. ಹೆಪಾಟ್‌ನು ತನ್ನ ವಿದ್ಯೆ, ಜ್ಞಾನ ಮತ್ತು ತಿಳುವಳಿಕೆಯನ್ನು ಖರ್ಚು ಮಾಡುವುದು ಪ್ರಭುತ್ವದ ರಕ್ಷಣೆ ಮತ್ತು ಸಾಮಾಜಿಕ ಅಸಮಾನತೆಯ ಉಳಿವಿಕೆಗಾಗಿ ಅಷ್ಟೇ. ಆದ್ದರಿಂದಲೇ ಇಲ್ಲಿನ ದಲಿತರಾದ ರೈತರು ಅಪಾರ ಸಾವು, ನೋವುಗಳಿಗೆ ಒಳಗಾಗುತ್ತಾರೆ. ರೈತನಾಯಕ ಮೆನಪ್‌ಟಾನು ತಲೆದಂಡ ತೆತ್ತಬೇಕಾಗುತ್ತದೆ. ನಿರಂಜನರು ಇಲ್ಲಿ ಪುರೋಹಿತಶಾಹಿಯ ಅಮಾನವೀಯ ಮುಖಗಳನ್ನು ನಿರ್ಭೀತಿನಿಯಿಂದ ಬಿಚ್ಚಿಟ್ಟಿದ್ದಾರೆ.

ನಿರಂಜನರಿಗೆ ವಿಶಿಷ್ಟವಾದ ಒಂದು ಶೈಲಿಯಿದೆ. ಇತರರ ಬರಹಗಳೊಂದಿಗೆ ಇಟ್ಟಾಗ ಇದು ನಿರಂಜನರದೇ ಎಂದು ತಟ್ಟನೆ ಗುರುತಿಸುವಷ್ಟು ಅವರ ವ್ಯಕ್ತಿತ್ವ ನಿಚ್ಚಳವಾಗಿ ಮೂಡಿ ಬರುತ್ತದೆ. ಲೋಕದ ಕೊಂಕು ಡೊಂಕುಗಳನ್ನು ದರ್ಪ ದಬ್ಬಾಳಿಕೆಗಳನ್ನು ಅಸಮತೆಯ ಆಷಾಢಭೂತಿತನಗಳನ್ನು ಕಂಡಾಗ, ಚಿತ್ರಿಸುವಾಗ ಅವರ ಶೈಲಿಗೆ ನೂರಾನೆಯ ಬಲ ಬರುತ್ತದೆ. ಪ್ರಗತಿಶೀಲತೆ ಕಾದಂಬರಿಯ ಉದ್ದಕ್ಕೂ ಆರ್ಭಟಿಸುವ ಆ ಶಕ್ತಿಯುವಾದ ಗಂಡುಶೈಲಿಯನ್ನು ಓದುವಾಗ ಎಂಥವರ ಮನದಲ್ಲೂ ಬೆಂಕಿಯ ಹೊಳೆ ಹರಿಯದಿರದು. ಸ್ವಾತಂತ್ರ್ಯ ಪ್ರೇಮದ ಉಜ್ವಲ ಅಧ್ಯಾಯಗಳನ್ನು ಅಧ್ಯಯನಿಸುವಾಗ ವೀರಾವೇಶದ ರಾಷ್ಟ್ರಪ್ರೇಮದ ಕುದಿರಕ್ತ ಧಮನಿಧಮನಿಗಳಲ್ಲಿ ಅತ್ಯಂತ ವೇಗವಾಗಿ ಧುಮುಕಿ ಹರಿಯತೊಡಗುತ್ತದೆ.

**ವ್ಯಾಸರಾಯ ಬಲ್ಲಾಳ ಅವರ ಸ್ವಾತಂತ್ರ್ಯ ನಂತರದ ಕಾದಂಬರಿಗಳಲ್ಲಿನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು**

ಕನ್ನಡದ ಪ್ರಗತಿಶೀಲ, ನವ್ಯ, ಬಂಡಾಯ ಸಾಹಿತ್ಯಗಳ ನಾನಾ ಸ್ತರಗಳ ಪ್ರಭಾವಗಳನ್ನರಗಿಸಿಕೊಂಡು ಬೆಳೆದಿರುವ ಬಲ್ಲಾಳರನ್ನು ನಾಡಿನ ಕೆಲವೇ ಪ್ರಗತಿಪರ, ಚಿಂತನಶೀಲ ಲೇಖಕರಲ್ಲೊಬ್ಬರೆಂದು ಸಾಹಿತ್ಯಲೋಕ ಗುರುತಿಸಿದೆ. ಇದುವರೆಗೆ ಆರು ಕಾದಂಬರಿಗಳನ್ನು ರಚಿಸಿ ಪ್ರಕಟಿಸಿದ್ದಾರೆ. ಅವುಗಳಲ್ಲಿ ಬಂಡಾಯ ಮತ್ತು ಹೇಮಂತಗಾನ ಪ್ರಮುಖವಾದವು. ತಮ್ಮ ಕಾದಂಬರಿಗಳಲ್ಲಿ ಸಾಮಾಜಿಕ ಮತ್ತು ಐತಿಹಾಸಿಕ ಆಯಾಮಗಳನ್ನೊದಗಿಸಲು ಪ್ರಯತ್ನಿಸಿದ್ದಾರೆ. ಐವತ್ತು ವರ್ಷಗಳ ದೀರ್ಘಕಾಲ ಮುಂಬೈನಂಥ ಮಹಾ ನಗರದಲ್ಲಿ ನೆಲೆಸಿದ್ದ ನಿಡಂಬೂರು ವ್ಯಾಸರಾಯ ಬಲ್ಲಾಳರು ತಮ್ಮ ಅನುಭವದ ನೆಲೆಯಲ್ಲಿ ಮಹಾನಗರದ ಜಟಿಲ ಹಾಗೂ ಸಂಕೀರ್ಣ ಜೀವನದ ಪಡಿನೆಳಲು ಚಿತ್ರಿಸಿದಂತೆ ತೋರುತ್ತದೆ. ಈ ಬೃಹತ್ ನಗರದ ಹಲವಾರು ರೌದ್ರ ಮುಖಗಳಲ್ಲಿ ಕಾರ್ಮಿಕ ಜೀವನ ಹೆಚ್ಚು ಪ್ರಖರವಾದದ್ದು, ಕಾರ್ಮಿಕ-ಮಾಲೀಕರ ಇತ್ತೀಚಿನ ಸಂಬಂಧವು ವಿಚಿತ್ರ-ವಿಶಿಷ್ಟ ಸ್ವರೂಪವನ್ನು ಪಡೆದಿದ್ದು, ಪರಿಚಿತ ವ್ಯವಸ್ಥೆಯನ್ನೇ ಬುಡಮೇಲು ಮಾಡಬೇಕು ಎನ್ನುವ ಬಂಡಾಯ ಪ್ರವೃತ್ತಿ;

ಆ ಪ್ರವೃತ್ತಿಯಲ್ಲಿ ಅಡಗಿರುವ ಹಿಂಸೆ; ಹಿಂಸೆಯೇ ಮೂಲವಾಗಿ ಸೃಷ್ಟಿಯಾಗುವ ವ್ಯವಸ್ಥೆ ರೂಢಿಸಿಕೊಳ್ಳಬೇಕಾದ ಹಿಂಸೆ– ಇವೆಲ್ಲ ಮನಕಲಕುವಂತೆ ತಮ್ಮ ಕಾದಂಬರಿಗಳಲ್ಲಿ ಚಿತ್ರಿಸುತ್ತಾರೆ.

ಪ್ರಸ್ತುತ ಅವರ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕೃತ 'ಬಂಡಾಯ' ಮತ್ತು 'ಹೇಮಂತಗಾನ' ಕಾದಂಬರಿಗಳನ್ನು ಮಹಾಪ್ರಬಂಧದ ವ್ಯಾಪ್ತಿಯಲ್ಲಿ ಸ್ವಾತಂತ್ರ್ಯ ಹೋರಾಟದ ವರ್ಗ ಸಂಘರ್ಷಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಬಂಡಾಯ (೧೯೮೫)**

ವ್ಯಾಸರಾಯ ಬಲ್ಲಾಳರ 'ಬಂಡಾಯ' ಕಾದಂಬರಿ ಸಹ ಬಂಡವಾಳಶಾಹಿ ಜಗತ್ತಿನ ದ್ರೋಹಗಳನ್ನು ಸಮರ್ಥವಾಗಿ ಬಯಲು ಮಾಡುತ್ತದೆ. 'ಬಂಡಾಯ' ವರ್ಗ ಸಂಘರ್ಷದ ತಾತ್ವಿಕತೆಯನ್ನು ಸಾರುತ್ತದೆ. ಮುಂಬಯಿ ಕಾರ್ಮಿಕರನ್ನು ಸೃಷ್ಟಿಸಿದ ಮಾಯಾನಗರಿ. ಬಂಡವಾಳಶಾಹಿಯ ಜಗತ್ತಿನಲ್ಲಿ ಕಾರ್ಮಿಕ ಜೀವನ ಅಮಾನುಷವಾದುದು. ಮಾರ್ಕ್ಸ್ ಪ್ರಜ್ಞೆಯ ವರ್ಗವೈರುದ್ಧ್ಯ ನೆಲೆಯನ್ನು 'ಬಂಡಾಯ' ಮೈಗೂಡಿಸಿಕೊಂಡಿದ್ದರೂ ಎಲ್ಲ ಸಿದ್ಧಾಂತಕ್ಕಾಗಿ ಸಿದ್ಧಾಂತದ ನಿರೂಪಣೆಯನ್ನು ನೋಡಲು ಸಾಧ್ಯವಿಲ್ಲ. 'ಬಂಡಾಯ'ದ ಯಶಸ್ಸು ಅದೇ ಆಗಿದೆ. ಮಧ್ಯಮವರ್ಗದ ಜನರ ದಿನನಿತ್ಯದ ದುಡಿತ, ಆರ್ಥಿಕ ಕೊರತೆ, ಲೈಂಗಿಕ ಸಂಬಂಧಗಳು, ಸ್ವಾರ್ಥ, ಹಿಂಸೆ ಮುಂತಾದವನ್ನು 'ಬಂಡಾಯ' ಕಲಾತ್ಮಕವಾಗಿ ಹಿಡಿದಿಟ್ಟಿದೆ. (ಆಮೂರ. ಜಿ.ಎಸ್., ೨೦೧೩, ಪುಟ–೮೨.)

ಬಂಡಾಯದಲ್ಲಿ ವರ್ಗ ಸಂಘರ್ಷದ ಕ್ರಿಯೆ ಮತ್ತು ಅದರ ಪರಿಣಾಮ ಅತ್ಯಂತ ವಾಸ್ತವವಾಗಿ ನಿರೂಪಿತವಾಗಿರುವುದು ಅದರ ವೈಶಿಷ್ಟ್ಯ. ರೋಮ್ಯಾಂಟಿಕ್ ಆದರ್ಶ ವಾಸ್ತವತೆಯನ್ನು ಪ್ರಕಟಿಸುತ್ತದೆ. ರಾಜೀವ ಮತ್ತು ಸತೀಶರ ಪಾತ್ರಗಳಲ್ಲಿ ವರ್ಗ ಸಂಘರ್ಷದ ಸ್ವರೂಪದ ಬಗ್ಗೆ ಸ್ಪಷ್ಟವಾದ ತಾತ್ವಿಕ ನಿಲುವು ರಾಜೀವನಲ್ಲಿ ಎದ್ದು ಕಾಣುತ್ತದೆ. ಸತೀಶನಲ್ಲಿ ಗೌಣವಾಗಿ ಅದನ್ನು ಚಿತ್ರಿಸಲಾಗಿದೆ. ರಾಜೀವನಿಗೆ ಲಕ್ಷಾಂತರ ಕಾರ್ಮಿಕರ ಬೆಂಬಲವಿದೆ. ಹೀಗಿದ್ದರೂ ಆತ ಕಾದಂಬರಿಯ ಕೊನೆಯಲ್ಲಿ ಮತ್ತೆ ಹಿಂಸೆಗೆ ಮರಳುವುದು ಸೂಚಕವಾಗಿದೆ. ಕಾರ್ಮಿಕರ ಹೆಸರಿನಲ್ಲಿ ನಡೆಯುವ ಸ್ವಾರ್ಥಸಾಧನೆ, ಕಿರುಕುಳ ಲಾಭಗಳಲ್ಲಿಯೇ ತೃಪ್ತಿಪಡುವ ಕಾರ್ಮಿಕರ ಮಂದದೃಷ್ಟಿ. ದೇಶಪಾಂಡೆಯಂಥ ಸಂಧಿಸಾಧಕ ಕಾರ್ಮಿಕ ನಾಯಕರು ಪ್ರಚೋದಿಸುವ ಹಿಂಸಾಚಾರ ಇವುಗಳ ಪ್ರತ್ಯಕ್ಷ ಅನುಭವ ರಾಜೀವನ ಮೇಲೆ ವಿಲಕ್ಷಣ ಪರಿಣಾಮ ಬೀರುತ್ತದೆ. ತನ್ನ ನಾಯಕತ್ವದಲ್ಲಿ ನಡೆದ ಬಂಡಾಯದ ಗತಿಶೀಲತೆಯ ಬಗ್ಗೆಯೇ ಅವನಲ್ಲಿ ಸಂದೇಹ ಹುಟ್ಟಿಕೊಳ್ಳುತ್ತದೆ. ಯಾಮಿನಿ ಮತ್ತು ದೇಶಪಾಂಡೆ ಇವರ ಮನೋವೃತ್ತಿ ಹೆಚ್ಚು ಕಡಿಮೆ ಒಂದೇ ಎಂಬ ಅರಿವು ಮೂಡಿದಾಗ ಅವನಿಗೆ ಸೋಲಿನ ಅನುಭವವಾಗುತ್ತದೆ. ರಾಜೀವ ನೇರವಾದ

ಪ್ರತಿಸ್ಪರ್ಧಿಯಲ್ಲದಿದ್ದರೂ ಕಾರ್ಮಿಕರ ನಿಜವಾದ ಶತ್ರುವಾದ ಸತೀಶನಿಗೆ ತನ್ನ ಶಕ್ತಿಯಲ್ಲಿ ಅಪಾರ ನಂಬುಗೆ. ರಾಜೀವನನ್ನು ಕೂಡ ತಾನು ನಿಯಂತ್ರಿಸಬಲ್ಲೆ ಎನ್ನುವ ಸ್ಥೈರ್ಯ ಅವನಲ್ಲಿದೆ. ಆದರೆ ಕೊನೆಗೆ ಆತ ಸೋಲನ್ನೊಪ್ಪಿಕೊಂಡು ದೇಶಪಾಂಡೆಯಂಥ ಕ್ಷುಲ್ಲಕ ವ್ಯಕ್ತಿಗೆ ಶರಣು ಹೋಗಬೇಕಾದ ಪರಿಸ್ಥಿತಿ ಹುಟ್ಟಿಕೊಳ್ಳುತ್ತದೆ. ತಂದೆಯ ಸಾವು, ತಂಗಿಯ ಬಂಡು, ಹೆಂಡತಿಯ ಬಂಜೆತನ, ಫ್ಯಾಕ್ಟರಿಗಳಲ್ಲಿ ನಡೆಯುವ ಹಿಂಸೆ-ಇಂಥ ಅನೇಕ ಕಾರಣಗಳಿಂದಾಗಿ ಸತೀಶ ತನ್ನ ಆತ್ಮ ವಿಶ್ವಾಸವನ್ನು ಕಳೆದುಕೊಳ್ಳುತ್ತಾನೆ. ಆದರೆ, ರಾಜೀವ ಸತೀಶರಲ್ಲಿ ಒಂದು ಮುಖ್ಯ ಅಂತರವನ್ನು ಕಾದಂಬರಿ ಸೂಚಿಸುತ್ತದೆ. ರಾಜೀವ ಪರಿಸ್ಥಿತಿಯ ಮೇಲೆ ಸಂಪೂರ್ಣ ನಿಯಂತ್ರಣವನ್ನು ಹೊಂದಿರುವುದರಿಂದ ತನ್ನ ಕ್ರಿಯಾ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವುದಿಲ್ಲ. ಸತೀಶ ತಾನು ಹೊಂದಿಕೊಂಡ ವ್ಯವಸ್ಥೆ ಕುಸಿದಾಗ ತಾನೂ ಕುಸಿದು ಬೀಳುತ್ತಾನೆ. (ವ್ಯಾಸರಾಯ ಬಲ್ಲಾಳ, ೨೦೦೫, ಪುಟ-೧೧೮-೧೧೯).

ವ್ಯಾಸರಾಯ ಬಲ್ಲಾಳರ ಕಾದಂಬರಿಗಳು ಹೆಚ್ಚಾಗಿ ಮೈ ಬಿಚ್ಚಿಕೊಳ್ಳುವುದು ಮುಂಬೈನಂಥಹ ಮಹಾನಗರಗಳಲ್ಲಿ, ಅದೇ ಅವರ ಕಾದಂಬರಿ ಪಾತ್ರಗಳ ಕರ್ಮಭೂಮಿ. ಅದಕ್ಕೆ ಅವರಿಗಾದ ಮುಂಬೈನಗರ ಅನುಭವಗಳೇ ಕಾರಣವಾಗಿರಬಹುದು. ಮುಂಬೈ ಕೇವಲ ಒಂದು ಪಟ್ಟಣವಲ್ಲ; ಅದು ಭಾರತಕ್ಕಷ್ಟೇ ಹೆಬ್ಬಾಗಿಲಲ್ಲ- ಅನೇಕ ಸಮಸ್ಯೆ-ಸವಾಲುಗಳಿಗೂ ಹೆಬ್ಬಾಗಿಲಾಗಿದೆ. ಅದೆ. ಅನೇಕ ಕಾರ್ಖಾನೆಗಳ ತವರೂರು ಮುಂಬೈ. ಅನೇಕ ಗೊಂದಲಗಳ ಗೂಡಾಗಿರುವುದು ಅಷ್ಟೇ ಸತ್ಯ ಸಂಗತಿ. ಕಾರ್ಮಿಕರ ಬದುಕಿಗೆ ಆಸರೆಯಾಗಬಲ್ಲ ಕಾರ್ಖಾನೆಗಳು ಅವರ ಒಡಲಿಗೆ ಬೆಂಕಿಯಿಟ್ಟಾಗ ಇಂಥ ಕಾದಂಬರಿಗಳು ತಲೆದೋರುತ್ತವೆ.

ಹಾಗಾಗಿ 'ಬಂಡಾಯ' ವರ್ಗ ಸಂಘರ್ಷದ ಕಾದಂಬರಿ. ಕ್ಯಾಪಿಟಾಲಿಸ್ಟ ವ್ಯವಸ್ಥೆಯನ್ನು ಧಿಕ್ಕರಿಸುವ ಈ ಕಾದಂಬರಿಯ ಒಡಲೊಳಗೆ ಅನೇಕ ಸಾತ್ವಿಕ-ಸರಳ ಜನರಿದ್ದಾರೆ. ಅಂಥವರಲ್ಲಿ ರಾಜೀವ ಕೂಡ ಒಬ್ಬ ಅವನಲ್ಲಿ ಸ್ಪಷ್ಟವಾದ ಗುರಿಯಿದೆ.ಅದಕ್ಕೆ ಧನಾತ್ಮಕ ಆಲೋಚನೆಗಳು ಹಾದಿಯಾಗಿವೆ. ಆದರೆ ಆ ಹಾದಿಗೆ ಅನೇಕ ಮುಳ್ಳು ಕಂಟಿಗಳಿವೆ ಅದನ್ನು ಸರಿಸುವ- ಕ್ರಮಿಸುವ ಪರಿ ಕಾದಂಬರಿಯಲ್ಲಿ ಚೆನ್ನಾಗಿ ಮೈ ಬಿಚ್ಚಿಕೊಂಡಿದೆ. ಲಕ್ಷಾವಧಿ ಕಾರ್ಮಿಕರ ಬೆಂಬಲದಿಂದ ತಾನಡೆವ ದಾರಿಯನ್ನು ಸ್ವಚ್ಚಗೊಳಿಸುವ ಹಾಗೂ ಸುಗಮಗೊಳಿಸುವ ರಾಜೀವನ ಪಾತ್ರದ ನಡೆ ಈ ಕೃತಿಗೆ ಬೆನ್ನೆಲುಬು. ಸಂಧಿಸಾಧಕರ ಮಗ್ಗುಲ ಮುಳ್ಳಾದ ರಾಜೀವ ಕಾದಂಬರಿಯಲ್ಲಿ ಸಾತ್ವಿಕ-ತಾತ್ವಿಕ ಕಳೆಯನ್ನು ತುಂಬಿಕೊಂಡಿರುವುದುಂಟು..

ವ್ಯಾಸರಾಯ ಬಲ್ಲಾಳರ ಮುಂಬೈ ನಗರ ದಟ್ಟವಾದ ಅನುಭವಗಳು ಇಲ್ಲಿ ಹಾಸುಹೊಕ್ಕಾಗಿ ಮೂಡಿ ಬರುವುದರೊಂದಿಗೆ ಕಾದಂಬರಿಯಲ್ಲಿ ಜೀವಕಳೆಯನ್ನು ತುಂಬಿವೆ. ಸತೀಶ ಆರಂಭದ

ತನ್ನ ವಕ್ರತನದಿಂದ ಹೊರಬರುವುದಲ್ಲದೇ ಪರಿಸ್ಥಿತಿಗಳ ಒತ್ತಡಕ್ಕೆ ಒಳಗಾಗಿ ತೊಳಲಾಡುವ ಪರಿಸ್ಥಿತಿ ತುಂಬಾ ರೋಚಕವಾಗಿದೆ. ಆದರೆ ಅದೇ ರಾಜೀವ ತನ್ನ ಕ್ರೀಯಾ ಸ್ವಾತಂತ್ರ್ಯವನ್ನು ಕಳೆದುಕೊಳ್ಳದೇ ಪರಿಸ್ಥಿತಿಯ ಮೇಲೆ ಸಂಪೂರ್ಣ ಹಿಡಿತ ಸಾಧಿಸಿರುವುದು ಕಾದಂಬರಿಗೆ ಕಂಬಿ ಬೆಸೆದಂತಿದೆ. ಇಂಥ ಹಲವು ಕಾರಣಗಳಿಂದಾಗಿ 'ಬಂಡಾಯ' ತನ್ನ ಗುರಿ ತಲುಪುವಲ್ಲಿ ಯಶಸ್ವಿ ಕಂಡಿದೆ. ವ್ಯಾಸರಾಯ ಬಲ್ಲಾಳರು ಇಂಥಹ ಕಾದಂಬರಿ ನೀಡುವ ಮೂಲಕ ಪ್ರಗತಿಶೀಲಧೋರಣೆಗಳನ್ನು ಇನ್ನಷ್ಟು ಗಟ್ಟಿಗೊಳಿಸಿದ್ದಾರೆ.

**ಹೇಮಂತಗಾನ (೧೯೫೪)**

ವ್ಯಾಸರಾಯ ಬಲ್ಲಾಳರ ಮೊತ್ತೊಂದು ಸ್ವಾತಂತ್ರ್ಯ ಹೋರಾಟದ ಕಾದಂಬರಿ 'ಹೇಮಂತಗಾನ' ಪ್ರಮುಖವಾಗಿ ಸ್ವಾತಂತ್ರ್ಯ ಚಳುವಳಿ ಮತ್ತು ಕಾರ್ಮಿಕ ಚಳುವಳಿಗಳ ವಿದ್ಯಮಾನವನ್ನು ಚಿತ್ರಿಸುವ ಅಪರೂಪದ ಕೃತಿ. ರಾಷ್ಟ್ರೀಯ ಸ್ವಾತಂತ್ರ್ಯಕ್ಕಾಗಿ, ಕಾರ್ಮಿಕರ, ಕೂಲಿಗಳ ಹಿತಕ್ಕಾಗಿ ಮತ್ತು ಪತ್ರಿಕಾ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಆದರ್ಶವಾದಿ ಯುವಕನೊಬ್ಬನ ಜೀವನದ ಸುತ್ತ ಹೆಣೆದ ಕತೆಯಿದು. ಈ ಕಾದಂಬರಿಯ ಕಾಲುಭಾಗವು ಉಡುಪಿ ಮತ್ತು ಪಕ್ಕದ ಹಳ್ಳಿಯಲ್ಲಿ ಮುಕ್ಕಾಲು ಪಾಲು ಮುಂಬೈಲ್ಲಿ ನಡೆದ ಘಟನೆಗಳನ್ನು ಒಳಗೊಂಡಿದೆ.

ಸ್ವಾತಂತ್ರ್ಯ ಹೋರಾಟದಲ್ಲಿ ಉತ್ಸಾಹದಿಂದ ಪಾಲ್ಗೊಂಡು ಜೈಲು ಶಿಕ್ಷೆಯನ್ನು ಅನುಭಸಿದ ಉಡುಪಿಯ ವಕೀಲ ಶ್ರೀಪತಿರಾಯ ತಮ್ಮ ಮಗಳು ಭಾರತಿಯನ್ನು ಬಡ ಗುಮಾಸ್ತನೊಬ್ಬನ ಮಗನಾದ ಅನಂತನಿಗೆ ಮದುವೆ ಮಾಡಿಕೊಡುತ್ತಾನೆ. ಮಾವನ ಮನೆಯವರ ಪ್ರೀತಿ–ವಾತ್ಸಲ್ಯದಿಂದ ಅನಂತನ ಕುಟುಂಬಕ್ಕೆ ಬಹಳ ಉಪಕಾರವಾಗುತ್ತದೆ. ತನ್ನ ಕೌಟುಂಬಿಕ ಕೆಲವು ಸಮಸ್ಯೆಗಳನ್ನು ಮಾವನಿಂದ ಬಗೆಹರಿಸಿಕೊಳ್ಳುತ್ತಾನೆ. ಅವನ ಕೃಪೆಯಿಂದ ಮುಂಬೈ ಶಹರಕ್ಕೆ ಹೋಗುತ್ತಾನೆ. ಅಲ್ಲಿಯೇ ನೆಲೆನಿಂತು ಕಾಂಗ್ರೆಸ್ ಸಂಸ್ಥೆಯ ಸದಸ್ಯನಾಗಿ, ಕಾರ್ಯಕರ್ತನಾಗಿ, ಮುಂಬೈ ಶಹರದ ಅನೇಕ ಕಾರ್ಮಿಕ ಒಗ್ಗಟ್ಟಿಗೆ ಶ್ರಮಿಸುತ್ತಾನೆ. ಮುಂದೊಂದು ದಿನ ಎಲ್ಲ ಕಾರ್ಮಿಕರು ಅವನನ್ನೇ ತಮ್ಮ ನಾಯಕನನ್ನಾಗಿ ಆಯ್ಕೆ ಮಾಡುತ್ತಾರೆ. ಇದರೊಂದಿಗೆ ಅವನ ಸ್ವಾತಂತ್ರ್ಯ ಚಳುವಳಿಗೆ ಮಹತ್ವವೂ ಕಲ್ಪಿಸುತ್ತದೆ. ಸ್ವತಃ ಪತ್ರಕರ್ತನಾದ ಅವನಿಗೆ ಅನೇಕ ವಿಚಾರಗಳನ್ನು ಬಿತ್ತರಿಸಲು ಸಹಾಯಕವಾಗುತ್ತದೆ. ತನ್ನ ಸ್ವಾತಂತ್ರ್ಯ ತುಡಿತವನ್ನು ಮತ್ತಷ್ಟು ವಿಸ್ತರಿಸಿಕೊಳ್ಳುವಲ್ಲಿ ಪತ್ರಿಕಾ ಕ್ಷೇತ್ರವು ಸಹಾಯಕವಾಗುತ್ತದೆ. ಈ ಮಧ್ಯೆ ಅವನಿಗೆ ತನ್ನ ಊರು ಉಡುಪಿಯಲ್ಲಿನ ಕುಟುಂಬದ ದೀನ ಸ್ಥಿತಿ ಕಾಡುತ್ತದೆ. ಕೌಟುಂಬಿಕ ಬಡತನ, ಸಹೋದರನ

ಗುಣವಾಗದ ರೋಗ ದೊಡ್ಡ ಸಮಸ್ಯೆಗಳಾಗಿ ಕಾಡುತ್ತವೆ. ಆದರೂ ಅವನಲ್ಲಿ ಸ್ವಾತಂತ್ರ್ಯ ಚಳುವಳಿಯ ಹಂಬಲ ಕಡಿಮೆಯಾಗದೇ ಮತ್ತಷ್ಟು ಚುರುಕುಗೊಳ್ಳುತ್ತದೆ.

ಆಳುವ ವರ್ಗ ಯಾವಾಗಲೂ ಆಳಲಿಚ್ಛಿಸುತ್ತದೆ. ದುಡಿಯುವ ವರ್ಗ ಯಾವಾಗಲೂ ದುಡಿಯುತ್ತಲೇ ಇರುತ್ತದೆ. ದುಡಿಯುವ ವರ್ಗ ಆಳುವವರನ್ನು ತುಳಿದು ನಿಂತಾಗ ಮಾತ್ರ ನಮ್ಮ ಹೊಸ ಸಮಾಜ ಸೃಷ್ಟಿಸಾಧ್ಯ ಎಂಬ ಮನೋಧೋರಣೆಯ ಅನಂತನಿಗೆ "ದೇಶಕ್ಕೆ ಸ್ವಾತಂತ್ರ್ಯವನ್ನು ದೊರಕಿಸಬೇಕೆಂದು, ವಿದ್ಯೆಗೆ ತಿಲಾಂಜಲಿ ಕೊಟ್ಟು ಸೆರೆಮನೆಗೆ ಹೋಗಿ ಮರಳಿದ ಯೋಧ ನೂರೈವತ್ತು ರೂಪಾಯಿಯ ಗುಲಾಮಗಿರಿಯನ್ನು ಒಪ್ಪಿಕೊಂಡೆಯಲ್ಲೋ ಎಂದು ಅನಂತನ ಹೃದಯ ಕೂಗುತ್ತದೆ." (ವ್ಯಾಸರಾಯ ಬಲ್ಲಾಳ, ೨೦೦೫, ಪುಟ-೧೧೮-೨೪೬.) ಎನ್ನುವಲ್ಲಿ ಕಾದಂಬರಿಕಾರರಿಗೆ ಅಂದಿನ ಯುವ ಪೀಳಿಗೆಯಲ್ಲಿ ಸ್ವಾತಂತ್ರ್ಯದ ತುಡಿತದ ಪ್ರಜ್ಞೆ ಹೇಗೆ ಕಾಡುತ್ತಿತ್ತು ಎಂಬ ಚಿತ್ರಣವನ್ನು ಕೊಡುತ್ತದೆ. ಸ್ವಾತಂತ್ರ್ಯ ಚಳುವಳಿಯಿಂದಾಗಿ ಯುವಕನೊಬ್ಬ ತನ್ನ ಕಾಲಕ್ಕೆ ಸ್ಪಂದಿಸುವ ವಿಭಿನ್ನ ಚಿಂತನೆಗಳನ್ನು ಮಾಡುತ್ತ ತನ್ನ ಕೌಟುಂಬಿಕ ಖಾಸಗಿ ಜೀವನವನ್ನು ಮತ್ತು ಸಾಮಾಜಿಕ ಜೀವನವನ್ನು ಎದುರಿಸುವ ಬಗೆ ಓದುಗನನ್ನು ಸೆಳೆಯುತ್ತದೆ. ಇಲ್ಲಿ ಕಾದಂಬರಿಕಾರರ ಪ್ರಗತಿಶೀಲ ಮನೋಭಾವ ವ್ಯಕ್ತವಾಗುತ್ತದೆ.

ಸ್ವಾತಂತ್ರ್ಯ ಚಳುವಳಿಯಲ್ಲಿ ಮೊದಲು ಉಡುಪಿಯಲ್ಲಿ ಪಾಲ್ಗೊಂಡು ನಂತರ ಮುಂಬೈಗೆ ಬಂದಾತ ಸಕ್ರಿಯವಾಗಿ ಚಳುವಳಿಯಲ್ಲಿ ಪಾಲ್ಗೊಂಡವನಿಗೆ, ಕೊನೆಗೆ ಮೌಂಟ್ ಬ್ಯಾಟನ್ ಯೋಜನೆಯನ್ನು ಕಾಂಗ್ರೆಸ್ ಒಪ್ಪಿದೆಯೆಂದು ತಿಳಿದಾಗ ಭ್ರಮನಿರಸನನಾಗಿ ಪಕ್ಷವನ್ನು ಬಿಡುತ್ತಾನೆ. ಆತ ಮಾಡುತ್ತಿದ್ದ ಇನ್ನೊಂದು ಕೆಲಸ ರಾಜೀವ, ಸೋಮಯಾಜಿ, ಶಂಕರಶೆಟ್ಟಿ ಇವರುಗಳೊಂದಿಗೆ ಸೇರಿ 'ಕಹಳೆ' ಸಾಪ್ತಾಹಿಕ ಪತ್ರಿಕೆಯನ್ನು ನಡೆಸುವುದರ ಜೊತೆಗೆ ಕಾರ್ಮಿಕ ಸಂಘಟನೆ ಮತ್ತು ಹೋರಾಟ ತೀವ್ರಗೊಳ್ಳುತ್ತದೆ. ಈ ಪತ್ರಿಕೆ ಮತ್ತು ಕಾರ್ಮಿಕ ಸಂಘಟನಾ ಕಾರಣಕ್ಕಾಗಿ ಎಷ್ಟೋ ಸಲ ವೈಯಕ್ತಿಕ ಸುಖ ಸಂತೋಷವನ್ನು ಬಲಿಕೊಡಬೇಕಾಗುತ್ತದೆ. ಇದು ಅವನ ಹೆಂಡತಿ ಮತ್ತು ಮಾವ ಇಬ್ಬರಿಗೂ ಬೇಸರ ತರುತ್ತದೆ. ಇದರಿಂದ ಪಾರಾಗಲು ಮುಂಬೈಗೆ ಬಂದು ಸಂಸಾರವನ್ನು ಹೂಡುತ್ತಾನೆ. ಅಲ್ಲಿಯೂ ಸಹ ಅವನಿಗೆ ಕುಟುಂಬದ ನೆರವು, ಹೆಂಡತಿಯ ಸಹಾಯ ಸಹಕಾರಗಳು ಕಡಿಮೆಯೇ ಮಾವನಾದ ವಕೀಲ ಶ್ರೀಪತಿರಾಯರ ಬೆಂಬಲವು ಹೋರಾಟಕ್ಕೆ ಇದ್ದರೂ ಅದನ್ನು ವಿರೋಧಿಸುವ ಮನೋಭಾವದ ಮಗಳು ಭಾರತಿಯಲ್ಲಿರುತ್ತದೆ. ಮಾವ ಒಂದು ಕಡೆ ನಿಮ್ಮಂಥವರು 'ಪಾಲಿಟಿಕ್ಸ್ ಬಗ್ಗೆ ವಿಚಾರ ಮಾಡುವುದರಿಂದ ದೇಶದ ಉದ್ಧಾರವಾಗುತ್ತದೆ' ಎಂದು ಹುರುದುಂಬಿಸಿದರೆ; ಅದಕ್ಕೆ ಅವರ ಮಗಳು 'ದೇಶ ಉದ್ಧಾರವಾಗಬಹುದು, ಆದರೆ ಮನೆ ಹಾಳಾದರೆ?' ಎಂದು ಪ್ರಶ್ನಿಸುತ್ತಾಳೆ. ಈ

ರೀತಿಯ ವೈರುಧ್ಯಗಳ ಮಧ್ಯೆ ಕುಟುಂಬ-ಸಮಾಜ, ದೇಶ-ಮನೆ, ಆದರ್ಶ-ವಾಸ್ತವಗಳನ್ನು ಗೆಲ್ಲುವ ತವಕ ಅನಂತನಲ್ಲಿ ಚಿತ್ರಣಗೊಂಡಿದೆ.

ಅನಂತನ ಪತ್ರಿಕೆ 'ಕಹಳೆ' ಕುರಿತು ಇಲ್ಲಿ ಹೇಳಲೇಬೇಕೆನಿಸುತ್ತದೆ. ಯಾವುದೇ ಪತ್ರಕರ್ತನಿಗೆ, ಸಂಪಾದಕನಿಗೆ ತನ್ನ ಪತ್ರಿಕೆಯ ಉದ್ದೇಶ, ಗುರಿ ಬಹು ಮುಖ್ಯವೆನಿಸುತ್ತದೆ. ತನ್ನ ಪತ್ರಿಕೆಯು "ರಾಜಕೀಯ ಸ್ವಾತಂತ್ರ್ಯದ ಸಾಧನವಾಗಿ ಬಾಪೂ ಬಂದರು. ತಮ್ಮ ಉದ್ದೇಶ ಸಾಧಿಸಿ, ಅದಕ್ಕಿಂತಲೂ ಪವಿತ್ರವಾದ ಕೋಮುವಾರು ಶಾಂತಿಯ ಇನ್ನೊಂದು ಉದ್ದೇಶ ಕಾರ್ಯಕ್ಷೇತ್ರದಲ್ಲಿ ಮಡಿದರು. ಆದರೆ ಇವರಿಂದಾಗಿ ದೇಶ, ಸ್ವಾತಂತ್ರ್ಯ, ಕಾಂಗ್ರೆಸ್- ಇವೆಲ್ಲ ಒಡೆಯಬಹುದು ಎಂಬರ್ಥದ ಮಾತುಗಳನ್ನು ಬರೆದು ನಿರಾಶೆಯ ಅಂಧಕಾರವನ್ನು ಓದುಗರ ಮುಂದಿಡುವುದು 'ಕಹಳೆ'ಯ ಕರ್ತವ್ಯವೆಂದು ನಾನು ತಿಳಿದಿಲ್ಲ" (ವ್ಯಾಸರಾಯ ಬಲ್ಲಾಳ, ೨೦೦೫, ಕೊನೆ ಪುಟ) ಎಂದು ಕಹಳೆ ಪತ್ರಿಕೆಯ ಮೂಲ ಉದ್ದೇಶವನ್ನು ಎತ್ತಿ ಹಿಡಿಯುತ್ತಾನೆ. ಅವನಿಗೆ ದುಡಿಯುವ ವರ್ಗದ ಸಮಸ್ಯೆಗಳಿಗೆ ಪರಿಹಾರವನ್ನು ಒದಗಿಸುವಲ್ಲಿ ಇದು ಸಹಾಯಕವಾಗಬೇಕೆನ್ನುವ ತುಡಿತವನ್ನು ಕಾಣಬಹುದು.

ಮುಂಬೈಯಲ್ಲಿ ಮಾವ ಶ್ರೀಪತಿರಾಯನಿಗೆ ಕಾಂಗ್ರೆಸ್ ಮುಖಂಡರನಾದ ನಾಗೇಶರಾಯ ಆತ್ಮೀಯನಾಗಿರುತ್ತಾನೆ. ಅನಂತನಿಗೆ ನಾಗೇಶರಾಯನ ಶ್ರೀಮಂತ ಕೈಗಾರಿಕೋದ್ಯಮಿ ತಲಪಾಡಿಯವರ ಮಗಳು ಇಂದಿರೆಯ ಪರಿಚಯವಾಗುತ್ತದೆ. ಇವಳಿಗೆ ಮದುವೆಯಾಗಿ ಹೊಸದರಲ್ಲಿ ಗಂಡ ತೀರಿಹೋಗಿರುತ್ತಾನೆ. ವಿಧವೆಯಾದ ಇಂದಿರೆಯ ಆತ್ಮೀಯತೆ ಹೆಚ್ಚಾಗಿ ಅವಳಲ್ಲಿ ಅನಂತನಿಗೆ ಪ್ರೀತಿ ಹುಟ್ಟುತ್ತದೆ. ಅವಳಿಗೆ ಅನಂತನ ಪತ್ರಿಕೆ 'ಕಹಳೆ'ಯ ಬಗ್ಗೆ ಅಪಾರವಾದ ಒಲವು ಇರುತ್ತದೆ. ಆದರೆ ಅನಂತನ ಇತ್ತೀಚಿನ ನಡವಳಿಕೆ ಮತ್ತು ತನ್ನೊಂದಿಗಿನ ಸಲಗೆಯಿಂದ ತನ್ನ ಸ್ನೇಹವನ್ನು ಅಪಾರ್ಥವಾಗಿ ಮಾಡಿದ್ದನ್ನು ಅರಿತು ಅವನಿಂದ ದೂರ ಸರಿಯಲು ಯತ್ನಿಸುತ್ತಾಳೆ. ತನ್ನ ಗಂಡ ರಾಜೀವನ ನೆನಪು ಕಾಡುತ್ತಿರುತ್ತದೆ. ಏತನ್ಮಧ್ಯೆ ಸ್ವತಂತ್ರ ಭಾರತದಲ್ಲಿ ಅನೇಕ ಘಟನೆಗಳು, ಗಾಂಧೀಜಿಯ ಸಾವು ಮುಂತಾದವು ಸಂಭವಿಸುತ್ತವೆ. ಇವುಗಳ ಪ್ರಭಾವ ಅನಂತನಲ್ಲಿ ಹೋರಾಟದ ಸ್ವರೂಪಗಳು ಎಚ್ಚೆತ್ತುಗೊಳ್ಳುತ್ತದೆ.

ಕಾರ್ಮಿಕ ಸಂಘರ್ಷದಿಂದ ಆತ ಕೆಲಸ ಕಳೆದುಕೊಳ್ಳುತ್ತಾನೆ. ಮುಷ್ಕರದ ನಿಮಿತ್ತ ಜೈಲುವಾಸ ಅನುಭವಿಸಬೇಕಾಗುತ್ತದೆ. ಅವನ ಮತ್ತು ಇಂದಿರೆಯ ಸ್ನೇಹವನ್ನು ಸಂದೇಹಿಸಿದ ಹೆಂಡತಿ ಭಾರತಿಯಲ್ಲಿ ಮನಸ್ತಾಪ ಉಂಟಾಗುತ್ತದೆ. ಗರ್ಭಿಣಿಯಾಗಿದ್ದ ಹೆಂಡತಿಗೆ ಹೆರಿಗೆಯ ಸಲುವಾಗಿ ತಂದೆಯೊಡನೆ ತವರಿಗೆ ಹೋಗುತ್ತಾಳೆ. ಇತ್ತ ರಾಜೀವ ಜ್ವರದ ಬಾಧೆಗೆ ಒಳಗಾದವನು ಶುಶ್ರೂಷೆ ಇಲ್ಲದೆ ಸಾಯುವನು. ಅನಂತ ಇಂದಿರೆಯಲ್ಲಿ ತನ್ನ ಪ್ರೇಮವನ್ನು

ತೋಡಿಕೊಂಡು ಅವಳ ಅವಕೃಪೆಗೆ ಒಳಗಾಗುವನು. ಮುಂದೆ ತನ್ನ 'ಕಹಳೆ' ಪತ್ರಿಕೆಗೆ ಆರ್ಥಿಕ ಸಹಾಯವಿಲ್ಲದೆ ಪತ್ರಿಕೆಯೂ ನಿಂತುಹೋಗುತ್ತದೆ. ಇಷ್ಟರಲ್ಲಿ ಭಾರತಿಗೆ ಗಂಡುಮಗು ಹುಟ್ಟುತ್ತದೆ. ಅನಂತನಿಗೆ ತನ್ನ ದುಡುಕಿನಿಂದ ಸ್ನೇಹಿತೆ ಇಂದಿರೆಯ ಸ್ನೇಹವನ್ನು ಕಳೆದುಕೊಂಡಿದ್ದರಿಂದ ಅವಳಲ್ಲಿ ಕ್ಷಮೆಯನ್ನು ಯಾಚಿಸಿ ತನ್ನ ತಪ್ಪನ್ನು ಒಪ್ಪಿಕೊಂಡು ಅವಳ ಸ್ನೇಹವನ್ನು ಮತ್ತೆ ಗಳಿಸಲು ಅಲ್ಲಿ ಕ್ಷಮೆ ಕೇಳಲು ಹೊರಟಾಗ ಆಕಸ್ಮಕವಾಗಿ ರೈಲು ಅವಘಡವಾಗಿ ಅಲ್ಲಿಯೇ ಸಾವನ್ನಪ್ಪುತ್ತಾನೆ. ಹೀಗೆ 'ಹೇಮಂತಗಾನ'ದ ಕಥೆಯು ಯುವಕನೊಬ್ಬನ ಆದರ್ಶತೆ, ಹೋರಾಟದ ಮನೋಭಾವ, ಕೌಟುಂಬಿಕ ತುಡಿತ, ಪ್ರೇಮದ ವ್ಯಥೆಯೊಂದಿಗೆ ಕೊನೆಗೊಳ್ಳುತ್ತದೆ.

"ಶಹರದ ನೂರಾರು ಟ್ರೇಡ್ ಯೂನಿಯನ್ ಕಾರ್ಯಕರ್ತರು ಅಂತಿಮ ದರ್ಶನಕ್ಕಾಗಿ ಬಂದಿದ್ದರು. ಅನಂತ ತೀರಿಕೊಳ್ಳುವುದಕ್ಕೆ ಒಂದು ತಿಂಗಳು ಮುಂಚಿತವಾಗಿ ತೀರಿಕೊಂಡಿದ್ದ 'ಕಹಳೆ'ಯ ಬಳಗವಿಡೀ ಅಲ್ಲಿ ನೆರೆದಿತ್ತು. ಪತ್ರಿಕೆಯನ್ನು ಪ್ರೀತಿಸುತ್ತಿದ್ದ ಸಾವಿರಾರು ವಿದ್ಯಾರ್ಥಿಗಳು ಮೊದಲ ಬಾರಿಗೆ ಕುರ್ಲಾ ಸ್ಮಶಾನಕ್ಕೆ ಬಂದಿದ್ದರು. ಅನಂತನ ಅಂತಿಮ ದರ್ಶನಕ್ಕಾಗಿ. ಇಷ್ಟೆಲ್ಲ ಜನರ ಪರಿಚಯ, ಸ್ನೇಹ ಆದರಗಳನ್ನು ಗಳಿಸಿದ್ದ ಅನಂತ ಕೊನೆಯ ಗಳಿಗೆಯಲ್ಲಿ ಏಕಾಕಿ!" ಎನ್ನುವ ಮಾತುಗಳಲ್ಲಿ ಒಬ್ಬ ಹೋರಾಟಗಾರನಲ್ಲಿನ ಏಕಾಂಗಿತನವು ಮಾಯವಾಗಿ ದೇಶದ ಪ್ರತಿನಿಧಿಯಂತೆ, ಮಹಾನ್ ಚೇತನನಂತೆ ಶೋಭಿಸುತ್ತಾನೆ ಅನಂತ. ಆ ಜನ ಸಮೂಹದಲ್ಲಿದ್ದ ಒಬ್ಬಳೇ ಒಬ್ಬ ಮಹಿಳೆ ಇಂದಿರಾ "ಸೋಮಯಾಜಿಗಳು ಚಿತೆ ಹಚ್ಚಿದಾಗ ಬಿಕ್ಕಿ ಬಿಕ್ಕಿ ಅಳುತ್ತಿದ್ದುದು ಆಕೆ ಒಬ್ಬಳೇ. ಆ ಚಿತೆಯಲ್ಲಿ ಆಕೆಗೆ ಕಾಣಿಸುತ್ತಿದ್ದುದು ಹೋಳು ಹೋಳಾದ ಅನಂತನ ದೇಹವಷ್ಟೇ ಅಲ್ಲ– ಒಂದು ಆದರ್ಶದ ಹೋರಾಟದ ಹಿನ್ನೆಲೆಯಲ್ಲಿ ಪ್ರಕಟವಾದ ಸಾವಿನ ಪರಂಪರೆ" ಎಂದು ಹೇಳುವಾಗ ಲೇಖಕರು ಸ್ವಾತಂತ್ರ್ಯ ಹೋರಾಟದಲ್ಲಿ ಮಡಿದವರ ಸಾಲಿನಲ್ಲಿ ಅನಂತನನ್ನೂ ಸೇರಿಸುತ್ತದೆ. ಅಲ್ಲದೆ ಹೋರಾಟದ ವಿಭಿನ್ನ ಮುಖಗಳನ್ನೂ ತೋರಿಸುತ್ತದೆ.

ಹೇಮಂತಗಾನ ಕುರಿತು ಕನ್ನಡ ಸಾಹಿತ್ಯ ವಲಯವು ವಿಮರ್ಶಾತ್ಮಕವಾಗಿ ನೋಡಿದೆ. ಎಲ್.ಎಸ್. ಶೇಷಗಿರಿರಾವ್ ಅವರು– "ಬಲ್ಲಾಳರು ಸೃಷ್ಟಿಸುವ ಜಗತ್ತಿನ ಗಾಳಿಯಲ್ಲಿ ಬೆರೆತುಹೋಗಿದೆ ಅನುಕಂಪ. ಥಿಯರಿಗಳನ್ನವಲಂಬಿಸದ ಮಾನವೀಯತೆ ತಾನೇ ತಾನಾಗಿ ಈ ಜಗತ್ತನ್ನು ತುಂಬಿದೆ. ಸಂಯಮದ ಶೈಲಿ ಈ ಮಾನವೀಯತೆ ತಾನಾಗಿ ಪರಿಣಾಮವನ್ನುಂಟು ಮಾಡಲು ಅವಕಾಶ ನೀಡುತ್ತದೆ. ವ್ಯಕ್ತಿಗಳ ಜೀವನಕ್ಕೆ ಆವರಣವಾದ ಸಮಾಜ ಇಲ್ಲಿ ಜೀವಂತವಾಗಿದೆ... ವ್ಯಕ್ತಿ ಸಮಾಜಗಳ ಪರಸ್ಪರ ಪ್ರಭಾವ ಪ್ರಕ್ರಿಯೆಗಳು ಕಣ್ಣ ಮುಂದೆ ಮೈತಾಳಿ ನಿಲ್ಲುತ್ತವೆ... ಸ್ವಾತಂತ್ರ್ಯೋತ್ತರ ಕನ್ನಡ ಕಾದಂಬರಿಗಳ ಪ್ರಥಮ ಪಂಕ್ತಿಯಲ್ಲಿ ನಿಲ್ಲುತ್ತದೆ ಈ ಕಾದಂಬರಿ....(ವ್ಯಾಸರಾಯ ಬಲ್ಲಾಳ, ೨೦೦೫, ಕೊನೆ ಪುಟ) ಎಂದು ಹೇಳುತ್ತಾರೆ. ಹಾ.ಮಾ.

ನಾಯಕರು– "ಬಡತನ–ಆದರ್ಶ–ಹೋರಾಟಗಳು ಮುಪ್ಪುರಿಗೊಂಡ ಈ ಕಾದಂಬರಿ ಓದುಗರನ್ನು ಆಕರ್ಷಿಸುತ್ತದೆ. 'ಅನುರಕ್ತೆ'ಯಲ್ಲಿ ತಾವು ಮರೆದು ಮನಸ್ಸಿನೊಳಗಿನ ಹೋರಾಟದ ಎಳೆಯನ್ನು ಇಲ್ಲಿ ಉದ್ದಕ್ಕೂ ಎಳೆದಿದ್ದಾರೆ. ಇದರ ಜೊತೆ ಜೊತೆಯಾಗಿ ನಮ್ಮ ನಾಡಿನ ಸ್ವಾತಂತ್ರ್ಯ ಸಂಗ್ರಾಮದ ಕತೆಯೂ ಬೆರೆತಿದೆ. ಒಂದು ದೃಷ್ಟಿಯಿಂದ ಆ ವಸ್ತ್ರದ ಮೇಲೆಯೇ ಇಲ್ಲಿ ಕಥೆಯ ಹೂವನ್ನು ಹೆಣೆಯಲಾಗಿದೆ" (ಸುರೇಶ ಪಾಟೀಲ, ೨೦೦೮, ಪುಟ–೧೦೨.) ಎಂದು ಸ್ವಾತಂತ್ರ್ಯ ಹೋರಾಟದ ವಸ್ತುವೇ ಕಾದಂಬರಿಯನ್ನು ಕಟ್ಟಲು ಕಾರಣವೆನ್ನುತ್ತಾರೆ.

ಸ್ವಾತಂತ್ರ್ಯಕ್ಕೆ ನಡೆದ ಹೋರಾಟ, ಹೋರಾಟದಲ್ಲಿ ನಿಜವಾಗಿ ಪಾಲ್ಗೊಂಡವರು ದೇಶಕ್ಕೆ ಸ್ವಾತಂತ್ರ್ಯ ಸಿಕ್ಕ ಸಮಯದಲ್ಲಿ ಮೂಲೆಗುಂಪಾಗಿ ಬೇರೆಯವರು ಅಧಿಕಾರ ಸ್ಥಾನವನ್ನು ಆಕ್ರಮಿಸುವ ಬಗೆ ಇದು ಒಂದು ನೆಲೆಯಾದರೆ, ರಾಜಕೀಯ ಸ್ವಾತಂತ್ರ್ಯದ ಜೊತೆಗೆ ಆರ್ಥಿಕ ಸ್ವಾತಂತ್ರ್ಯವೂ ಅನಿವಾರ್ಯ ಎಂಬ ನೆಲೆಯನ್ನು ನಾಯಕ ಅನಂತ ಕಂಡುಕೊಳ್ಳುತ್ತಾನೆ. ಅದಕ್ಕಾಗಿ ಹೋರಾಡುವದು ಅವನಿಗೆ ಅನಿವಾರ್ಯವಾಗಿರುವುದು ಇಲ್ಲಿ ಚಿತ್ರಿತವಾಗಿದೆ. ಮೊದಲ ನೆಲೆಯಲ್ಲಿ ಹೋರಾಟ ಬ್ರಿಟೀಷರ ವಿರುದ್ಧವಾದರೆ, ಎರಡನೇ ನೆಲೆಯಲ್ಲಿ ದೇಶೀಯ ಮಾಲೀಕರ ವಿರುದ್ಧ. ಆಂಭದಲ್ಲಿ ಸಮಸ್ಯೆ–ಆರ್ಥಿಕ ಸಮಸ್ಯೆಯ ವಿರುದ್ಧ ಹೋರಾಟಕ್ಕಾಗಿ ಅಣಿಯಾಗುತ್ತಾ ತಮ್ಮ ಪ್ರಾಣವನ್ನು ತೆತ್ತ ಕೇಶವ, ರಾಜೀವ ಈಗ ಅನಂತ ಅಮರರಾಗಿ ಹೇಮಂತಗಾನವಾಗಿ ಸಹೃದಯರಲ್ಲಿ ಮಿಡಿಯುತ್ತಾರೆ.

**ಚದುರಂಗ ಅವರ ಸ್ವಾತಂತ್ರ್ಯ ನಂತರದ ಕಾದಂಬರಿಗಳಲ್ಲಿನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು**

'ಚದುರಂಗ' ಕಾವ್ಯನಾಮದಿಂದ ಪ್ರಸಿದ್ಧರಾದ ಎಂ.ಸುಬ್ರಹ್ಮಣ್ಯ ರಾಜೇ ಅರಸು ಕನ್ನಡದ ಮಹತ್ವದ ಲೇಖಕರು; ಶ್ರೇಷ್ಠ ಕಾದಂಬರಿಕಾರರು ಮಾತ್ರವಲ್ಲದೇ ಸಾಂಪ್ರದಾಯಿಕ ವ್ಯವಸ್ಥೆಯ ಜನವಿರೋಧಿ ಆಚಾರ–ವಿಚಾರಗಳನ್ನು ತಮ್ಮ ಬದುಕು ಬರಹದಲ್ಲಿ ವಿರೋಧಿಸುತ್ತ ದುರ್ಬಲರ ದನಿಯಾಗಿ ಬದುಕಿದ ಬಂಡಾಯಗಾರರೂ, ಪ್ರಗತಿಶೀಲರೂ ಹೌದು. ಕನ್ನಡ ನಾಡಿನಲ್ಲಿ ವಸಾಹತು ವಿರೋಧಿ ವೈಚಾರಿಕ ಅಲೆಗಳು, ಸ್ವಾತಂತ್ರ್ಯ–ಸಮಾನತೆಯ ಹೊಸ ಗಾಳಿ, ಬೆಳಕು ತುಂಬಿಕೊಳ್ಳುತ್ತಿದ್ದ ನವೋದಯದ ಸಂದರ್ಭದಲ್ಲಿ ಹುಟ್ಟಿ ಬೆಳೆದ ಚದುರಂಗರು ಸಾಹಿತ್ಯ ಮತ್ತು ಬದುಕನ್ನು ಗಾಢವಾಗಿ ತಬ್ಬಿಕೊಂಡ ಮಾನವತಾವಾದಿ ಲೇಖಕರು. ರಾಜಮನೆತನದ ಶ್ರೀಮಂತ ಹಿನ್ನೆಲೆ ಹೊಂದಿದ್ದರೂ ಸರಳ ಬದುಕನ್ನು ಆಯ್ದುಕೊಂಡ ಆದರ್ಶವಾದಿಗಳು.

ಬಹುಪಾಲು ಪ್ರಗತಿಶೀಲ ಸಾಹಿತಿಗಳ ಪ್ರಮುಖ ಅಭಿವ್ಯಕ್ತಿಯ ಪ್ರಕಾರ ಕಾದಂಬರಿ. ಭಾರತೀಯ ಸಮಾಜದ ಜಾತಿ, ಲಿಂಗ, ವರ್ಗ ಭೇದಗಳನ್ನು, ಅಜ್ಞಾನ, ಬಡತನ,

ಅಸ್ಪೃಶ್ಯತೆಯನ್ನು ಮತ್ತು ಗ್ರಾಮೀಣ ದೇಸೀ ಸಂಸ್ಕೃತಿಯ ಒಳನೋಟಗಳನ್ನು ದಟ್ಟವಾಗಿ ಚಿತ್ರಿಸುವ ನಾಲ್ಕು ಕಾದಂಬರಿಗಳನ್ನು ರಚಿಸಿದ ಚದುರಂಗರು ಕನ್ನಡದ ಬಹುಮುಖ್ಯ ಗದ್ಯ ಲೇಖಕರಾಗಿ, ಕಾದಂಬರಿಕಾರರಾಗಿ ಅನನ್ಯರೆನಿಸಿದ್ದಾರೆ. ಸರ್ವಮಂಗಳಾ, ವೈಶಾಖ, ಹೆಜ್ಜಾಲ, ಉಯ್ಯಾಲೆ ಚದುರಂಗರ ಗ್ರಾಮೀಣ ಬದುಕಿನ ಗಾಢ ಅನುಸಂಧಾನದ ಫಲರೂಪಿ ರಚನೆಗಳು. ಬಾಲ್ಯ ಮತ್ತು ತಾರುಣ್ಯವನ್ನು ಕಲ್ಲಹಳ್ಳಿಯ ಅಚ್ಚ ದೇಸಿ ಪರಿಸರದಲ್ಲಿ ಕಳೆದು, ಸಮಷ್ಟಿ ಸಂಸ್ಕೃತಿಯನ್ನು ನಿಕಟವಾಗಿ ನೋಡಿ ಅನುಭವಿಸಿದ ಚಿತ್ರಣಗಳನ್ನು ತಮ್ಮ ಕಾದಂಬರಿಗಳಲ್ಲಿ ಕೊಡುತ್ತಾರೆ. ಬಡವರ ಘನತೆಯನ್ನು, ಸ್ತ್ರೀಯರ ಸಮಸ್ಯೆಗಳನ್ನು, ಮನುಷ್ಯ ಸಹಜ ಪ್ರವೃತ್ತಿಗಳ ಅಗಾಧ ಶಕ್ತಿಯನ್ನು ಚೆನ್ನಾಗಿ ಮನಗಂಡಿದ್ದಾರೆ.

ತಮ್ಮ ಬರಹದಲ್ಲಿ ತೋರಿದ ಶುಚಿ–ರುಚಿ ಸ್ವಾತಂತ್ರ್ಯವನ್ನು ತಮ್ಮ ಬದುಕಿನಲ್ಲಿಯೂ ಅಳವಡಿಸಿಕೊಂಡಿದ್ದ ಚದುರಂಗರು ಕನ್ನಡ ಸಾಹಿತ್ಯ ಲೋಕದ ವಿಶೇಷ ಮನ್ನಣೆಗೆ ಪಾತ್ರರಾಗಿದ್ದಾರೆ. ಬರಹಕ್ಕಿಂತ ಬದುಕು ದೊಡ್ಡದು ಎಂದು ನಂಬಿ ಬರೆದು, ಬರವಣಿಗೆಯಲ್ಲಿ ಆತ್ಮಸುಖವನ್ನು ಅನುಭವಿಸಿದ ಚದುರಂಗರು ನವೋದಯದ ಉದಾರ ಮಾನವತಾವಾದಿ ಆದರ್ಶಗಳಿಂದ ಪ್ರೇರಿತವಾಗಿ ಬರಹ ಲೋಕ ಪ್ರವೇಶಿಸಿದರು. ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಂಡ ವಿಭಿನ್ನ ವೈಚಾರಿಕ, ಸಾಂಸ್ಕೃತಿಕ ಕಾಳಜಿಗಳನ್ನು ಸಮಚಿತ್ತದಿಂದ ಗ್ರಹಿಸಿದರು. ಪ್ರಗತಿಶೀಲ ಲೇಖಕರ ಸಾಮಾಜಿಕ ಕಾಳಜಿ ಮತ್ತು ಪ್ರಗತಿಪರ ಧೋರಣೆಗಳಿಗೆ ಆಕರ್ಷಿತರಾದರು. ಕಾದಂಬರಿ ಪ್ರಕಾರದಲ್ಲಿ ಉದಾರ ಮಾನವಾಸಕ್ತಿಗಳನ್ನು ಅರ್ಥಪೂರ್ಣವಾಗಿ ಅಭಿವ್ಯಕ್ತಿಸಿ, ಸಾಹಿತ್ಯ ಲೋಕದಲ್ಲಿ ವಿಶಿಷ್ಟರೆನಿಸಿದರು. ಪ್ರಸ್ತುತ ಅವರ "ಸರ್ವಮಂಗಳ" ಕಾದಂಬರಿಯಲ್ಲಿ ವ್ಯಕ್ತವಾದ ಸ್ವಾತಂತ್ರ್ಯ ಹೋರಾಟದ ವಸ್ತುವನ್ನೇ ಇನ್ನಷ್ಟು ವಿಸ್ತೃತವಾಗಿ ಬಹುಮುಖವಾಗಿ, ಆದರ್ಶವಾದ ಭಾವನಾಮಯವಾಗಿ ವರ್ಣಿಸಿರುವುದನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

**ಸರ್ವಮಂಗಳ (೧೯೫೦)**

ಪ್ರಸ್ತುತ ಕಾದಂಬರಿ ಮೂಲತಃ ಪ್ರಣಯ ದುರಂತದ ಕಥೆ. ಈ ಕಥೆಗೆ ಹಿನ್ನೆಲೆಯಾಗಿ ಸ್ವಾತಂತ್ರ್ಯ ಚಳುವಳಿ ಮತ್ತು ಸಮತಾವಾದಿ ಕಾರ್ಮಿಕ ಹೋರಾಟದ ದೃಶ್ಯವಿದೆ. ಕಾದಂಬರಿಯ ಕೇಂದ್ರ ಪಾತ್ರ ನಟರಾಜ ಮೈಸೂರಿಗೆ ಓದಲು ಹೋದ ಸಮಯದಲ್ಲಿ ೧೯೩೦ರ ಗಾಂಧೀಜಿಯ ದಂಡಿ ಸತ್ಯಾಗ್ರಹವು ನಡೆಯುತ್ತದೆ. ಅದರ ಜ್ವಾಲೆ ಭಾರತದ್ಯಾಂತ ಹರಡಿಕೊಳ್ಳುತ್ತದೆ. ಕರ್ನಾಟಕದ ಹಲವು ಕಡೆ ಗಾಂಧೀಜಿಯ ದಂಡೀ ಯಾತ್ರೆಗೆ ಬೆಂಬಲಿಸಿ ಹರತಾಳಗಳು

ನಡೆಯುತ್ತವೆ. ಮೈಸೂರಿನಲ್ಲಿ ಇದರ ಕಾವು ಹೆಚ್ಚಾಗತೊಡಗುತ್ತದೆ. ಅದರ ಪ್ರಭಾವಕ್ಕೆ ನಟರಾಜನೂ ಒಳಗಾಗುತ್ತಾನೆ.

ಮೈಸೂರಿನಲ್ಲಿ ನಡೆದ ಗಾಂಧೀಜಿಯವರ ದಂಡೀ ಸತ್ಯಾಗ್ರಹಕ್ಕೆ ಪ್ರೇರಿತರಾಗಿ ಅನೇಕ ಹೋರಾಟಗಾರರು ಚಳುವಳಿಯನ್ನು, ಮೆರವಣಿಗೆಯನ್ನು ಮಾಡುತ್ತಾರೆ. ಇದನ್ನು ತಡೆಗಟ್ಟಲು ಪೋಲೀಸರು ಲಾಠಿಚಾರ್ಜ ಮಾಡುತ್ತಾರೆ. ಈ ಚಳುವಳಿಯಲ್ಲಿ ಭಾಗವಹಿಸಿದ ನಟರಾಜನು ಪೋಲೀಸರ ಲಾಠಿ ರುಚಿಯನ್ನು ನೋಡಬೇಕಾಗುತ್ತದೆ. ಅಂದಿನಿಂದ ಅವನಿಗೆ ಬ್ರಿಟೀಷರ್ ವಿರುದ್ಧ ಪರಿಣಾಮಕಾರಿಯಾದ ಹೋರಾಟವನ್ನು ಮಾಡಲು ಸಿದ್ಧನಾಗುತ್ತಾನೆ. ಇವನು ಚಳುವಳಿಯಲ್ಲಿ ಭಾಗವಹಿಸುವುದು ಅವರ ಸಂಬಂಧಿ ಶ್ರೀಕಂಠಯ್ಯ ಮಾವನಿಗೆ ನಟರಾಜ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕುವುದು ಇಷ್ಟವಿರಲಿಲ್ಲ. ಇವನ ವಿರೋಧದ ನಡುವೆಯೂ ನಟರಾಜನು ಗಾಂಧೀಜಿಯವರ ಆದರ್ಶಗಳಿಗೆ ಬೆಲೆಕೊಟ್ಟು ಚಳುವಳಿಯಲ್ಲಿ ಭಾಗಿಯಾಗುತ್ತಾನೆ.

ಮಾವನ ಮಗಳು ಮಂಗಳೆಯನ್ನು ಮದುವೆಯಾಗಬೇಕೆಂದುಕೊಂಡಿದ್ದ ನಟರಾಜನಿಗೆ ಸ್ವಾತಂತ್ರ್ಯ ಚಳುವಳಿ ಅಡ್ಡಾಗುತ್ತದೆ. ಮಾವ ಶ್ರೀಕಂಠಯ್ಯ ಮಗಳನ್ನು ಮದುವೆ ಮಾಡಿಕೊಡಲು ಒಪ್ಪುವುದಿಲ್ಲ. ಇದಾದ ನಂತರ ನಟರಾಜ ಬಿರುಸಾಗಿ ನಡೆಯುತ್ತಿರುವ ಕಾಂಗ್ರೆಸ್ ಚಳುವಳಿಯಲ್ಲಿ ಭಾಗವಹಿಸಿ ಕಾಂಗ್ರೆಸ್ ಸದಸ್ಯನೂ ಆಗುತ್ತಾನೆ. ೧೯೩೧ರಲ್ಲಿ ನಡೆದ ಲಾಠಿಚಾರ್ಜ್ ಸಮಯದಲ್ಲಿ ಪೂರ್ಣ ಗಾಂಧೀವಾದಿಯಾಗಿರುವ ಅವನು ಸಬ್ ಇನ್ಸ್‌ಪೆಕ್ಟರ್‌ನೊಂದಿಗೆ ಕೈ ಕೈ ಮಿಲಾಯಿಸಿಬಿಟ್ಟಿದ್ದರಿಂದ ಜೈಲು ಶಿಕ್ಷೆಗೆ ಗುರಿಯಾಗಬೇಕಾಗುತ್ತದೆ. ಜೈಲುವಾಸದಿಂದ ಬಿಡುಗಡೆ ಹೊಂದುವುದರೊಳಗಾಗಿ ಮಂಗಳೆ ಅವನ ಕೈ ತಪ್ಪಿ ಹೋಗುತ್ತಾಳೆ.

ಬಂಧಿಖಾನೆಯಲ್ಲಿದ್ದ ಸಮಯದಲ್ಲಿ ಮಾರ್ಕ್ಸ್‌ವಾದಿ ಶ್ರೀಧರ್ ಎಂಬುವವನ ಪರಿಚಯವಾಗುತ್ತದೆ. ಅವನ ಪ್ರಗತಿಶೀಲ ವಿಚಾರಾಧಾರೆಗಳು ನಟರಾಜನಿಗೆ ಪ್ರೇರಿತವಾಗುತ್ತವೆ. ಇದರಿಂದ ಗಾಂಧೀವಾದದ ಬಗೆಗೆ ಅವನ ನಂಬಿಕೆ ಕ್ಷೀಣಿಸುತ್ತದೆ. ಅಲ್ಲದೆ ಮಾರ್ಕ್ಸ್‌ವಾದದ ವಿಚಾರಗಳ ಹೆಚ್ಚಿನ ಅಧ್ಯಯನವನ್ನು ಮಾಡಿ ತನ್ನ ಹೋರಾಟದ ರೂಪವನ್ನು ಬದಲಿಸಿಕೊಳ್ಳುತ್ತಾನೆ. ತಾನು ಗಾಂಧೀಜಿಯವರ ಅಹಿಂಸೆಯ ಪಾಲಕನಾಗಿ, ಅವರ ಆದರ್ಶಗಳಿಗೆ ಬದ್ಧನಾಗಿ ನಡೆದುಕೊಳ್ಳುವ ಬದಲು ರಾಜಕೀಯ ಸ್ವಾತಂತ್ರ್ಯ ಮತ್ತು ಅರ್ಥಿಕ ಸ್ವಾತಂತ್ರ್ಯ ಎರಡೂ ಮುಖ್ಯ ಎನ್ನುವ ನೆಲೆಯಲ್ಲಿ ಹೋರಾಟ ಪ್ರಾರಂಭಿಸುತ್ತಾನೆ. ಮಾರ್ಕ್ಸ್‌ವಾದದ ತಿಳುವಳಿಕೆಯಿಂದ ಕಮ್ಯುನಿಸ್ಟ್ ಧೋರಣೆಗಳನ್ನು ಅಳವಡಿಸಿಕೊಳ್ಳುತ್ತಾನೆ. ಕೂಲಿ ಕಾರ್ಮಿಕರ ಪರವಾಗಿ ಸಿಡಿದೇಳುತ್ತಾನೆ. ಶೋಷಿತ ಕಾರ್ಮಿಕರ ಮುಖಂಡನಾಗಿ ಬ್ರಿಟೀಷರ ವಿರುದ್ಧ ಹೋರಾಡುತ್ತಾನೆ.

೧೯೫೦ರಲ್ಲಿ ಪ್ರಕಟವಾದ ಚದುರಂಗರ ಈ ಕಾದಂಬರಿಯಲ್ಲಿ ಮೈಸೂರು ಮತ್ತು ಕೊಡಗು ಜಿಲ್ಲೆಗಳ ಗಡಿಗಳ ಪ್ರದೇಶದ ಹಿನ್ನೆಲೆಯಲ್ಲಿ ರಚಿತವಾದ ಆದರ್ಶ ರಮ್ಯ ಕಾದಂಬರಿಯಾಗಿದೆ. ಒಂದು ಹಂತದಲ್ಲಿ ಅಕ್ಕಸಾಲಿಕೆಯನ್ನು ಇನ್ನೊಂದು ಹಂತದಲ್ಲಿ ಬೇಸಾಯವನ್ನು ಅವಲಂಬಿಸಿದ ವಿಶ್ವಕರ್ಮ ಕುಟುಂಬಗಳ ಏಳು-ಬೀಳುಗಳು ಮುಖ್ಯವಾಗಿ ನಟರಾಜ ಮತ್ತು ಸರ್ವಮಂಗಳ ಇವರ ನಿರಾಸೆ ಮತ್ತು ದುರಂತದ ಚಿತ್ರಣವಾಗಿದೆ. ಕಾದಂಬರಿಯ ಉಳಿದ ಪಾತ್ರಗಳ ಚಿತ್ರಣ ಈ ಎರಡೂ ಪಾತ್ರಗಳಿಗೆ ಹೊಂದಿಕೊಂಡು ಬಂದಿದೆ. ಶಂಕ್ರಯ್ಯ, ಗೌರಮ್ಮ, ವಿಷಕಂಠಯ್ಯ, ಪಾರ್ವತಮ್ಮ, ನಂಜುಂಡಸ್ವಾಮಿ, ಯಶೋದಮ್ಮ, ಸುಬ್ಬರಾಯ, ಗಿರಿಜೆ, ದುರ್ಗಿ, ಕಾಳಯ್ಯ, ನರಸಮ್ಮ, ವಿಶಾಲಿ ಇವರ ಜೀವನದ ಏಳು-ಬೀಳುಗಳನ್ನು ಈ ಕಾದಂಬರಿಯಲ್ಲಿ ಚಿತ್ರಿಸಲಾಗಿದೆ.

ಕಾದಂಬರಿಯ ಮುಖ್ಯ ವಸ್ತು ಪ್ರಣಯ ದುರಂತವಾದರೂ ನಟರಾಜನ ಮನೋಘೋರಣೆಯ ಇನ್ನೊಂದು ಮುಖವನ್ನು ಇಲ್ಲಿ ಲೇಖಕರು ಹೇಳುವದರ ಮೂಲಕ ಉಳ್ಳವರು, ಶ್ರೀಮಂತರು, ಮಾಲೀಕರು ಮತ್ತು ಇಲ್ಲದವರ, ಬಡವರ, ಕೂಲಿಕಾರ್ಮಿಕ ನಡುವಿನ ಸಂಘರ್ಷವನ್ನು ಚಿತ್ರಿಸುತ್ತಾರೆ. ಹೊಸ ರಾಷ್ಟ್ರದ ಉದಯಕ್ಕೆ ಬಿಸಿರಕ್ತದ ಯುವಕರು ಹೇಗೆ ಸಿದ್ಧರಾಗಬೇಕು ಎಂಬುದನ್ನು ಇಲ್ಲಿ ಕಾಣುತ್ತೇವೆ. "... ಇದೇ ಕಾದಂಬರಿಯ ಮುಖ್ಯ ಭೂಮಿಕೆ ಅಲ್ಲವಾದರೂ ಇದರಲ್ಲಿ ನವರಾಷ್ಟ್ರ ಪ್ರಜ್ಞೆ ಹಾಗೂ ದಬ್ಬಾಳಿಕೆಗಳ ನಡುವೆ ನಡೆಯುವ ಘರ್ಷಣೆ, ಬಿಸಿರಕ್ತದ ಯುವಜನರು ಕುತಂತ್ರಗಳಿಗೆ ಬಲಿ ಬೀಳುತ್ತಿದ್ದುದರ ದಾರುಣ ಪರಿಸ್ಥಿತಿ, ಅದರಿಂದ ತತ್ಸಂಬಂಧಿ ಕುಟುಂಬಸ್ಥರ ಮೇಲಾಗುತ್ತಿದ್ದ ದುಷ್ಪರಿಣಾಮ... ಇವೇ ಮೊದಲಾದ ಸಂಗತಿಗಳು ಪ್ರತಿಪಾದಿತವಾಗಿವೆ...." (ಶಂಕರ. ಡಿ.ಎ., ೨೦೧೧, ಪುಟ-೧೫೪.) ಎಂದು ಹೇಳಬಹುದು.

ಸರ್ವಮಂಗಳ ಮತ್ತು ನಟರಾಜರ ಪ್ರೀತಿ ಪ್ರೇಮವಾಗಿ ಬೆಳೆಯುವ ರೀತಿ, ಈ ಪ್ರೇಮವನ್ನು ವಿರೋಧಿಸುವ ಮತ್ತು ದುಃಖಕ್ಕೆ ಕಾರಣವಾಗುವ ಶಕ್ತಿಗಳು, ಇಂಥ ದುಃಖವನ್ನು ಎದುರಿಸಲು ಪ್ರೇಮಿಗಳು ನಡೆಯಿಸುವ ಪ್ರಯತ್ನಗಳು, ಅವುಗಳ ಸೋಲು-ಗೆಲುವು, ದುಃಖವನ್ನು ಮೀರಿ ಬರುವ ಸುಖದ ಅಮೃತ ಕ್ಷಣಗಳು ಇವುಗಳ ಮಧ್ಯ ನಟರಾಜನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು ವಾಸ್ತವ ಬದುಕಿನ ಸಂಗತಿಗಳನ್ನು ತಿಳಿಸುತ್ತವೆ. ಗಾಂಧಿಜಿಯವರ ಆದರ್ಶತೆಗಳಿಂದ ಪ್ರಭಾವಿತನಾಗಿದ್ದ ನಟರಾಜನಿಗೆ ಕೌಟುಂಬಿಕ ಸಂಬಂಧಗಳು, ಸಮುದಾಯ ಜೀವನ ಮತ್ತು ಸಾಮಾಜಿಕ ಪ್ರಕ್ರಿಯೆಗಳ ಚಿತ್ರಣದಲ್ಲಿ ವಾಸ್ತವ ಪ್ರಜ್ಞೆ ಜಾಗ್ರತವಾಗಿರುವುದನ್ನು ಕಾಣುತ್ತೇವೆ.

ಸ್ತ್ರೀ ಪಾತ್ರಗಳು ಸಾಂಪ್ರದಾಯಿಕ ಯಜಮಾನ್ಯಕ್ಕೆ ಸಿಕ್ಕಿ ಒದ್ದಾಡುವ ಪರಿಸ್ಥಿತಿಯನ್ನು ಕಟ್ಟಿಕೊಡುತ್ತದೆ ಸರ್ವಮಂಗಳನ ಪಾತ್ರ. ಕಥಾಭಿತ್ತಿಯಲ್ಲಿ ವಿಷಮ ದಾಂಪತ್ಯವನ್ನು ಕುರಿತು, ಸಾಮರಸ್ಯ ದಾಂಪತ್ಯಕ್ಕಾಗಿ ತುಡಿಯುವ ಹೆಣ್ಣು-ಗಂಡುಗಳ ಅಂತರಂಗದ ಹೊಯ್ದಾಟವನ್ನು ಇಲ್ಲಿ ಕಾಣುತ್ತೇವೆ. ನಟರಾಜ ಮತ್ತು ಸರ್ವಮಂಗಳ ಸರಸ-ವಿರಸದ ಹೊಯ್ದಾಟದಲ್ಲಿ ಮುಳಿಗೇಳುವ ಪಾತ್ರಗಳು. ನಟರಾಜ ಮತ್ತು ಸರ್ವಮಂಗಳ ಪರಸ್ಪರ ಪ್ರೀತಿಸಿದರೂ ಮದುವೆ ಆಗಲು ಸಾಧ್ಯವಾಗದೆ ಹೋಗುತ್ತದೆ. ಏಕೆಂದರೆ ಜಾತಿ, ಅಂತಸ್ತಿನ ಅಂತರಗಳು ಕಾರಣವಾಗುತ್ತವೆ. ಸರ್ವಮಂಗಳೆ ತನ್ನನ್ನು ಮನಸಾರೆ ಪ್ರೀತಿಸಿದ ನಟರಾಜನನ್ನು ಬಿಟ್ಟು 'ಸುಬ್ರಾಯಿ'ಯನ್ನು ಮದುವೆಯಾಗುತ್ತಾಳೆ. ಆಗ ಅನಿವಾರ್ಯವಾಗಿ ತಾನು ದುರ್ಗಿಯನ್ನು ಮದುವೆಯಾಗಬೇಕಾಗುತ್ತದೆ. ಸರ್ವಮಂಗಳಾ ಸುಬ್ರಾಯಿಯಿಂದ ಮತ್ತು ದುರ್ಗಿಯಿಂದ ನಟರಾಜ ದೂರದೂರ ಸರಿಯುವ ಪ್ರಸಂಗಗಳು ಒಡಮೂಡುತ್ತವೆ. ಇಲ್ಲಿ ಕಾದಂಬರಿಕಾರರಿಗೆ ವಾಸ್ತವದ ಪ್ರಜ್ಞೆ ಕಾಡುತ್ತದೆ. ಈಗಾಗಲೇ ಸುಬ್ರಾಯಿಯನ್ನು ಮದುವೆಯಾದ ಸರ್ವಮಂಗಳೆ ಮತ್ತೆ ನಟರಾಜನ ಪ್ರೀತಿಯನ್ನು ಬಯಸುತ್ತಾಳೆ. ಆದರೆ ನಟರಾಜನು ಕಾರ್ಮಿಕ ಚಳುವಳಿಗೆ ನುಗ್ಗಿದ ಮೇಲೆ ದುರ್ಗಿಯನ್ನು ಮನಃಪೂರ್ವಕವಾಗಿ ಪ್ರೀತಿಸಲು ಶುರುಮಾಡುತ್ತಾನೆ. ಹೀಗೆ ಕಾದಂಬರಿಯಲ್ಲಿ ವ್ಯಕ್ತವಾಗುವ ಸಂಗತಿಗಳು, ಸಂದರ್ಭಗಳು ಓದುಗನಿಗೆ ಸರಿ ಎನಿಸದಿದ್ದರೂ ಪ್ರಗತಿಪರ ಮನೋವೃತ್ತಿಗಳು ಪ್ರಗತಿಶೀಲತೆಯ ಧೋರಣೆಗಳನ್ನು ಎತ್ತಿ ತೋರಿಸುತ್ತವೆ. ಕಾಲ, ದೇಶಗಳಿಗೆ ಬದ್ಧನಾಗಿ ಬರೆಯುವ ಸಾಹಿತಿ ತಾನು ಬದುಕುತ್ತಿರುವ ಕಾಲ ಹಾಗೂ ಪ್ರದೇಶದ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಪ್ರಾಕೃತಿಕ ಪರಿಸ್ಥಿಗಳನ್ನು ಚಿತ್ರಿಸುವದರ ಮೂಲಕ ತನ್ನ ಕೃತಿಯಲ್ಲಿ ಸಮಕಾಲೀನತೆಯನ್ನು, ಪ್ರಾದೇಶಿಕತೆಯನ್ನು ಅಭಿವ್ಯಕ್ತಿಸುತ್ತಾನೆ. ಸಾಹಿತ್ಯ ಅತಿ ಶಿಷ್ಟವಾಗಿ ಸತ್ವವನ್ನು ಕಳೆದುಕೊಂಡಾಗ ಪ್ರಾದೇಶಿಕ ಚಿತ್ರಣ ಅದಕ್ಕೆ ಜೀವ ತುಂಬುತ್ತದೆ. ಪ್ರಾದೇಶಿಕತೆ ಇಲ್ಲದ ಸಾಹಿತ್ಯ ಗಟ್ಟಿ ನೆಲದೊಡನೆ ತನ್ನ ಸಂಪರ್ಕವನ್ನು ಕಳೆದುಕೊಳ್ಳುತ್ತದೆ ನಿಜ. ಆದರೆ ಪ್ರಾದೇಶಿಕತೆಯೊಂದೇ ತನ್ನ ಗುಣ ವಿಶೇಷವಾಗಿರುವ ಸಾಹಿತ್ಯ ಜಗತ್ತಿನ ಮಹಾ ಕೃತಿಗಳೊಡನೆ ಹೆಗಲೆಣೆಯಾಗಿ ನಿಲ್ಲಲಾರದು. ಪ್ರಪಂಚದ ಶ್ರೇಷ್ಠ ಸಾಹಿತಿಗಳಲ್ಲೆರೂ ಈ ರಾಷ್ಟ್ರೀಯತೆ, ಪ್ರಾದೇಶಿಕತೆ ಮತ್ತು ಮಾನವೀಯತೆಗಳನ್ನು ತಮ್ಮ ಕೃತಿಗಳಲ್ಲಿ ಸಮರಸವಾಗಿ ಬೆರೆಸಿದವರೇ ಆಗಿರುತ್ತಾರೆ. (ಆಮೂರ.ಜಿ.ಎಸ್., ೨೦೧೩, ಪುಟ-೧೯೮.) ಈ ದೃಷ್ಟಿಯಿಂದ ಚದುರಂಗ ಅವರ 'ಸರ್ವಮಂಗಳೆ' ಕಾದಂಬರಿ ಪ್ರಮುಖವೆನಿಸುತ್ತದೆ. ಇಲ್ಲಿನ ಪಾತ್ರಗಳು ತನ್ನ ಕಾಲದಲ್ಲಿನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳನ್ನು ಪ್ರಾದೇಶಿಕ ಹಿನ್ನೆಲೆಯಲ್ಲಿ ಅಭಿವ್ಯಕ್ತಿಗೊಳಿಸುತ್ತದೆ.

ಈ ಕಾದಂಬರಿಯಲ್ಲಿ ಚಿತ್ರಿತವಾಗುವ ಜೀವನದ ಸಂಸ್ಕೃತಿಯ ವಿವಿಧ ಅಂಗಗಳಾದ ತಂತ್ರಜ್ಞಾನ, ಆರ್ಥಿಕ ವ್ಯವಸ್ಥೆ, ರಾಜಕೀಯ ವ್ಯವಸ್ಥೆ, ಸಾಮಾಜಿಕ ವ್ಯವಸ್ಥೆ, ಆಲೋಚನಾ ವ್ಯವಸ್ಥೆ, ಮತ್ತು ಧರ್ಮ, ಸೌಂದರ್ಯ ಮೀಮಾಂಸೆ ಮತ್ತು ಭಾಷೆ ಈ ಎಲ್ಲ ನಾಗರಿಕ ಸಂಸ್ಕೃತಿಗಿಂತ ಭಿನ್ನವಾಗಿರುತ್ತವೆ. ಈ ಬಗೆಯ ಕಾದಂಬರಿಯಲ್ಲಿ ಪ್ರಾದೇಶಿಕತೆಯ ಹಿನ್ನೆಲೆಯಲ್ಲಿ ಸ್ವಾತಂತ್ರ್ಯತೆಯೇ ಅತ್ಯಂತ ಮುಖ್ಯವಾದ ಸಂಗತಿಯಾಗುತ್ತದೆ.

## ಶ್ರೀರಂಗ ಮತ್ತು ಮಿರ್ಜಿ ಅಣ್ಣಾರಾಯ ಅವರ ಸಾತಂತ್ರ್ಯ ನಂತರದ ಕಾದಂಬರಿಗಳಲ್ಲಿನ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು

ಶ್ರೀರಂಗರ ಪ್ರಮುಖ ಕಾರ್ಯಕ್ಷೇತ್ರ ರಂಗಭೂಮಿಯಾಗಿತ್ತು. ಆದರೆ ಅವರು ವಿಶ್ವಾಮಿತ್ರನ ಸೃಷ್ಟಿ, ಪುರುಷಾರ್ಥ, ಪ್ರಕೃತಿ–ಪುರುಷ, ಅನಾದಿ–ಅನಂತ, ವಿಷಚಕ್ರವ್ಯೂಹಗಳಂಥ ಕಾದಂಬರಿಗಳ ಮೂಲಕ ಕಾದಂಬರಿ ಕ್ಷೇತ್ರದಲ್ಲಿಯೂ ಮಹತ್ವದ ಹೆಜ್ಜೆ ಗುರುತುಗಳನ್ನು ಬಿಟ್ಟುಹೋಗಿದ್ದಾರೆ. ಈ ಕಾದಂಬರಿಗಳು ತಮ್ಮ ವೈಯಕ್ತಿಕ ಗುಣಗಳಿಂದಾಗಿ ನಮ್ಮ ಗಮನ ಸೆಳೆಯುತ್ತವೆ. ಆದರೆ ಇದಕ್ಕೂ ಹೆಚ್ಚಾಗಿ ಅವು ಶ್ರೀರಂಗರ ಒಟ್ಟು ಜೀವನದರ್ಶನದ ಅವಿಭಾಜ್ಯ ಅಂಗಗಳೇ ಆಗಿರುವುದರಿಂದ ಅವರ ಸಾಹಿತ್ಯದ ಅಭ್ಯಾಸದಲ್ಲಿ ಅನಿವಾರ್ಯತೆ ಹೊಂದಿವೆ. ಅವರ ಮಹತ್ವದ ಕಾದಂಬರಿಗಳೆಲ್ಲ ೧೯೪೭–೧೯೫೬ರ ಅವಧಿಯಲ್ಲಿಯೇ, ಎಂದರೆ ಅವರು ನಾಟಕ ರಚನೆಯಿಂದ ತಾತ್ಪೂರ್ತಿಕ ವಿರಾಮ ತೆಗೆದುಕೊಂಡಾಗ, ಬಂದವೆನ್ನುವುದು ಈ ದೃಷ್ಟಿಯಿಂದ ಸೂಚಕವಾಗಿದೆ. ಶ್ರೀರಂಗರ ಎಲ್ಲ ಕೃತಿಗಳಿಗೂ ಆಧಾರಭೂತವಾದ ವಸ್ತುವೆಂದರೆ ಸ್ಥಿತಿ–ಗತಿ. ವಾಸ್ತವ ಮಾರ್ಗದ ಕಾದಂಬರಿಕಾರರಲ್ಲಿ ಅವರ ವೈಶಿಷ್ಟ್ಯವೆಂದರೆ ತಾತ್ತ್ವಿಕತೆ. (ಶಿವರುದ್ರಪ್ಪ.ಜಿ.ಎಸ್., ೨೦೦೭, ಪುಟ–೧೪೦.)

ಹೀಗಿದ್ದರೂ ಅವರ 'ಪುರುಷಾರ್ಥ' ಕಾದಂಬರಿಯಲ್ಲಿ ಬರುವ ಸ್ವಾತಂತ್ರ್ಯ ಹೋರಾಟದ ನೋಟಗಳನ್ನು ಪ್ರಸ್ತುತ ಮಹಾಪ್ರಬಂಧದ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಶ್ರೀರಂಗ ರಂಗಭೂಮಿಯ ಪ್ರಭಾವ ಅವರ ಈ ಕಾದಂಬರಿಗಳಲ್ಲಿ ಒಡಮೂಡಿರುವುದನ್ನು ಕಾಣುತ್ತೇವೆ.

### ಪುರುಷಾರ್ಥ

ಶ್ರೀರಂಗರು 'ಪುರುಷಾರ್ಥ' ಕಾದಂಬರಿಯಲ್ಲಿ ಸ್ವಾತಂತ್ರ್ಯ ಹೋರಾಟದ ಕಥೆಯನ್ನು ವಿಶಿಷ್ಟವಾಗಿ ಚಿತ್ರಿಸಿದ್ದಾರೆ. ೧೯೪೭ರ ಸ್ವಾತಂತ್ರ್ಯೋತ್ಸವದಂದು ಕಾದಂಬರಿ ನಾಯಕ ಮಾಧವ ಸ್ವತಂತ್ರ ಭಾರತದ ಭವಿಷ್ಯವನ್ನು ನೆನೆದು ಕೊರಗುತ್ತಾನೆ. ಅದರ ನೆನಪಿನಲ್ಲಿಯೇ ಇಹಲೋಕಯಾತ್ರೆ ಮುಗಿಸುತ್ತಾನೆ. ಸ್ವಾತಂತ್ರ್ಯ ನಂತರ ಭಾರತದ ರಾಜಕೀಯ ವ್ಯವಸ್ಥೆ

ಹದಗೆಟ್ಟು ರಾಜಕೀಯ ಧುರೀಣರು ಅಧಿಕಾರಕ್ಕಾಗಿ ಮಾಡುವ ಕುತಂತ್ರಗಳು, ಅಸಹ್ಯಕರ ನಡುವಳಿಕೆಗಳಿಂದ ಒಬ್ಬ ನಿಜವಾದ ಸ್ವಾತಂತ್ರ್ಯ ಹೋರಾಟಗಾರನಾದ ಮಾಧವ ಕುಸಿದು ಹೋಗಿರುತ್ತಾನೆ. ಆಗಾಗ ಚರ್ಚಿತವಾಗುವ ರಾಜಕಾರಣಿಗಳು ತಾವೇ ಸ್ವಾತಂತ್ರ್ಯವನ್ನು ಗಳಿಸಿಕೊಳ್ಳುವಲ್ಲಿ ಪ್ರಮುಖರೆಂದು ಬೀಗುವ ಸ್ವಭಾವವು ಮಾಧವನಿಗೆ ಸಹಿಸದಾಗುತ್ತದೆ. ಅವನಿಗೆ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದ ನಿಜವಾದ ಹೋರಾಟಗಾರರಿಗೆ ಸ್ವತಂತ್ರ ಭಾರತದಲ್ಲಿ ಮನ್ನಣೆ ಸಿಗುವುದಿಲ್ಲೆಂಬ ಸತ್ಯವನ್ನು ಮನಗಾಣುತ್ತಾನೆ. ಇದು ಕಾದಂಬರಿಯಲ್ಲಿ ಪ್ರಮುಖ ತಿರುವನ್ನು ಪಡೆದುಕೊಳ್ಳುತ್ತದೆ. ಇದರಿಂದ ಅಂದಿನ ಭಾರತದ ಸಾಮಾಜಿಕ, ರಾಜಕೀಯ ದುರಾವಸ್ಥೆಯನ್ನು ಮಾಧವನ ಮೂಲಕ ಲೇಖಕರು ಚಿತ್ರಿಸಲು ಯತ್ನಿಸಿದ್ದನ್ನು ಕಾಣುತ್ತೇವೆ.

ಕಾದಂಬರಿಯಲ್ಲಿ ಬರುವ ಹನುಮಂತಗೌಡ, ಅನಂತ, ಶ್ರೀಧರ ಇವರು ಮಾಧವನಿಗೆ ಸಹಾಯಕವಾದ ಪಾತ್ರಗಳಾಗಿವೆ. ತಮ್ಮ ಸ್ವಾತಂತ್ರ್ಯ ಹೋರಾಟದ ನೆನಪುಗಳನ್ನು ಪದೆ ಪದೆ ನೆನೆದುಕೊಂಡು ಮುಂದಿನ ಭವ್ಯ ಭಾರತದ ಭವಿಷ್ಯವನ್ನು ಊಹಿಸುತ್ತಾರೆ. ಗಾಂಧೀಜಿಯವರ ಆದರ್ಶ ರಾಜ್ಯದ ಕಲ್ಪನೆಗೆ ಭಂಗ ತರುವಂತಹ ಎಷ್ಟೋ ಘಟನೆಗಳು ಇವರ ಎದುರಿಗೆ ನಡೆದು ಹೋಗಿರುತ್ತವೆ. ಅವುಗಳಿಗೆ ಪ್ರತಿಕ್ರಿಯೆ ಮಾಡುವಲ್ಲಿ ಸಹಕಾರವಿಲ್ಲದೇ, ಮನ್ನಣೆಯಿಲ್ಲದೆ ಇವರು ಮೌನವಹಿಸಬೇಕಾಗುತ್ತದೆ. ವಿಮರ್ಶಕರು ಹೇಳುವಂತೆ: "ಪುರುಷಾರ್ಥದಲ್ಲಿ ಮೂರು ದಶಕಗಳ ಹೋರಾಟ ಕೊನೆ ಮುಟ್ಟಿದಾಗ, ನಾಲ್ವರು ವ್ಯಕ್ತಿಗಳ ಪಾಲಿಗೆ ಈ ಹೋರಾಟ ಕಂಡ ರೀತಿ ಅಥವಾ ಅದರಲ್ಲಿ ಅವರು ತೊಡಗಿಸಿಕೊಂಡ ರೀತಿಯ ವಿವೇಚನೆ ಚಿತ್ರಿತವಾಗಿದೆ" (ಶ್ರೀರಂಗ, ೧೯೪೭, ಮುನ್ನುಡಿ.) ಎಂಬುದನ್ನು ಒಪ್ಪಿಕೊಳ್ಳಬಹುದಾಗಿದೆ.

ಕಾದಂಬರಿಯಲ್ಲಿ ಬರುವ ಮಾಧವನ ಮಿತ್ರರಲ್ಲಿ ಹನುಮಂತ ರಾಜಕಾರಣಿಯಾದರೆ, ಶ್ರೀಧರ ಕಾರ್ಮಿಕ ಮುಖಂಡನೆಂದು ಸಮಾಜದಲ್ಲಿ ಗುರುತಿಸಿಕೊಳ್ಳುತ್ತಾನೆ. ಹಾಗೆಯೇ ಹೆಚ್ಚಿನ ಶಿಕ್ಷಣ ಪಡೆದ ಅನಂತ ಐ.ಎ.ಎಸ್. ಅಧಿಕಾರಿಯಾಗುತ್ತಾನೆ. ಹೀಗೆ ೧೯೨೦ರ ಹೊತ್ತಿಗೆ ಸ್ವಾತಂತ್ರ್ಯ ಹೋರಾಟದ ಪ್ರಕ್ರಿಯೆಯಲ್ಲಿ ಯುವಕರಾಗಿ ತೊಡಗಿಕೊಂಡ ನಾಲ್ವರು ತಮ್ಮ ವೈಯಕ್ತಿಕ ಸ್ಥಿತಿಗತಿ, ಆಸೆ-ಆಕಾಂಕ್ಷೆಗಳ ಒತ್ತಡಕ್ಕೆ ಬಿದ್ದು ತಮ್ಮದೇ ದಾರಿಯನ್ನು ತುಳಿಯುತ್ತಾರೆ. ಇವರಲ್ಲಿ ಕೊನೆಯವರೆಗೂ ತನ್ನ ಸ್ವಾತಂತ್ರ್ಯ ಪ್ರೇಮವನ್ನು ಮೆರೆದ ಮಾಧವ ಕೊನೆಗೆ ೧೯೪೭ ಅಗಸ್ಟ್ ೧೫ರಂದು ರಾಷ್ಟ್ರಧ್ವಜವನ್ನು ಕೈಯಲ್ಲಿ ಹಿಡಿದು ಸಾಯುವತ್ತಾನೆ. ಇದೇ ವಿಷಯವಸ್ತುವನ್ನು ಶ್ರೀರಂಗರು ತಮ್ಮ ಕಾಂದಬರಿಯಲ್ಲಿ ಪ್ರಧಾನವಾಗಿ ಚಿತ್ರಿಸುತ್ತಾ ೨೭ ವರ್ಷಗಳ ಹಿಂದಿನ ನಾಲ್ಕು ಗೆಳೆಯರ ಹೋರಾಟದ ಬಗೆಯನ್ನು ಎಳೆ ಎಳೆಯಾಗಿ ಹಿಡಿದಿಡುತ್ತಾರೆ. ಸ್ವತಃ ಶ್ರೀರಂಗರೇ ಕಾದಂಬರಿಯ ಕುರಿತು "ವಾತಾವರಣ ಒಂದನ್ನು ಬಿಟ್ಟರೆ ಮಿಕ್ಕ ಎಲ್ಲವೂ ಕಾಲ್ಪನಿಕವಾಗಿದೆ. ನಾಲ್ಕು ಪಾತ್ರಗಳಲ್ಲಿ ಯಾವ ಪಾತ್ರವೂ ಇಂದಿನ ಯಾವುದೇ

ಒಂದು ವ್ಯಕ್ತಿಗೆ ಅನ್ವಯಿಸುವುದಿಲ್ಲ. ನಾಲ್ವರ ವಿಚಾರವಾಣಿಯಲ್ಲಿ ವೈಯಕ್ತಿಕವಾದ ನನ್ನ ವಿಚಾರಸರಣಿ ಎಂಬುದೂ ಇಲ್ಲ. ಕತೆಯನ್ನು ಇತಿಹಾಸಾತ್ಮಕ ದೃಷ್ಟಿಯಿಂದಲೇ ನೋಡಬೇಕಾದುದು" (ಶ್ರೀರಂಗ, ೧೯೪೭, ಮುನ್ನುಡಿ.) ಎಂದು ಮುನ್ನುಡಿಯಲ್ಲಿ ಹೇಳಿಕೊಳ್ಳುತ್ತಾರೆ.

ಅಸಹಕಾರ ಚಳುವಳಿಯ ಜೊತೆಯಲ್ಲಿ ಮಾಧವ ಕಾಲೇಜು ಬಿಡುವ ನಿರ್ಧಾರ ಮಾಡಿದರೂ, ಹಮ್ಮು ಮತ್ತು ಅನಂತ ಕಾಲೇಜು ಬಿಡುವ ನಿರ್ಧಾರ ಮಾಡುವುದಿಲ್ಲ. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಅವನು ತನ್ನ ಸಂಸಾರ ಸುಖವನ್ನು ಕಳೆದುಕೊಳ್ಳುತ್ತಾನೆ. ಹಸಿವೆ ನೀರಡಿಕೆಗಳ ಪರಿವೆಯಿಲ್ಲದೆ ಊರೂರು ಅಲೆಯುತ್ತಾನೆ. ಪ್ರತಿಯೊಂದು ಕಡೆ ಸಭೆ. ಎಲ್ಲಿ ನೋಡಿದರಲ್ಲಿ ಉತ್ಸಾಹ, ವಿದೇಶಿ ಬಟ್ಟೆಗಳ ಹೋಮ ನಡೆಯುತ್ತದೆ, ಸ್ವಾತಂತ್ರ್ಯಕ್ಕಾಗಿ ದೇಶದಾದ್ಯಂತ ಚಳುವಳಿಗಳು ನಡೆದಿರುತ್ತವೆ. ಅವುಗಳಲ್ಲಿ ಭಾಗವಹಿಸುತ್ತಾ ತನ್ನ ದೇಶಪ್ರೇಮವನ್ನು ವ್ಯಕ್ತಪಡಿಸುವ ಚಿತ್ರಣಗಳು ಕಂಡುಬರುತ್ತವೆ. ಇಲ್ಲಿ ಲೇಖಕರು ಮೂರು ದಶಕಗಳ ಸ್ವಾತಂತ್ರ್ಯ ಹೋರಾಟದ ವಿಶ್ಲೇಷಣೆಯನ್ನು ನಾಲ್ಕು ಪಾತ್ರಗಳ ಮೂಲಕ ಹೇಳುತ್ತಾ ಹೋಗುತ್ತಾರೆ.

೧೯೪೭ರ ಸ್ವಾತಂತ್ರ್ಯ ದಿನದಂದು ಹಿಂದಿನ ದಿನಗಳನ್ನು ಜ್ಞಾಪಿಸಿಕೊಳ್ಳುತ್ತಾನೆ. ಕಥೆ ೨೦ ವರ್ಷ ಹಿಂದಕ್ಕೆ ಹೋಗುತ್ತದೆ. ೧೯೨೦ರಲ್ಲಿ ಅಸಹಕಾರ ಚಳುವಳಿ ಆರಂಭವಾಗಿ ಯುವ ಮಿತ್ರರಾದ ಅನಂತ, ಮಾಧವ, ಶ್ರೀಧರ ಕಾಲೇಜು ಬಿಟ್ಟು ಚಳುವಳಿಗೆ ಸೇರುತ್ತಾರೆ. ಚಳುವಳಿಯ ಕುರಿತು ಅನೇಕ ಚರ್ಚೆಗಳನ್ನು ಮಾಡುತ್ತಾರೆ. ಆದರೆ ಇಬ್ಬರು ಕಾಲೇಜು ಬಿಟ್ಟರೆ ಬ್ರಿಟೀಷರ ಆಡಳಿತಕ್ಕೆ ಧಕ್ಕೆಯಾಗುವುದು ಹೇಗೆ? ಎಂಬ ಪ್ರಶ್ನೆಯನ್ನು ಅನಂತ ಮಾಧವನಲ್ಲಿ ಎತ್ತುತ್ತಾನೆ. ಬ್ರಿಟೀಷ ಸರಕಾರ ನಡೆಯುತ್ತಿರುವುದು ಬುದ್ಧಿವಂತ ಭಾರತೀಯರಿಂದಾಗಿ. 'ಒಂದು ವೇಳೆ ಸರಕಾರಕ್ಕೆ ಸಹಕಾರ ನೀಡುತ್ತಿದ್ದ ನೌಕರರೇನಾದರೂ ಚಳುವಳಿಯಲ್ಲಿ ಭಾಗವಹಿಸುತ್ತಿದ್ದರೆ ಸ್ವಾತಂತ್ರ್ಯ ೧೦ ವರ್ಷ ಮೊದಲ ಬರುತ್ತಿತ್ತೇನೋ?' ಎಂಬಂಥ ಪ್ರಶ್ನೆಗಳನ್ನು ಪರಸ್ಪರ ಚರ್ಚಿಸಿ ತಮ್ಮ ಕಾಲೇಜು ಶಿಕ್ಷಣವನ್ನು ಶ್ರೀಧರ ಮತ್ತು ಅನಂತ ಮುಂದುವರೆಸುತ್ತಾರೆ.

ಸ್ವಾತಂತ್ರ್ಯ ಚಳುವಳಿಯಲ್ಲಿ ಮಾಧವ ಪ್ರಮುಖ ಪಾತ್ರ ವಹಿಸುತ್ತಾನೆ. ೧೯೨೦ರ ಡಿಸೆಂಬರ್ ಪ್ರಾರಂಭಕ್ಕೆ ಸರಕಾರ ಯುವಕನಾದ ಮಾಧವನನ್ನು ಬಂಧಿಸುತ್ತದೆ. ಒಂದು ವರ್ಷ ಜೈಲಿನ ಅನುಭವ ಪಡೆಯುತ್ತಾನೆ. ಇದು ಅವನ ದೇಹ ಮತ್ತು ಬುದ್ಧಿಯನ್ನು ಜಡಗೊಳಿಸುತ್ತದೆ. ಅಲ್ಲದೆ ಅಹಿಂಸಾವಾದಿಯಾದ ಮಾಧವನಿಗೆ ಹಮ್ಮು(ಹನುಮಂತ) ಗಾಂಧೀಜಿಯ ಅಹಿಂಸಾ ತತ್ತ್ವದ ಬಗೆಗೆ ನಂಬಿಕೆ ಇಲ್ಲದೆ ಅನೇಕ ಪ್ರಶ್ನೆಗಳನ್ನು ಕೇಳುವದು ಎಷ್ಟೋ ಬಾರಿ ಮುಜುಗುರಕ್ಕೆ

ಈಡುಮಾಡಿರುತ್ತದೆ. ಅಲ್ಲದೆ ಆಗಾಗ ಕಾರ್ಮಿಕ ಮುಖಂಡನಾಗಿದ್ದ ಶ್ರೀಧರ 'ಗಾಂಧೀಜಿಯ ರಾಮರಾಜ್ಯದ ಕನಸು ನನಸಾಗುವುದೇ?' ಎಂಬ ಮಾತು ಸಂಶಯವಾಗಿ ಕಾಡುತ್ತದೆ.

ಶ್ರೀಧರ ಒಬ್ಬ ಕಾರ್ಮಿಕ ಮುಖಂಡನಾಗಿ ಕಮ್ಯುನಿಷ್ಟ ಮನೋಧೋರಣೆ ಚಿತ್ರಣವಾಗಿದ್ದರೆ, ಐಎಎಸ್ ಅಧಿಕಾರಿಯಾದ ಅನಂತನಲ್ಲಿ ಅಧಿಕಾರದ ದರ್ಪ ಬ್ರಿಟೀಷರ ಬಳುವಳಿಯಾಗಿ ಬಂದಿರುವದನ್ನು ಕಾಣುತ್ತೇವೆ. ಮತ್ತು ಹನುಮಂತನಲ್ಲಿ ಆಧುನಿಕ ರಾಜಕಾರಣಿಯ ಗುಣಗಳನ್ನು ಕಾಣುತ್ತೇವೆ. ಈ ಮೂವರನ್ನು ಹೊರತಾಗಿ ನಮಗೆ ಮಾಧವನಲ್ಲಿ ನಿಜವಾದ ಸ್ವಾತಂತ್ರ್ಯ ಹೋರಾಟ ಅಭೀಪ್ಸೆಯನ್ನು ನೋಡಲು ಈ ಕಾದಂಬರಿಯಿಂದ ಸಾಧ್ಯ.

**ಮಿರ್ಜಿ ಅಣ್ಣಾರಾಯರ 'ಪ್ರತಿಸರಕಾರ':**

ಮಿರ್ಜಿ ಅಣ್ಣಾರಾಯರು ರಚಿಸಿದ 'ಪ್ರತಿ ಸರಕಾರ' ಒಂದು ಹೊಸ ಬಗೆಯ ಸಂಚಲನವನ್ನು ಸಮಾಜದಲ್ಲಿ ಮೂಡಿಸಲು ಯತ್ನಿಸುತ್ತದೆ. ಕಾದಂಬರಿಯಲ್ಲಿ ಹಲವಾರು ಸತ್ಯ ಸಂಗತಿಗಳನ್ನು ನಮಗೆ ಬಿಚ್ಚಿಡುತ್ತಾ ಸಾಗುತ್ತದೆ. ಒಂದು ದುಷ್ಟ, ದರ್ಪ, ಶೋಷಣೆಯ ಸರಕಾರದ ವಿರುದ್ಧ ಪ್ರತಿ ಸರಕಾರವೊಂದನ್ನು ಹುಟ್ಟುಹಾಕಿ ಅವರ ದರ್ಪವನ್ನು ತಡೆಗಟ್ಟಲು ಅನೇಕ ಹೋರಾಟಗಳನ್ನು ಮಾಡುವ ಚಿತ್ರಣ ಕಾದಂಬರಿಯಲ್ಲಿ ವ್ಯಕ್ತವಾಗಿದೆ. ಸಮಾಜದ ಒಳತಿಗಾಗಿ ಹುಟ್ಟಿಕೊಂಡ ಪ್ರತಿ ಸರಕಾರಕ್ಕೆ ಮುಳ್ಳಾಗಿ ಅಂದಿನ ದರೋಡೆಕೋರರು ಸವಾಲಾಗುತ್ತಾರೆ. ಒಂದೆಡೆ ಪೋಲೀಸ್ ಸರಕಾರದ ದಾಳಿಯ ಭೀತಿ. ಮೊತ್ತೊಂದೆಡೆ ದರೋಡೆಕೋರರು. ಪ್ರತಿ ಸರಕಾರವನ್ನು ಸಮಾಜದಲ್ಲಿ ದುಷ್ಟರನ್ನಾಗಿ ಮಾಡಿ ಅದನ್ನು ದಮನಗೊಳಿಸಲು ಪ್ರಯತ್ನಿಸುತ್ತಿರುತ್ತಾರೆ. ಇದಕ್ಕಾಗಿ ಪ್ರತಿ ಸರಕಾರದ ಕಾರ್ಯಕರ್ತರ ಹೆಸರಿನಲ್ಲಿ ದರೋಡೆಕೋರರು ಮನೆಗಳನ್ನು ಲೂಟಿಡುವುದು ನಡೆಯುತ್ತದೆ. ಇದೇ ಕಾದಂಬರಿಗೆ ಹೊಸ ತಿರುವನ್ನು ಕೊಡುತ್ತದೆ.

ಹೋರಾಟಗಾರರನ್ನು ಹಿಡಿಯಲು ಪೋಲೀಸರು ಕುಖ್ಯಾತ ದರೋಡೆಕೋರರ ನೆರವನ್ನು ಕೋರುತ್ತಿದ್ದರು. ದರೋಡೆಕೋರರು ಕಾರ್ಯಕರ್ತರನ್ನು ಹಿಡಿದುಕೊಟ್ಟರೆ ಅವರಿಗೆ ಶಿಕ್ಷೆಯಲ್ಲಿ ಮಾಫಿ ಸಿಗುತ್ತಿತ್ತು. ಕಾರ್ಯಕರ್ತರು ಯಾರಾದರೂ ದ್ರೋಹ ಮಾಡಿ ತಮ್ಮ ಗುಟ್ಟನ್ನು ಬಿಟ್ಟುಕೊಟ್ಟರೆ ಅವರ ಕಾಲಿಗೆ ಪತ್ರೆ ಬಡಿಯುವ ಶಿಕ್ಷೆ ಕಾದಿರುತ್ತಿತ್ತು. ಸುಬ್ಬರಾವ್‌ನಂತಹ ಜಮೀನ್ದಾರರ ಮಕ್ಕಳು ಕೂಡಾ ಪ್ರತಿ ಸರಕಾರದ ಕಾರ್ಯಕರ್ತರಾಗಿದ್ದರು. ಪ್ರತಿ ಸರಕಾರದ ಬಗ್ಗೆ ಹಳ್ಳಿ ಜನರಿಗೆ ಅಪಾರವಾದ ಒಲವಿತ್ತು. ಇವರಿಂದಾಗಿ ಹಳ್ಳಿಯಲ್ಲಿ ಕಳವು, ಮೋಸ

ಕಡಿಮೆಯಾಗುತ್ತಿದ್ದವು. ನ್ಯಾಯ ತೀರ್ಮಾನಕ್ಕೆ ಹಳ್ಳಿಯ ಜನರು ಕೋರ್ಟ, ಪೋಲೀಸ್ ಸ್ಟೇಷನ್‌ಗೆ ಹೋಗುವ ಬದಲು ಪ್ರತಿ ಸರಕಾರದ ಹತ್ತಿರ ಬರುತ್ತಿದ್ದರು.

ಬ್ರಿಟೀಷ ಸರಕಾರದ ಹುಟ್ಟನ್ನು ಅಡಗಿಸುವ ಸಲುವಾಗಿಯೇ ಪ್ರತಿ ಸರಕಾರದ ನಿರ್ಮಾಣವಾಗುತ್ತದೆ. ಆದರೆ ಪ್ರತಿ ಸರಕಾರದ ವಿರುದ್ಧ ಸರಕಾರ ಹಾಗೂ ಅದರ ಬಾಲಬಡುಕರು ಅಪಪ್ರಚಾರ ಮಾಡುತ್ತಾರೆ. ಪ್ರತಿ ಸರಕಾರದ ಪ್ರಮುಖ ಕಾರ್ಯಕರ್ತನಾದ ನಾನಾಸಾಹೇಬನ ಸಾಹಸ ಮೈ ನವಿರೇಳಿಸುವ ಅನೇಕ ಕಥೆಗಳು ಇಂದಿಗೂ ರೂಢಿಯಲ್ಲಿವೆ. ಪ್ರತಿ ಸರಕಾರವೆಂದರೆ ೧೯೪೨ರಲ್ಲಿ ಗುಪ್ತವಾಗಿ ಚಳುವಳಿಯಲ್ಲಿ ಭಾಗವಹಿಸಿದ್ದ ಜನರ ಸಂಘಟಿತ ಗುಂಪು. ಪ್ರತಿ ಸರಕಾರಕ್ಕೆ ಹೆದರಿ ಕೆಲವು ಗೌಡರು ಹಳ್ಳಿಯನ್ನೇ ಬಿಟ್ಟರು. ಇದರ ಕಾರ್ಯಕರ್ತರಿಗೆ ಶಿಸ್ತಿನ ತರಬೇತಿಯನ್ನು ಕೊಡಲಾಗುತ್ತಿತ್ತು. ತರಬೇತಿ ಪಡೆದ ತರುಣರೇ ಪ್ರತಿ ಸರಕಾರದ ಪ್ರತಿನಿಧಿಗಳಾಗುತ್ತಿದ್ದರು. ಇವರೇ ಗುಪ್ತವಾಗಿ ಪೋಲೀಸರ ಬಗೆಗಿನ ಎಲ್ಲ ನಡವಳಿಗಳನ್ನು, ಚಲನವಲನವೆಲ್ಲ ಪ್ರತಿ ಸರಕಾರಕ್ಕೆ ತಿಳಿಸುತ್ತಿದ್ದರು. ಇದು ಬ್ರಿಟೀಷ್ ಸರಕಾರಕ್ಕೆ ತಲೆನೋವಿನ ಸಂಗತಿಯಾಗಿತ್ತು. ಪ್ರತಿ ಸರಕಾರದ ಜೊತೆಯಲ್ಲಿ ಒಬ್ಬ ಹೆಣ್ಣು ಮಗಳು ಕೂಡ ಕೆಲಸ ಮಾಡುತ್ತಾಳೆ. ಅವಳೇ ವಸಂತ. ಇವಳು ಪ್ರತಿ ಸರಕಾರದ ಪ್ರತಿನಿಧಿಯನ್ನು ಜೈಲಿನಿಂದ ಬಿಡಿಸಲು ಹೋಗಿ ಪೊಲೀಸರ ಗುಂಡಿಗೆ ಬಲಿಯಾಗುತ್ತಾಳೆ.

ಇದು ಒಟ್ಟು ಕಾದಂಬರಿಯ ಸಾರಾಂಶವಾಗಿದೆ. ಇಲ್ಲಿ ಕೊನೆಗೆ ಒಬ್ಬ ಮಹಿಳೆ ಪ್ರತಿ ಸರಕಾರದ ಪ್ರತಿನಿಧಿಯಾಗಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಜೈಲಿಗೆ ಹೋಗುತ್ತಾಳೆ. ಆ ವೇಳೆ ಅವಳ ಮೇಲೆ ಗುಂಡಿನ ದಾಳಿ ನಡೆದು ಬಲಿಯಾಗುವುದು ಕಾದಂಬರಿಯಲ್ಲಿ ಒಂದು ದುರಂತವೇ ಸರಿ. ನ್ಯಾಯಯುತವಾಗಿ ತಾವು ಬದುಕುವುದಿಲ್ಲ. ಮತ್ತು ನ್ಯಾಯಯುತವಾಗಿ ಬದುಕುವವರನ್ನು ಸಹಿಸಿಕೊಳ್ಳಲಾಗುವುದಿಲ್ಲ ಎಂಬ ಧೋರಣೆಗಳು ಕಾದಂಬರಿಯಲ್ಲಿ ಚಿತ್ರಣಗೊಂಡಿವೆ. ಪ್ರತಿ ಸರಕಾರದ ಪ್ರತಿಯೊಬ್ಬನಲ್ಲಿಯೂ ಹೋರಾಟದ ಮನೋಭಾವ ಎದ್ದು ಕಾಣುತ್ತದೆ. ಪ್ರತಿ ಸರಕಾರವು ಹುಟ್ಟಿಕೊಂಡಿದ್ದೇ ಅನ್ಯಾಯವನ್ನು ಜಯಿಸಲು ಎಂಬ ಸತ್ಯವನ್ನು ಓದುಗನಿಗೆ ತಲಿಪಿಸುತ್ತದೆ.

**ರಾಷ್ಟ್ರಪುರುಷ**

ಮಿರ್ಜಿ ಅಣ್ಣಾರಾಯರ ರಾಷ್ಟ್ರಪುರುಷರ ಕಾದಂಬರಿಯಲ್ಲಿ 'ಅಜಿತ'ನೆಂಬ ಯುವಕ ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿ ದೇಶಕ್ಕಾಗಿ ತನ್ನನ್ನೇ ಅರ್ಪಿಸಿಕೊಳ್ಳುತ್ತಾನೆ. ರಾಷ್ಟ್ರೀಯ ಆದರ್ಶದಿಂದ ಪ್ರೇರಿತವಾಗಿ ಸೆರೆಮನೆವಾಸ ಹಾಗೂ ಇನ್ನಿತರ ಕಷ್ಟ ಪರಂಪರೆಗಳನ್ನು ಅನುಭವಿಸುತ್ತಾನೆ. ಅಜೀತನ ಜೀವನ ಚಿತ್ರಣದೊಂದಿಗೆ ಭಾರತ ಸ್ವಾತಂತ್ರ್ಯದ

ಕಥೆಯನ್ನು ನಿರೂಪಿಸಲಾಗಿದೆ. ಕಥಾನಾಯಕನಾದ ಅಜಿತನು ಭಾರತ ರಾಷ್ಟ್ರೀಯತ್ವದ ಪ್ರತೀಕವಾಗಿ ಬೆಳೆದುಕೊಂಡು ಬರುತ್ತಾನೆ. ಇದು ಕಾದಂಬರಿಯ ಸಂಕ್ಷಿಪ್ತ ಸಾರಾಂಶ.

ಸ್ವಾತಂತ್ರ್ಯ ಚಳುವಳಿಯನ್ನು ವಸ್ತುವನ್ನಾಗಿಸಿಕೊಂಡು ಮೂಡಿಬಂದ ಬಹುಮಟ್ಟಿನ ಕಾದಂಬರಿಗಳಲ್ಲಿ ಇರುವಂತೆ ಇಲ್ಲಿಯು ಭಾರತದ ತರುಣನೊಬ್ಬ (ಅಜಿತ) ಸ್ವಾತಂತ್ರ್ಯ ಹೋರಾಟದಲ್ಲಿ ಹೇಗೆ ಪಾಲ್ಗೊಂಡನು ಎಂಬುದನ್ನು ಚಿತ್ರಿಸುತ್ತದೆ. ಕಾದಂಬರಿಯ ಮುಖ್ಯ ಪಾತ್ರದ ಅಜಿತನು ಗಾಂಧೀಜಿಯವರ ಕರೆಗೆ ಓಗೊಟ್ಟು, ವಿದ್ಯಾಭ್ಯಾಸಕ್ಕೆ ಶರಣುಹೊಡೆದು, ಹೋರಾಟಕ್ಕೆ ಧುಮುಕಿದ. ಇವನ ಹೋರಾಟದ ಉದ್ದೇಶ, ಅಹಿಂಸಾತ್ಮಕವಾದದ್ದು ಎಂದುಕೊಂಡರು; ವಾಸ್ತವವಾಗಿ ಅವನ ದಾರಿ ಬೇರೆಯಾಗಿಯೇ ಕಾಣುತ್ತದೆ. ಗ್ರಾಮಾಂತರ ಪ್ರದೇಶಗಳಲ್ಲಿ ತಲೆಮರೆಸಿಕೊಂಡು ಪೋಲೀಸರ ಕಣ್ಣಿಗೆ ಮಣ್ಣೆರೆಚುವುದರಲ್ಲಿ, ರೈಲು ಕಂಬಿಗಳನ್ನು ಕಿತ್ತು, ಟೆಲಿಪೋನು ತಂತಿಗಳನ್ನು ಕತ್ತರಿಸಿ ಸಂಚಾರ-ಸಂಪರ್ಕಗಳನ್ನು ಸ್ಥಗಿತಗೊಳಿಸುವುದರಲ್ಲಿ, ಸರ್ಕಾರಿ ಖಜಾನೆ ಲೂಟಿ ಮಾಡುತ್ತ, ಸರ್ಕಾರಿ ಕಚೇರಿಗಳಿಗೆ ಬೆಂಕಿ ಹಚ್ಚುವಲ್ಲಿ ಆಡಳಿವನ್ನು ಬುಡಮೇಲು ಮಾಡುವುದಲ್ಲಿ ಹೆಚ್ಚಿನ ಮನಸ್ಸನ್ನು ಮಾಡಿರುವುದು ತೋರುತ್ತದೆ. ಅದಕ್ಕೆ ಆಂತರಿಕವಾಗಿ ಅಜಿತನಲ್ಲಿ ಬೆಂಬಲೂ ಇರುವುದನ್ನು ಕಾಣಬಹುದು. ನಿರ್ಜನವಾದ ಬೆಟ್ಟಗುಡ್ಡಗಳಲ್ಲಿ ಅಡಗಿಕೊಂಡು, ಕರಪತ್ರಗಳನ್ನು ಹೊರಡಿಸುತ್ತಾ, ಸಮಯಬಿದ್ದರೆ ಸಶಸ್ತ್ರರಾಗಿ ಹೋರಾಡುತ್ತಾ, ಕಡೆಗೆ ಪೋಲೀಸರ ಗುಂಡಿಗೆ ಆಹುತಿಯಾಗುವ ದುರಂತ ನಾಯಕರಂತೆ ಇಲ್ಲಿಯೂ ಅಜೀತ 'ರಾಷ್ಟ್ರಪುರುಷ'ನಾಗಿ ಚಿತ್ರಿತಗೊಂಡಿದ್ದಾನೆ.

ಒಟ್ಟಿನಲ್ಲಿ ಎಲ್ಲಾ ಕಾದಂಬರಿಗಳ ಅಧ್ಯಯನದ ವಿಶ್ಲೇಷಣೆಯಿಂದ ೧೯೪೬ರಷ್ಟು ಹಿಂದೆ ರಚನೆಗೊಂಡ ಬಸವರಾಜ ಕಟ್ಟೀಮನಿಯವರ 'ಸ್ವಾತಂತ್ರ್ಯದೆಡೆಗೆ' (೧೯೪೬), ವಿ.ಎಂ. ಇನಾಂದಾರರ 'ಮೂರಾಬಟ್ಟೆ' (೧೯೪೬), ತ.ರಾ.ಸು ಅವರ 'ರಕ್ತ ತರ್ಪಣ'(೧೯೪೬), ಶಿವರಾಮ ಕಾರಂತರ 'ಔದಾರ್ಯದ ಉರುಳಲ್ಲಿ' (೧೯೪೭) ಹೊರತು ಪಡಿಸಿದರೆ; ಉಳಿದೆಲ್ಲ ಕಾದಂಬರಿಗಳು ಸ್ವಾತಂತ್ರ್ಯೋದಯವಾದ ವರ್ಷದ ಮತ್ತು ಆನಂತರದ ವರ್ಷಗಳಲ್ಲಿ ಪ್ರಕಟವಾಗಿವೆ. ಸ್ವಾತಂತ್ರ್ಯಪೂರ್ವದಲ್ಲಿ ಕಾದಂಬರಿ ಮತ್ತು ನಂತರ ಬಂದ ಕಾದಂಬರಿಗಳಲ್ಲಿ ಸೂಕ್ಷ್ಮತರದ ವ್ಯತ್ಯಾಸಗಳನ್ನು ಕಾಣುತ್ತೇವೆ. ಇವೆರಡರಲ್ಲೂ ವ್ಯಕ್ತವಾದ ರಾಷ್ಟ್ರಪ್ರೇಮ, ರಾಷ್ಟ್ರಭಕ್ತಿ, ರಾಷ್ಟ್ರಪ್ರಜ್ಞೆ ಪ್ರಗತಿಶೀಲರ ಅಪೂರ್ವ ಕೊಡುಗೆ ಎನ್ನಬಹುದು. ಒಂದು ಐತಿಹಾಸಿಕ ಮಹತ್ವವುಳ್ಳ ಭಾರತದ ಸ್ವಾತಂತ್ರ್ಯ ಹೋರಾಟವು ಸಾಹಿತ್ಯಿಕವಾಗಿ ಎಷ್ಟೊಂದು ಗಾಢ ಪರಿಣಾಮ ಬೀರಿತ್ತು ಎಂಬುದನ್ನು ಪ್ರಗತಿಶೀಲ ಲೇಖಕರು ರಚಿಸಿದ ಹಲವಾರು ಕೃತಿಗಳ ಸಂಖ್ಯೆಯೇ ಹೇಳುತ್ತದೆ.

ಪ್ರಗತಿಶೀಲ ಲೇಖಕರಿಂದ ಮೂಡಿಬಂದಷ್ಟು ಇತರ ಸಾಹಿತ್ಯಿಕ ಪಂಥಗಳಲ್ಲಿ ಇವರಷ್ಟು ವಿಫುಲವಾದ ಸ್ವಾತಂತ್ರ್ಯ ಹೋರಾಟದ ಚಿತ್ರಣವನ್ನು ಕಾಣಲು ಹೆಚ್ಚಿನ ಅಧ್ಯಯನ ಅವಶ್ಯಕವೆನಿಸುತ್ತದೆ.

# ಅಧ್ಯಾಯ -೬

## ಸಮಾರೋಪ

ಕನ್ನಡದಲ್ಲಿ ಕಥನ ಸಾಹಿತ್ಯ ಕೇವಲ ಮನರಂಜನೆಗಾಗಿ ಎಂದು ಹೇಳುವ ಕಾಲವೊಂದಿತ್ತು. ಅದರ ಒಡಲಾಳದಲ್ಲಿರುವ ಅನೇಕ ವಿಪ್ಲವ-ಸಂಕಟ-ಹೋರಾಟ ಬಹುದಿನಗಳವರೆಗೆ ನೇಪಥ್ಯಕ್ಕೆ ಸರಿದು ಹೋಗಿತ್ತು. ಹೊಸ-ಹೊಸ ವೈಚಾರಿಕ ಆಲೋಚನೆಗಳ ಹಿನ್ನೆಲೆಯಲ್ಲಿ ನಡೆಯುತ್ತಿರುವ ಸಂಶೋಧನಾ ಕ್ರಮವು ಕಥನಸಾಹಿತ್ಯವನ್ನು ಗಂಭೀರವಾಗಿ ಪರಿಣಮಿಸಿದೆ.ವೈಭವ ಬದುಕಿನ ಹಿನ್ನೆಲೆಗಿಂತ ವಾಸ್ತವದ ಅನುಭವಗಳ ಹಿನ್ನೆಲೆಯಲ್ಲಿ ಮೂಡಿ ಬರುವ ಕಥೆ ಕಾದಂಬರಿಗಳಿಗೆ ಹೆಚ್ಚಿನ ಮಹತ್ವವಿದೆ, ಪ್ರಗತಿಶೀಲರು ಹೆಚ್ಚಾಗಿ ಈ ಹಿನ್ನೆಲೆಯಲ್ಲಿಯೇ ಬರೆದರು. ಹಾಗೆಂದ ಮಾತ್ರಕ್ಕೆ ಸಾಹಿತ್ಯಿಕ ಅಂಶಗಳನ್ನೇನೂ ಅವರು ಬಿಟ್ಟುಕೊಟ್ಟಿಲ್ಲ. ನನ್ನ ಸಂಶೋಧನಾ ಅಧ್ಯಯನದುದ್ದಕ್ಕೂ ಅನೇಕ ಹೊಸ ಹೊಸ ಆಲೋಚನೆಗಳನ್ನು ಗ್ರಹಿಸಿದ್ದೇನೆ.ಕಲೆಗಾಗಿ ಕಲೆ ಎಂಬುದಕ್ಕಿಂತ ಜೀವನಕ್ಕಾಗಿ ಕಲೆ ಎಂಬುದರ ಅರಿವು ನನಗಾಗಿದೆ. ಸಾಹಿತ್ಯವೂ ಕೂಡ ಈ ಪರೀಧಿಯಿಂದ ಹೊರಬರಲಾರದು.

ದೇಶಪ್ರೇಮ-ರಾಷ್ಟ್ರಾಭಿಮಾನವನ್ನು, ಕಸಿ ಮಾಡಿತರಲಾಗುವುದಿಲ್ಲ. ಅದು ನಮ್ಮೊಳಗೆ ಮೊಳೆತು ಮರವಾಗಬೇಕು. ಆ ಮರದಿಂದ ಅನೇಕ ಫಲಗಳು ಸಿಗುವಂತೆ.ಅಂಥ ಫಲಗಳನ್ನು ಫಲಿತ ರೂಪದಲ್ಲಿ ಸಂಗ್ರಹಿಸಿ ಹೇಳಿದ್ದೇನೆ. .ಹಾಗೆಂದ ಮಾತ್ರಕ್ಕ ನನ್ನ ಅಧ್ಯಯನವೇ ಕೊನೆ ಎಂದು ಹೇಳುವ ಮನಸ್ಸು ನನಗಿಲ್ಲ. ಯಾಕೆಂದರೆ ಮುಂದಿನ ಅಧ್ಯಯನದ ಅನೇಕ ಸುಳಿವು-ಮುನ್ಸೂಚನೆಗಳನ್ನು ನಾನಿಲ್ಲಿ ಗಮನಿಸಿದ್ದೇನೆ. ಆಯಾ ಅಧ್ಯಾಯಗಳಲ್ಲಿ ಸಂದರ್ಭೋಚಿತವಾಗಿ ಹೇಳಿದ್ದೇನೆ. ನನ್ನ ಅಧ್ಯಯನದ ಕೆಲವು ಫಲಿತಗಳನ್ನು ನೀಡಿದ್ದೇನೆ.

### ಪ್ರಸ್ತುತ ಮಹಾಪ್ರಬಂಧದ ಅಧ್ಯಯನದಿಂದ ಕಂಡುಕೊಂಡ ಫಲಿತಗಳು

ಮಹಾತ್ಮಾ ಗಾಂಧೀಜಿಯವರ ಮುಂದಾಳುತನದಲ್ಲಿ ಭಾರತ ಮಣ್ಣಿನ ಕಣಕಣದಲ್ಲೂ ಸಿಡಿಲಾಗಿ, ಹುಲ್ಲುಕಡ್ಡಿಯೂ ಬ್ರಹ್ಮಾಸ್ತ್ರವಾಗಿ ನಿಂತು, ಪರಕೀಯ ಪ್ರಭುತ್ವದ ವಿರುದ್ಧವಾಗಿ, ಸುಮಾರು ಮೂರು ದಶಕಗಳ ಕಾಲ ನಡೆಸಿದ ಆ ರೋಮಾಂಚಕಾರಿಯಾದ ಸಾಹಸ ಇಂದು ನಮ್ಮ ಪಾಲಿಗೆ ಕೇವಲ ಒಂದು ನೆನಪಾಗಿದೆ; ಮಕ್ಕಳ ಪಾಲಿಗೆ ಕಥೆಯಾಗಿದೆ. ಚಾರಿತ್ರಿಕ, ಸಾಹಿತ್ಯಿಕ ದಾಖಲೆಗಳಲ್ಲಿರುವುದನ್ನು ಕೆದಕಿದರೆ ಇನ್ನೂ ಹೊಗೆಯಾಡುವ ಈ ಹೋರಾಟದ ಸಂಗತಿ ಸಾಹಿತಿಗಳ ಕಲ್ಪನೆಗೆ ಇಂದಿಗೂ ಸ್ಫೂರ್ತಿಯನ್ನೊದಗಿಸುವಷ್ಟಿದೆ. ಈ ಹೋರಾಟದ ಕಾಲದಲ್ಲಿ, ಜನತೆಯನ್ನು ಪ್ರೇರಿಸಿದ ಸಾಹಿತಿಗಳ ಪಾತ್ರವೂ, ಹಾಗೂ ಹೋರಾಟದಿಂದ

ಸ್ಫೂರ್ತಿಗೊಂಡ ಸಾಹಿತ್ಯಾಭಿವ್ಯಕ್ತಿಯೂ ಗಣನೀಯವಾಗಿದೆ. ಪ್ರಸ್ತುತ ವಿಶ್ಲೇಷಣೆಗೊಳಪಟ್ಟ ಇಲ್ಲಿನ ಪ್ರತಿಯೊಂದು ಕಾದಂಬರಿ ಕಥೆಗಳಲ್ಲಿ ಸ್ವಾತಂತ್ರ್ಯವನ್ನು ಪಡೆಯುವ ತವಕದಲ್ಲಿ, ಅವಸರದಲ್ಲಿ ನಡೆಯುವ ಸಾಹಸಗಳು, ಪ್ರಾಣಾರ್ಪಣೆಗಳು ಸಾಧನೆಗಳಾಗಿ ಹೊರಹೊಮ್ಮುತ್ತವೆ. ಹೆಚ್ಚಾಗಿ ಸಾಹಿತಿಗಳು ಕಲ್ಪನೆಗೆ ಒತ್ತುಕೊಡುವುದುಂಟು. ಅದು ಸಾಮಾಜಿಕ ವಸ್ತುವಾಗಲಿ, ಕೌಟುಂಬಿಕ ವಸ್ತುವಾಗಲಿ, ವರ್ಗ ತಾರತಮ್ಯವಾಗಲಿ, ಲೈಂಗಿಕತೆಯ ವಸ್ತುವಾಗಲಿ, ಸ್ವಾತಂತ್ರ್ಯ ಹೋರಾಟವಾಗಲಿ, ಐತಿಹಾಸಿಕ, ಚಾರಿತ್ರಿಕ ಯಾವುದೇ ವಸ್ತುವನ್ನು ಇಟ್ಟುಕೊಂಡು ಬರೆದರೂ ಅದರಲ್ಲಿ ಕಾಲ್ಪನಿಕ ಜಗತ್ತೊಂದನ್ನು ಕಾಣುತ್ತೇವೆ.

ಕಾಲ್ಪನಿಕತೆಯ ಬೆರಕೆಯಿಂದಲೋ ಅಥವಾ ವಾಸ್ತವದ ನೈಜತೆಯಿಂದಲೋ; ಒಟ್ಟಿನಲ್ಲಿ ಪ್ರಗತಿಶೀಲ ಲೇಖಕರ ಸ್ವಾತಂತ್ರ್ಯ ಕುರಿತ ಕಥೆ ಮತ್ತು ಕಾದಂಬರಿಗಳ ಸಂಶೋಧನಾತ್ಮಕ ಅಧ್ಯಯನದಿಂದ ಕೆಲವು ನಿರ್ಣಯಗಳನ್ನು ಕೈಗೊಳ್ಳಬಹುದು.

- **ತರುಣರೇ ಕಥೆ ಮತ್ತು ಕಾದಂಬರಿಗಳಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ**

ಸ್ವಾತಂತ್ರ್ಯ ಚಳುವಳಿಯನ್ನು ವಸ್ತುವನ್ನಾಗಿಸಿಕೊಂಡ ಬಹುಮಟ್ಟಿನ ಕಾದಂಬರಿಗಳು ಚಿತ್ರಿಸುವುದು, ಭಾರತದ ತರುಣ ಜನಾಂಗ ಈ ಹೋರಾಟದಲ್ಲಿ ಹೇಗೆ ಪಾಲ್ಗೊಂಡಿತು ಎಂಬುದನ್ನು. ಕಾರಂತರ 'ಔದಾರ್ಯದ ಉರುಳಲ್ಲಿ' ಕಾದಂಬರಿಯಲ್ಲಿ ಬರುವ 'ರಾಧಾಕೃಷ್ಣ'ನಂಥವರನ್ನು ಬಿಟ್ಟರೆ, ಇನ್ನು ಮುಕ್ಕಾಲುಪಾಲು ಕಾದಂಬರಿಗಳ ಕಥಾನಾಯಕರೆಲ್ಲ ಬಿಸಿರಕ್ತದ ತರುಣರೇ ಆಗಿದ್ದಾರೆ. ತ.ರಾ.ಸು. ಅವರ 'ರಕ್ತತರ್ಪಣ'ದ ಚಂದ್ರಶೇಖರ, ಅ.ನ.ಕೃ. ಅವರ 'ಅಮರ ಅಗಸ್ಟ್'ನಲ್ಲಿಯ ಮಾನಪ್ಪ, ಕಟ್ಟೀಮನಿಯವರ 'ಸ್ವಾತಂತ್ರ್ಯದೆಡೆಗೆ' ಮತ್ತು 'ಮಾಡಿಮಡಿದವರು' ಕಾದಂಬರಿಯಲ್ಲಿನ ಶೇಖರ ಎಂಬುವವನು ತರುಣರೇ ಆಗಿದ್ದಾರೆ. ಇವರೆಲ್ಲಾ ಗಾಂಧೀಜಿಯವರ ಆದರ್ಶಗಳಿಗೆ ಮಾರುಹೋಗಿ, ಘೋಷಣೆಗಳಿಗೆ ಓಗೊಟ್ಟು, ಚಳುವಳಿಗಳಲ್ಲಿ ಭಾಗಿಯಾಗಿ, ಅಹಿಂಸಾವಾದವನ್ನು ಸಾಧಿಸಿ, ಹೋರಾಟಕ್ಕೆ ಧುಮುಕಿದವರು. ತಮ್ಮ ವ್ಯಕ್ತಿಗತ ಜೀವನದಲ್ಲಿ ಸೋತರೂ ಸ್ವಾತಂತ್ರ್ಯವನ್ನು ಗೆಲ್ಲುವ ಉತ್ಸಾಹ ಉಳ್ಳವರು.

- **ಹೋರಾಟದ ಹಾದಿ ಅಹಿಂಸಾತ್ಮಕತೆಯಿಂದ ಆರಂಭವಾಗಿ ಹಿಂಸಾತ್ಮಕತೆಯೊಂದಿಗೆ ಅಂತ್ಯ**

ಇಲ್ಲಿ ವಿಶ್ಲೇಷಣೆಗೆ ಒಳಪಟ್ಟ ಕಾದಂಬರಿಗಳಾಗಲಿ ಕಥೆಗಳಾಗಲಿ ಗಾಂಧೀಜಿಯವರ ಅಹಿಂಸಾತ್ಮಕ ಧೋರಣೆಯೇ ಸಾಧಿಸಿದೆ ಎನ್ನುವಂತಿಲ್ಲ. ಅಹಿಂಸಾತ್ಮಕವಾದದ್ದು ಎಂದು ಅಂದುಕೊಂಡರು ವಾಸ್ತವವಾಗಿ ಕಣಕ್ಕಿಳಿದಾಗ ಅವರವರ ದಾರಿ ಹಿಂಸಾತ್ಮಕ ಸನ್ನಿವೇಶಗಳು ಆವರಿಸಿರುವುದನ್ನು ಕಾಣುತ್ತೇವೆ. ಇಲ್ಲಿ ಬರುವ ಪಾತ್ರಗಳು ಹೆಚ್ಚಾಗಿ ಗ್ರಾಮೀಣ ಪ್ರದೇಶದ

ಮಧ್ಯಮ ಕುಟುಂಬದಿಂದ ಬಂದವರೇ ಆಗಿದ್ದಾರೆ. ಸ್ವಾತಂತ್ರ್ಯದ ಕಿಚ್ಚು ಹಚ್ಚಿಕೊಂಡು, ವೇಷಮರಿಸಿಕೊಂಡು, ಪೋಲೀಸರ ಕಣ್ಣಿಗೆ ಮಣ್ಣೆರಚುತ್ತಾ ಹೋರಾಟವನ್ನು ಮಾಡುತ್ತಾರೆ. ಹೀಗೆ ಮಾಡುವುದು ಅವರಿಗೆ ಅನಿವಾರ್ಯವೆಂದಾಗ ಗಾಂಧೀಜಿಯ ಅಹಿಂಸಾತ್ಮಕ ಹೋರಾಟವು ಮಾಯವಾಗುತ್ತದೆ. ಆದಿಯಿಂದ ಪ್ರೇರಣೆ ಪಡೆದಿದ್ದು ಗಾಂಧೀಜಿಯ ಅಹಿಂಸಾವಾದದಿಂದ ಆದರೆ ಹೋರಾಟದ ಕೊನೆ ಕೊನೆಗೆ ಅವರಲ್ಲಿ ಅಹಿಂಸೆ ಮರೆಯಾಗಿ ಹಿಂಸಾತ್ಮಕ ರೂಪ ಪಡೆದುಕೊಂಡಿರುವುದನ್ನು ಕಾಣುತ್ತೇವೆ. ಈ ಬಗೆಯ ಮನೋಧೋರಣೆಯ ಪ್ರಗತಿಶೀಲ ಲೇಖಕರ ಸ್ವಾತಂತ್ರ್ಯ ಪೂರ್ವ ಮತ್ತು ನಂತರದ ಕಾದಂಬರಿಗಳಲ್ಲಿ ಕಾಣುತ್ತೇವೆ.

ಪೊಲೀಸರ ಕಣ್ಣಿಗೆ ಮಣ್ಣೆರಚುವುದು, ರೈಲು ಕಂಬಿಗಳನ್ನು ಕಿತ್ತು, ಟೆಲಿಪೋನು ತಂತಿಗಳನ್ನು ಕತ್ತರಿಸುವುದು, ಸಂಚಾರ-ಸಂಪರ್ಕಗಳನ್ನು ಸ್ಥಗಿತಗೊಳಿಸುವುದು, ಸರ್ಕಾರಿ ಖಜಾನೆ ಲೂಟಿ ಮಾಡುವುದು, ಸರ್ಕಾರಿ ಕಚೇರಿಯ ದಾಖಲೆಗಳನ್ನು ಬೆಂಕಿ ಹಾಕಿ ಸುಡುವುದು ಮೊದಲಾದವು ಕಥೆ, ಕಾದಂಬರಿಗಳಲ್ಲಿ ಹಿಂಸಾತ್ಮಕ ಎನಿಸುತ್ತವೆ. ಇಂತಹ ಕಾರ್ಯಗಳಲ್ಲಿ ಕಥಾನಾಯಕ ದ್ವಂದ್ವ ನೀತಿಯನ್ನು ಅನುಸರಿಸಿರುವುದುಂಟು. ಅವನ ಹೋರಾಟಕ್ಕೆ ಬೆಂಬಲ ನೀಡುವವರು 'ಹಿಂಸೆಯನ್ನು ಮಾಡದೇ ಸ್ವಾತಂತ್ರ್ಯ ಪಡೆಯುವುದು ಹೇಗೆ? ಅಹಿಂಸಾ ಮಾರ್ಗದಿಂದ ಸ್ವಾತಂತ್ರ್ಯವನ್ನು ಬಯಸುವದಾದರೆ ಶತಶತಮಾನಗಳೇ ಕಳೆಯುತ್ತವೆ. ನಮ್ಮಂತಹ ಎಷ್ಟೋ ಹೋರಾಟಗಾರರು ಬಲಿಯಾಗಬೇಕಾಗುತ್ತದೆ. ಕಮ್ಯುನಿಸ್ಟ್ ಮಾರ್ಗದಲ್ಲಿ ನಮ್ಮ ಹೋರಾಟವನ್ನು ಚುರುಕುಗೊಳಿಸಿದರೆ ಆದಷ್ಟು ಬೇಗ ನಾವು ಸಾಮ್ರಾಜ್ಯಶಾಹಿ, ಪ್ರಭುತ್ವಶಾಹಿಗಳಿಂದ ಮುಕ್ತಿ ಪಡೆಯಬಹುದು' ಎಂಬ ವಾದ-ವಿವಾದಗಳು ಪ್ರಸ್ತುತ ಕಥೆ-ಕಾದಂಬರಿಗಳಲ್ಲಿ ವ್ಯಕ್ತವಾಗುತ್ತವೆ. ಈ ರೀತಿ ವ್ಯಕ್ತವಾದ ಅಭಿಪ್ರಾಯಗಳು ಸ್ವತಃ ಪ್ರಗತಿಶೀಲ ಮನೋಧೋರಣೆಯ ಲೇಖಕರ ಸ್ವಾರ್ಥ ಅನುಮಾಡಿಕೊಟ್ಟಿದೆ.

- **ಅಹಿಂಸೆಯೇ ಪ್ರಧಾನವಾದ ಸ್ವಾತಂತ್ರ್ಯ ಹೋರಾಟ**

ಪ್ರಸ್ತುತ ಎಲ್ಲ ಕಾದಂಬರಿಗಳು ಹಿಂಸೆಯನ್ನು ಅಥವಾ ಅಹಿಂಸೆಯನ್ನು ಪ್ರಧಾನವಾಗಿ ಪೂರ್ಣಪ್ರಮಾಣದಲ್ಲಿ ಅಭಿವ್ಯಕ್ತಿಸಿವೆ ಎನ್ನುವಂತಿಲ್ಲ. ವಿ.ಎಂ. ಇನಾಂದಾರ್ ಅವರ 'ಮೂರಾಬಟ್ಟೆ' ಕಾದಂಬರಿಯಲ್ಲಿ ಅಹಿಂಸಾತ್ಮಕವಾದ ಹೋರಾಟದ ಒಂದು ನೋಟವನ್ನು ಪೂರ್ಣಪ್ರಮಾಣದಲ್ಲಿ ಕಾಣುತ್ತೇವೆ. ಗಾಂಧೀಜಿಯ ಧ್ಯೇಯಾದರ್ಶಗಳನ್ನು ನಂಬಿದ ಶಾಮಣ್ಣನೆಂಬ ಬಡ ಯುವಕನೊಬ್ಬನ ಕಥೆ. ಸುಖ ಜೀವನವನ್ನೇ ಗುರಿಯಾಗಿಸಿಕೊಂಡ ರಾಮಣ್ಣ ತನ್ನ ಸ್ವ ಸಾಮರ್ಥ್ಯದಿಂದ ಮುಂಬಯಿಯಲ್ಲಿ ಉಚ್ಚ ವರ್ಗದ ವಕೀಲನಾಗಿರುತ್ತಾನೆ.

ಅವನ ಹೋರಾಟದ ಚಿತ್ರಣವು ಮುಂಬೈನಂಥ ಮಹಾನಗರದಲ್ಲಿ ಅಹಿಂಸಾತ್ಮಕವಾಗಿ ಪ್ರಭುತ್ವದ ವಿರುದ್ಧ ಹೋರಾಡುವುದು ಮಹಾನ್ ಸಾಹಸವೇ ಅನಿಸುತ್ತದೆ.

- **ಗ್ರಾಮಿಣ ಮತ್ತು ನಗರ ಪ್ರದೇಶದಲ್ಲಿ ಸ್ವಾತಂತ್ರ್ಯ ಹೋರಾಟದ ಭಿನ್ನತೆ**

ಗ್ರಾಮೀಣ ಪರಿಸರದಲ್ಲಿನ ಸ್ವಾತಂತ್ರ್ಯ ಹೋರಾಟ ಮತ್ತು ನಗರ ಪ್ರದೇಶದಲ್ಲಿನ ಹೋರಾಟವು ಪ್ರಸ್ತುತ ಕಥೆ–ಕಾದಂಬರಿಯಲ್ಲಿ ಭಿನ್ನವೆನಿಸುತ್ತವೆ. ಶಿವರಾಮ ಕಾರಂತರ 'ಔದಾರ್ಯದ ಉರುಳಲ್ಲಿ' ಕಾದಂಬರಿಯಲ್ಲಿ ನಗರದಲ್ಲಿ ಹೋಗಿ ವಾಸವಾಗುವ ರಾಧಾಕೃಷ್ಣ ಗಾಂಧೀಜಿಯವರ ಆದರ್ಶಗಳನ್ನು ಮೆಚ್ಚಿಕೊಂಡು ಅದರಂತೆ ಬದುಕಿ ತೋರಿಸಿದ ಚಿತ್ರಣವನ್ನು ಕಾಣುತ್ತೇವೆ. ಅವನ ಹೋರಾಟದ ದಾರಿ ಇಲ್ಲಿ ಬೇರೆಯಾಗಿದೆ. ತನ್ನ ಸುತ್ತಲಿನ ಸಾಮಾಜಿಕ ಪರಿಸ್ಥಿತಿಯನ್ನು ಹದಗೊಳಿಸುವ ಕಾರ್ಯಕರ್ತನಂತೆ ಬಿಂಬಿತನಾಗಿದ್ದಾನೆ. ಅದೇ ಅವನನ್ನು ಔದಾರ್ಯಕ್ಕೆ ಸಿಲುಕಿಸಿ 'ಉರುಳು' ಆಗುತ್ತದೆ. ಬದಲಾದ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಲಾರದ ಜನರ ನಡುವೆ ದುಡಿಯುವ ಏಕಾಂಗಿಯಾಗಿ ರಾಧಾಕೃಷ್ಣ ಕಾಣಿಸುತ್ತಾನೆ.

- **ಕಥೆ–ಕಾದಂಬರಿಯ ನಾಯಕನ ಸಾವು ದುರಂತದಲ್ಲಿ ಕೊನೆಗೊಳ್ಳುತ್ತದೆ**

ನಿರ್ಜನವಾದ ಬೆಟ್ಟಗುಡ್ಡಗಳಲ್ಲಿ ಅಡಗಿಕೊಂಡು, ಕರಪತ್ರಗಳನ್ನು ಹೊರಡಿಸುತ್ತಾ, ಸಮಯಬಿದ್ದರೆ ಸಶಸ್ತ್ರರಾಗಿ ಹೋರಾಡುತ್ತಾ, ಕಡೆಗೆ ಪೋಲೀಸರ ಗುಂಡಿಗೆ ಆಹುತಿಯಾಗುವ ದುರಂತ ನಾಯಕರನ್ನು ಪ್ರಸ್ತುತ ಕಥೆ, ಕಾದಂಬರಿಗಳಲ್ಲಿ ಚಿತ್ರತವಾಗಿದೆ. ಈ ಪಾತ್ರಗಳ ನಡವಳಿಕೆ ನಮಗೆ ಹಿಂದಿನ ಕಾಲದ ಸಾಹಸವನ್ನು, ಪತ್ತೇದಾರಿ ಕಾದಂಬರಿಗಳನ್ನು ನೆನಪಿಸುತ್ತವಲ್ಲದೇ ಯುವಕರ ಸಾಹಸ, ಶೌರ್ಯಗಳು ವಾಸ್ತವವೆನಿಸುತ್ತವೆ. ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಹೆಚ್ಚಾಗಿ ಯುವ ಸಮುದಾಯವು ತಮ್ಮ ಶಾಲಾ–ಕಾಲೇಜುಗಳನ್ನು ತೊರೆದು ಹೋರಾಟಕ್ಕೆ ಇಳಿದಿರುವುದನ್ನು ಚಾರಿತ್ರಿಕವಾಗಿ ಅನೇಕ ಆಧಾರ ಸಹಿತ ದಾಖಲೆಗಳನ್ನು ಕಾಣುತ್ತೇವೆ. ಹೀಗಾಗಿ ಇಲ್ಲಿಯ ಯುವಕರ ಪಾತ್ರಗಳು ಅವರ ಹೋರಾಟದ, ಶೌರ್ಯ–ಸಾಹಸಗಳು ಕಾಲ್ಪನಿಕತೆಯಿಂದ ದೂರ ನಿಲ್ಲುತ್ತವೆ. ಏಕೆಂದರೆ:

ಅಂದಿನ ಬ್ರಿಟೀಷ್ ಸರ್ಕಾರ ಚಳುವಳಿಯನ್ನು ಹತ್ತಿಕ್ಕುವಲ್ಲಿ ತಾಳಿದ ಸಶಸ್ತ್ರಕ್ರಮಗಳು, ಸಹಜವಾಗಿಯೇ ಯುವಕರಲ್ಲಿ ಕೆರಳಿಸಿ ಅವರ ಹೋರಾಟದ ವಿಧಾನವನ್ನು, ಹಿಂಸಾತ್ಮಕವಾಗಿ ಮಾಡಿದವು. ಈ ವಾಸ್ತವದ ಹಿನ್ನೆಲೆಯಲ್ಲಿ ನೋಡಿದಾಗ, ದೇಶಾದ್ಯಂತ ವ್ಯಾಪಿಸಿದ

ಚಳುವಳಿಯಲ್ಲಿ ಸ್ವಾತಂತ್ರ್ಯ ಹೋರಾಟದ ಒಂದು ಮುಖ ಪ್ರಗತಿಶೀಲ ಕಥೆ-ಕಾದಂಬರಿಗಳಲ್ಲಿ ಚಿತ್ರಿಸಿರುವಂತೆ ತೋರುತ್ತದೆ.

- **ಐತಿಹಾಸಿಕ ವಸ್ತುವಿನ ಕಾದಂಬರಿಯಲ್ಲಿ ಸ್ವಾತಂತ್ರ್ಯ ಹೋರಾಟ**

ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿದ ಕಟ್ಟೀಮನಿಯವರ 'ಸಂಗೊಳ್ಳಿ ರಾಯನಾಯಕ', 'ನರಗುಂದ ಬಂಡಾಯ', ನಿರಂಜನರ 'ಕಲ್ಯಾಣಸ್ವಾಮಿ' ಮತ್ತು 'ಸ್ವಾಮಿ ಅಪರಂಪಾರ' ಕಾದಂಬರಿಗಳು ಭಾರತದ ಸ್ವಾತಂತ್ರ್ಯ ಹೋರಾಟದ ಕಲ್ಪನೆಯೇ ಇಲ್ಲದ ಕಾಲಘಟ್ಟದಲ್ಲಿನ ಚಿತ್ರಣವನ್ನು ಒಳಗೊಂಡಂತವು. ಇಲ್ಲಿ ಬ್ರಿಟೀಷ್‌ರ ವಿರುದ್ಧ ತಮ್ಮ ಸಂಸ್ಥಾನವನ್ನು ಉಳಿಸಿಕೊಳ್ಳಲು ಮಾಡಿದ ನೇರವಾದ ಹೋರಾಟದ ಚಿತ್ರಣಗಳು ಸಿಗುತ್ತವೆ ಹೊರತು ಅಖಿಲ ಭಾರತ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು ಕಾಣುವುದಿಲ್ಲ. ಆಳರಸರಿಗೆ ಮತ್ತು ದುಡಿಯುವ ವರ್ಗಕ್ಕೆ ಕಂದಾಯವನ್ನು ಉಳಿಸಿಕೊಳ್ಳುವ ಮತ್ತು ತಮ್ಮ ಮೇಲಿನ ಶೋಷಣೆಯನ್ನು ತಡೆಗಟ್ಟುವ ತಾತ್ಕಾಲಿಕ ನೆಮ್ಮದಿಗಾಗಿ ಬ್ರಿಟೀಷ್‌ರ ವಿರುದ್ಧ ತಮ್ಮ ಅಸಹನೆಯನ್ನು ಪರೋಕ್ಷ ಹೋರಾಟದ ಮೂಲಕ ವ್ಯಕ್ತಪಡಿಸುತ್ತಾರೆ. ಈ ಮೂಲಕ ಪ್ರಗತಿಶೀಲ ಲೇಖಕರು ಐತಿಹಾಸಿಕ ಹೋರಾಟದ ಚಿತ್ರಣವನ್ನು ಸ್ವಾತಂತ್ರ್ಯದ ಹೋರಾಟವನ್ನಾಗಿ ಚಾರಿತ್ರಿಕಗೊಳಿಸಿದ್ದು ಅಭಿನಂದನಾರ್ಹವಾದುದು.

- **ಸ್ವಾತಂತ್ರ್ಯ ಹೋರಾಟದ ಒಟ್ಟು ಅಧ್ಯಯನ**

ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶಗಳಲ್ಲಿ ಒಂದಾದ 'ಒಂದೇ ಸೂರಿನಡಿ ಪ್ರಗತಿಶೀಲ ಲೇಖಕರ ಕಥೆ-ಕಾದಂಬರಿಗಳಲ್ಲಿನ ಸ್ವಾತಂತ್ರ್ಯ ಹೋರಾಟವನ್ನು ಚಿತ್ರಿಸವುದು' ಇಲ್ಲಿ ಸಫಲವಾಗಿದೆ ಎನಿಸುತ್ತದೆ. ಈವರೆಗಿನ ಪ್ರಗತಿಶೀಲ ಕಥೆ ಅಥವಾ ಕಾದಂಬರಿಯ ಯಾವುದೋ ಒಂದು ಮುಖವನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಿದ್ದು ಕಾಣಿಸುತ್ತಿತ್ತು. ಹೀಗಾಗಿ ಅವುಗಳನ್ನು ಒಂದೆಡೆ ತಂದು ವಿಶ್ಲೇಷಿಸುವಲ್ಲಿ ಕಾಲುಭಾಗವಾದರೂ ಸಾಧ್ಯವಾಯಿತೆನ್ನುವ ನಂಬಿಕೆ ಇದೆ. ಇಲ್ಲಿ ಸಮಗ್ರ ಪ್ರಗತಿಶೀಲ ಕಥೆ-ಕಾದಂಬರಿಯನ್ನು ಅವಲೋಕಿಸಲಾಗಿದೆ ಎಂಬ ಅರ್ಥವಲ್ಲವೆಂದು ನಿವೇದಿಸುತ್ತೇನೆ. ಆದರೆ ಸ್ವಾತಂತ್ರ್ಯ ಹೋರಾಟದ ಕಥೆ-ಕಾದಂಬರಿಗಳನ್ನು ವ್ಯಾಪಕವಾಗಿ ಬಳಸಿಕೊಂಡಿದ್ದೇನೆ ಎಂಬ ತೃಪ್ತಿಯಿದೆ.

ಕನ್ನಡ ಆಧುನಿಕ ಸಾಹಿತ್ಯದಲ್ಲಿ ಚಳುವಳಿ, ಹೋರಾಟ, ಪ್ರತಿಭಟನೆ ಅಂಶಗಳು ಒಡಮೂಡಿ ಬಂದಿವೆ. ಇವುಗಳ ಕುರಿತ ಒಂದೇ ಸೂರಿನಡಿಯಲ್ಲಿ ಅಧ್ಯಯನಗಳು ನಡೆದಿರುವುದು ಬೆರಳೆಣಿಕೆಯಷ್ಟು ಮಾತ್ರ. ಆಧುನಿಕ ಕನ್ನಡ ಸಾಹಿತ್ಯಕ್ಕೆ ಭಾರತ ಸ್ವಾತಂತ್ರ್ಯ ಪ್ರಭಾವ-ಪ್ರೇರಣೆಯಾಗಿದ್ದು ಅಭಿವ್ಯಕ್ತವಾಗಿದೆ. ಚಳುವಳಿಗೆ ಹೆಚ್ಚು ಪ್ರಾಧಾನ್ಯತೆಯನ್ನು ಕೊಟ್ಟ

ಕನ್ನಡ ಪ್ರಗತಿಶೀಲ ಸಾಹಿತ್ಯ ಪಂಥದ ಸ್ವಾತಂತ್ರ್ಯ ಚಳುವಳಿಯನ್ನು ಕುರಿತು ಒಂದೇ ಕಡೆ ಅಧ್ಯಯನಕ್ಕೊಳಪಡಿಸವುದು ಪ್ರಸ್ತುತ ಮಹಾಪ್ರಬಂಧದ ಆಶಯಗಳಲ್ಲಿ ಒಂದಾಗಿತ್ತು. ಅದು ಇಲ್ಲಿ ಸಫಲವೆನ್ನುವ ಅಭಿಪ್ರಾಯ ನನ್ನದು.

- **ಹುಸಿ ಸ್ವಾತಂತ್ರ್ಯ ಪ್ರೇಮದ ಅಭಿವ್ಯಕ್ತಿ**

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸುವ ಕೆಲವು ಜಮೀನದಾರರು ಸ್ವಾತಂತ್ರ್ಯ ಯೋಧನ ಸೋಗು ಹಾಕಿರುತ್ತಾರೆಂಬ ಸತ್ಯವನ್ನು ಮರೆಯುವಂತಿಲ್ಲ. ಇಂತಹ ಪಾತ್ರಗಳ ಚಿತ್ರಣವನ್ನು ನಿರಂಜನರ 'ವಿಮೋಚನೆ' ಕಾದಂಬರಿಯಲ್ಲಿ ಬರುವ ಶ್ರೀಕಂಠನ ಮಾವನ ಸ್ನೇಹಿತರು ಸ್ವಾತಂತ್ರ್ಯ ಹೋರಾಟಗಾರರಾಗಿ ಕಾಣಿಸಿಕೊಳ್ಳುತ್ತಾರೆ. ಚಂದ್ರುವಿಗೆ ಇದನ್ನು ಕಂಡು ಆಶ್ಚರ್ಯವಾಗುತ್ತದೆ. ಶ್ರೀಕಂಠನಿಗೆ ಮತ್ತು ಅವನ ಮಾವನಂತವರಿಗೆ ದೇಶಪ್ರೇಮವಿರಲು ಸಾಧ್ಯವೆ? ಎಂಬ ಪ್ರಶ್ನೆ ಕಾಡುತ್ತದೆ. ದಿವಾನರ ಪ್ರತಿರೂಪಗಳಾದ ಇವರಿಗೆ ತ್ರಿವರ್ಣಧ್ವಜವನ್ನು ಮುಟ್ಟುವ ಬಯಕೆ ನಿಜವಾಗಿಯೂ ಇದೆಯೇ? ಎಂದು ಕೇಳಿಕೊಳ್ಳುತ್ತಾನೆ. ಕೊನೆಗೆ ಶ್ರೀಕಂಠ ಸತ್ಯಸಂಗತಿಯನ್ನು ಬಿಚ್ಚಿಟ್ಟಾಗ ಚಂದ್ರುವಿನ ಸಂಶಯ ದೂರಾಗುತ್ತದೆ. ಈ ರೀತಿಯ ಸನ್ನಿವೇಶಗಳಲ್ಲಿ ಹುಸಿ ಸ್ವಾತಂತ್ರ್ಯ ಪ್ರೇಮವನ್ನು ಪ್ರಗತಿಶೀಲ ಲೇಖಕರ ಕಾದಂಬರಿಗಳಲ್ಲಿ ಕಾಣಸಿಗುತ್ತವೆ. ಇದರೊಂದಿಗೆ ನನ್ನ ಅಧ್ಯಯನದುದ್ದಕ್ಕ ನಾನು ಕಂಡುಕೊಂಡ ಫಲಿತಗಳನ್ನು ಸಂಕ್ಷಿಪ್ತವಾಗಿ ಹೀಗೆ ಹಿಡಿದಿಡಬಹುದೆನಿಸುತ್ತದೆ.

೧. ರಾಷ್ಟ್ರೀಯವಾದದ ಹಿನ್ನೆಲೆಯಲ್ಲಿ ಮೂಡಿ ಬಂದ ಹೋರಾಟವಾಗಿದೆ.

೨. ಪ್ರಗತಿಶೀಲರ ಕೆಲವು ಕಥೆ-ಕಾದಂಬರಿಗಳಲ್ಲಿ ಕಮ್ಯುನಿಷ್ಠರ ಪ್ರಣಾಳಿಕೆಗಳೇ ಗೋಚರವಾಗುತ್ತವೆ.ಅಲ್ಲದೇ ರಷಿಯಾ ಮೊದಲಾದ ದೇಶಗಳಲ್ಲಿ ಅಗತ್ಯವೆನಿಸಿದ್ದು, ಭಾರತದಲ್ಲಿ ಅಪ್ರಸ್ತುತವಾಗಬಹುದಾದ ಅನೇಕ ಸಂಗತಿಗಳನ್ನು ಪ್ರಗತಿಶೀಲರು ಹೇಳರುವುದುಂಟು.

೩. ರಷಿಯಾ ಕ್ರಾಂತಿಯ ಸ್ವರೂಪವನ್ನು ಯಥಾವತ್ತಾಗಿ ತರಲು ಹೋಗಿ ಅನೇಕ ಕಡೆಗಳಲ್ಲಿ ಮುಗ್ಗರಿಸಿರುವುದು ಕಂಡು ಬರುತ್ತದೆ.

೪. ಆಧುನಿಕ ಗದ್ಯ ಸಾಹಿತ್ಯವನ್ನು ವಿಫುಲವಾಗಿ ಸೃಷ್ಟಿಸಿದರು.

೫. ಭಾಷೆ ಸಾಂಪ್ರದಾಯಿಕ ಚೌಕಟ್ಟನ್ನು ಮೀರಿ ಬೆಳೆಯುವುದರೊದಿಗೆ ಹೊಸ ಸಾಧ್ಯತೆಗಳನ್ನು ಕಂಡುಕೊಂಡಿತು.

೬. ಓದುಗರ ಸಂಖ್ಯೆ ಹಾಗೂ ಪ್ರಕಾಶಕರ ಸಂಖ್ಯೆಯನ್ನು ಹೆಚ್ಚಿಸಿದರು.

೭. ನವೋದಯಕ್ಕಿಂತ ಭಿನ್ನವಾದ ಮಾರ್ಗದಲ್ಲಿ ಕ್ರಮಿಸಿದ ಪ್ರಗತಿಶೀಲರು ದೀನ-ದಲಿತರ, ಬಡವರ, ಸ್ತ್ರೀಯರ, ರೈತ-ಕಾರ್ಮಿಕರ ಹಿತಾಸಕ್ತಿಯನ್ನೇ ಹೆಚ್ಚಾಗಿ ತಮ್ಮ ಕಥೆ ಮತ್ತು ಕಾದಂಬರಿಗಳಲ್ಲಿ ಅಭಿವ್ಯಕ್ತಿಸಿದರು.

೮. ಬಂಡವಾಳಶಾಹಿ, ಸಾಮ್ರಾಜ್ಯಶಾಹಿ,, ಜಮೀನ್ದಾರಿ ಧೋರಣೆಗಳನ್ನು ಬಲವಾಗಿ ವಿರೋಧಿಸಿದರು ಮತ್ತು ಶ್ರಮಜೀವಿಗಳ ರಕ್ಷಣೆಗೆ ಹೆಚ್ಚಿನ ಆದ್ಯತೆ ನೀಡಿದರು.

೯. ಧ್ಯೇಯರಹಿತ ಜೀವನ, ಮೂಢನಂಬಿಕೆ, ನಿರಾಸೆ, ದೈವೀವಾದ ಮೊದಲಾದ ಅರ್ಥವಿಲ್ಲದ ಪರಿಕಲ್ಪನೆ ಮತ್ತು ಆಚರಣೆಗಳನ್ನು ಸಾರಾಸಗಟಾಗಿ ತಳ್ಳಿ ಹಾಕಿದರು.

೧೦. ಪ್ರಗತಿಶೀಲರ ಹೋರಾಟ ಕೇವಲ ಭಾರತ ಸ್ವತಂತ್ರವಾಗುವುದಷ್ಟೇ ಮುಖ್ಯವಾಗಿರಲಿಲ್ಲ ; ಅದರೊಂದಿಗೆ ಮಣ್ಣಿನ ಮಕ್ಕಳ ದು:ಖ-ದುಮ್ಮಾನ, ಸ್ತ್ರೀ ಶೋಷಣೆ, ಕಾರ್ಮಿಕರ ಮೇಲಾಗುವ ದಬ್ಬಾಳಿಕೆಗಳಿಗೂ ಮುಕ್ತಿ ನೀಡುವ ಮನಸ್ಸಿತ್ತು.

೧೧. ಸ್ವಾತಂತ್ರ್ಯ ಚಳುವಳಿಯಲ್ಲಿ ಶಾಲೆ ಕಲಿಯುವ ಬಾಲಕರು ಕುಟುಂಬ ನಿರ್ವಹಣೆ ಜೊತೆಗೆ ಸ್ವಾತಂತ್ರ್ಯದ ಹೋರಾಟದಲ್ಲಿ ಭಾಗಿಯಾದ ಪ್ರಸಂಗಗಳನ್ನು ತಿಳಿಸಿದ್ದಾರೆ.

೧೨. ದೇಶಸೇವಕರು ಜೈಲಿನಲ್ಲಿದ್ದರೂ ಜನವರಿ ೨೬ರನ್ನು ಆಚರಿಸುವುದು ದೇಶಾಭಿಮಾನ ಹಾಗೂ ಸ್ವಾಭಿಮಾನವನ್ನು ಎತ್ತಿ ತೋರಿಸುತ್ತದೆ.

೧೩. ಸ್ವಾತಂತ್ರ್ಯ ಚಳುವಳಿಯಲ್ಲಿ ಪ್ರಾಣಾರ್ಪಣೆ ಮಾಡಿದವರ ಹೋರಾಟಗಾರರ ಕಥೆ ಹಸಿ ಹಸಿಯಾದ ಅನುಭವವನ್ನು ಓದುಗರಿಗೆ ಮುಟ್ಟಿಸುತ್ತದೆ.

೧೪. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದವರ ಅನುಭವಗಳನ್ನು, ಸಿಹಿ-ಕಹಿ ಅನುಭವಗಳನ್ನು ಇಂದಿನ ಯುವಪೀಳಿಗೆಗೆ ಪರಿಣಾಮಕಾರಿಯಾಗಿ ತಿಳಿಸಿದ್ದಾರೆ.

೧೫. ಮೊದಲು ದೇಶಪ್ರೇಮ, ನಂತರ ಕುಟುಂಬ ಸಂಬಂಧ ಎಂಬಂತೆ ಪಾತ್ರಗಳು ಚಿತ್ರಣಗೊಂಡಿವೆ

೧೬. ಮಹಿಳೆಯರು, ರಾಜರು, ಸಾಮಾನ್ಯರು ತಮ್ಮ ನಾಡಿಗಾಗಿ ಹೋರಾಡಿದ ಚಿತ್ರಣಗಳ ಮೂಲಕ ನಾಡು-ದೇಶಾಭಿಮಾನವನ್ನು ಜನರಲ್ಲಿ ಜಾಗೃತಗೊಳಿಸಿದ್ದಾರೆ.

೧೭. ದೇಶೀಯ ಸಂಸ್ಥಾನಗಳ ಅರಸರ ಇತಿಹಾಸವನ್ನು ಅನೇಕ ಕಥೆ, ಕಾದಂಬರಿಗಳು ತಿಳಿಸಿಕೊಡುತ್ತವೆ.

೧೮. ದೇಶೀಯ ಅರಸರು ದತ್ತು ಮಕ್ಕಳನ್ನು ತೆಗೆದುಕೊಳ್ಳಲು ಬಾರದ ಸ್ಥಿತಿಯೇ ಸ್ವಾತಂತ್ರ್ಯ ಹೋರಾಟಕ್ಕೆ ಮುನ್ನುಡಿಯಾದ ಬಗ್ಗೆ ತಿಳಿಸಿದ್ದಾರೆ.

## ಅನುಬಂಧ–೧

### ಪ್ರಾಥಮಿಕ ಆಕರಗಳು


೧. ಅ.ನ.ಕೃಷ್ಣರಾಯ: ೨೦೦೪. **ಸಾಹಿತ್ಯ ಶ್ರೇಣಿ, ಸಂ. ೨.** ಸಾಗರ ಪ್ರಕಾಶನ, ಬೆಂಗಳೂರು.

೨. ಅ.ನ.ಕೃಷ್ಣರಾಯ: ಕೆ.ಟಿ. ಚಂದ್ರಶೇಖರ (ಸಂ), ೨೦೦೫, **ಸಮಗ್ರ ಕಥಾ ಸಂಕಲನ ಸಂ–೨**, ಸಾಗರ್ ಪ್ರಕಾಶನ, ಬೆಂಗಳೂರು.

೩. ಅ.ನ.ಕೃಷ್ಣರಾಯ: ೨೦೦೬, **ಹೇಗಾದರೂ ಬದುಕೋಣ,** ಸಾಗರ್ ಪ್ರಕಾಶನ, ಬೆಂಗಳೂರು.

೪. ಅ.ನ.ಕೃಷ್ಣರಾಯ: ೨೦೧೩. **ಅಮರ ಅಗಸ್ಟ**, ಸಾಗರ್ ಪ್ರಕಾಶನ, ಬೆಂಗಳೂರು.

೫. ಅಣ್ಣಾರಾಯ ಮಿರ್ಜಿ: ೧೯೪೨. **ಪ್ರತಿ ಸರಕಾರ,** ಲಲಿತಸಾಹಿತ್ಯಮಾಲೆ ಧಾರವಾಡ.

೬. ಅಣ್ಣಾರಾಯ ಮಿರ್ಜಿ: ೧೯೪೭, **ರಾಷ್ಟ್ರಪುರುಷ,** ಮನೊಹರ ಪ್ರಕಾಶನ ಸಮಿತಿ, ಧಾರವಾಡ.

೭. ಇನಾಂದಾರ.ವಿ.ಎಂ: ೧೯೪೮. **ವಿಜಯಯಾತ್ರೆ,** ಗೀತಾ ಬುಕ್ ಹೌಸ್, ಮೈಸೂರು.

೮. ಇನಾಂದಾರ.ವಿ.ಎಂ: ೧೯೭೩, **ಮೂರಾಬಟ್ಟೆ,** ಗೀತಾ ಬುಕ್ ಹೌಸ್, ಮೈಸೂರು. (ನಾಲ್ಕನೆ ಮುದ್ರಣ)

೯. ತ.ರಾ.ಸು: ೨೦೦೬, **ರಕ್ತತರ್ಪಣ,** ಓಂ ಶಕ್ತಿ ಪ್ರಕಾಶನ, ಬೆಂಗಳೂರು.

೧೦. ತ.ರಾ.ಸು: ೨೦೦೬. **ಸಮಗ್ರ ಸಣ್ಣ ಕಥೆಗಳು,** ಇಂದಿರಾ ಪ್ರಕಾಶನ, ಬೆಂಗಳೂರು. ೨೦೧೩.

೧೧. ನಿರಂಜನ: ೧೯೫೫, ಚಿರಸ್ಮರಣೆ, ಡಿವಿಕೆ ಮೂರ್ತಿ ಪ್ರಕಾಶನ, ಮೈಸೂರು.

೧೨. ನಿರಂಜನ: ೧೯೬೭. **ಸ್ವಾಮಿ ಅಪರಾಂಪರ,** ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು.

೧೩. ನಿರಂಜನ: ೨೦೦೫. **ಕಲ್ಯಾಣಸ್ವಾಮಿ** ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೧೪. ಬಸವರಾಜ ಕಟ್ಟೀಮನಿ: ೧೯೪೬, **ಸ್ವಾತಂತ್ರ್ಯದೆಡೆಗೆ,** ಸ್ವಪ್ನಬುಕ್ ಹೌಸ್ ಬೆಂಗಳೂರ,.

೧೫. ಬಸವರಾಜ ಕಟ್ಟೀಮನಿ: ೧೯೭೩. **ನರಗುಂದ ಬಂಡಾಯ**, ಆಕಳವಾಡಿ ಬುಕ್ ಡೀಪೊ, ಧಾರವಾಡ.

೧೬. ಬಸವರಾಜ ಕಟ್ಟೀಮನಿ: ೧೯೯೮. **ಮಾಡಿ ಮಡಿದವರು,** ಸ್ವಪ್ನ ಬುಕ್ ಹೌಸ್, ಬೆಂಗಳೂರು.

೧೭. ಬಸವರಾಜ ಕಟ್ಟೀಮನಿ: ೨೦೧೪, **ಸಮಗ್ರ ಸಾಹಿತ್ಯ, ಕಥಾ ಸಂಪುಟ–೧೧**, ಬಸವರಾಜ ಕಟ್ಟೀಮನಿ ಪ್ರತಿಷ್ಠಾನ, ಬೆಳಗಾವಿ.

೧೮. ಬಸವರಾಜ ಕಟ್ಟೀಮನಿ: ೨೦೧೪, **.ಸಮಗ್ರ ಸಾಹಿತ್ಯ, ಕಾದಂಬರಿ ಸಂಪುಟ ೬,** ಬಸವರಾಜ ಕಟ್ಟೀಮನಿ ಪ್ರತಿಷ್ಠಾನ, ಬೆಳಗಾವಿ.

೧೯. ವ್ಯಾಸರಾಯ ಬಲ್ಲಾಳ: ೨೦೦೬, **ಬಂಡಾಯ**, ವಸಂತ ಪ್ರಕಾಶನ, ಬೆಂಗಳೂರು.

೨೦. ವ್ಯಾಸರಾಯ ಬಲ್ಲಾಳ: ೨೦೦೬, **ಹೇಮಂತಗಾನ**, ವಸಂತ ಪ್ರಕಾಶನ, ಬೆಂಗಳೂರು.

೨೧. ಶಿವರಾಮ ಕಾರಂತ: ೨೦೦೮, **ಔದಾರ್ಯದ ಉರುಳಲ್ಲಿ**, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೨೨. ಶ್ರೀರಂಗ: ೧೯೪೭: **ಪುರುಷಾರ್ಥ**, ಲಲಿತ ಸಾಹಿತ್ಯಮಾಲೆ, ಧಾರವಾಡ,

## ಅನುಬಂಧ-೨

## ಪರಾಮರ್ಶನ ಗ್ರಂಥಗಳು


೧. ಅ.ನ.ಕೃ. (ಸಂ): ೧೯೪೪, **ಪ್ರಗತಿಶೀಲ ಸಾಹಿತ್ಯ,** ಪ್ರಗತಿಶೀಲ ಲೇಖಕರ ಸಂಘ, ಬೆಂಗಳೂರು.

೨. ಅನಂತರಾಮಯ್ಯ ಆರ್.ಎಲ್: ೨೦೧೩, **ಸ್ವಾತಂತ್ರ್ಯದ ಹೋರಾಟ,** ನ್ಯಾಷನಲ್ ಬುಕ್ ಟ್ರಸ್ಟ್ ಆಫ್ ಇಂಡಿಯಾ, ದೆಹಲಿ.

೩. ಅನಂತಮೂರ್ತಿ, ಯು.ಆರ್: ೧೯೭೧, **ಪ್ರಜ್ಞೆ ಮತ್ತು ಪರಿಸರ,** ಅಕ್ಷರ ಪ್ರಕಾಶನ, ಸಾಗರ.

೪. ಅಮರೇಶ ನುಗಡೋಣಿ: ೨೦೧೧, **ಕನ್ನಡ ಸಂಶೋಧನೆಯ ವೈಧಾನಿಕತೆಗಳು,** ಪ್ರಸಾರಾಂಗ, ಕನ್ನಡ ವಿವಿ ಹಂಪಿ.

೫. ಆಮೂರ ಜಿ.ಎಸ್: ೧೯೮೩, **ಕನ್ನಡ ಕಾದಂಬರಿಯ ಬೆಳವಣಿಗೆ,** ಪ್ರಸಾರಾಂಗ ಬೆಂಗಳೂರ.

೬. ಆಮೂರ. ಜಿ.ಎಸ್: ೧೯೮೬, **ಸಮಕಾಲೀನ ಕಥೆ ಕಾದಂಬರಿ ಹೊಸ ಪ್ರಯೋಗಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೭. ಆಮೂರ ಜಿ.ಎಸ್: ೧೯೯೪, **ಕನ್ನಡ ಕಥನ ಸಾಹಿತ್ಯ,** ಶ್ರೀ ಹರಿ ಪ್ರಕಾಶನ, ಧಾರವಾಡ.

೮. ಇನಾಂದಾರ.ವಿ.ಎಂ: ೧೯೮೧, **ಆಲೋಕ,** ಉಷಾ ಸಾಹಿತ್ಯ ಮಾಲೆ, ಮೈಸೂರು.

೯. ಕಕ್ಕಿಲಾಯ.ಬಿ.ವಿ.: (ಸಂ), ೧೯೯೮, **ಸ್ವಾತಂತ್ರ್ಯದ ಸ್ವರ್ಣಹೆಜ್ಜೆ,** ದಕ್ಷಿಣ ಕನ್ನಡ ಜಿಲ್ಲಾಡಳಿತ ಮಂಗಳೂರು.

೧೦. ಕೀರ್ತಿನಾಥ ಕುರ್ತಕೋಟಿ: ೧೯೬೨, **ಯುಗಧರ್ಮ ಹಾಗೂ ಸಾಹಿತ್ಯ ದರ್ಶನ,** ಮನೋಹರ ಗ್ರಂಥ ಮಾಲೆ ಧಾರವಾಡ.

೧೧. ಕೀರ್ತಿನಾಥ ಕುರ್ತಕೋಟಿ: ೨೦೦೮, **ಕನ್ನಡ ಸಾಹಿತ್ಯ ಸಂಗಾತಿ,** ಕುರ್ತಕೋಟಿ ಮೆಮೋರಿಯಲ್ ಟ್ರಸ್ಟ್ ಧಾರವಾಡ.

೧೨. ಕೃಷ್ಣರಾವ್.ಎಂ.ವಿ. ಮತ್ತು ಕೇಶವಭಟ್. ಎಂ: ೧೯೭೦, **ಕರ್ನಾಟಕದ ಇತಿಹಾಸ ದರ್ಶನ** ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು.

೧೩. ಕೃಷ್ಣರಾಯ. ಶಾ.ಮಂ: ೧೯೭೨, **ರಸಚೇತನ** ವಿಶ್ವಭಾರತಿ ಪ್ರಕಾಶನ ಗೋವೆ.

೧೪. ಗಿರಡ್ಡಿ ಗೋವಿಂದರಾಜ: ೧೯೮೦, **ಕಾದಂಬರಿ ವಸ್ತು ಮತ್ತು ತಂತ್ರ,** ಸ್ನೇಹ ಪ್ರಕಾಶನ, ಬೆಂಗಳೂರ.

೧೫. ಗಿರಡ್ಡಿ ಗೋವಿಂದರಾಜ: ೧೯೭೪, **ಸಣ್ಣಕಥೆಯ ಹೊಸ ಒಲವುಗಳು**, ಸಾಹಿತ್ಯ ಭಂಡಾರ, ಹುಬ್ಬಳ್ಳಿ.

೧೬. ಗೋಕಾಕ ವಿ.ಕೆ. ಮತ್ತು ಆರ್. ಜಿ. ಕುಲಕರ್ಣಿ: ೧೯೫೦, **ವಿಮರ್ಶಾ ತತ್ವಗಳ ಪ್ರಾಯೋಗ ವಿಮರ್ಶೆ,** ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೫೦.

೧೭. ಚಿದಾನಂದ ಮೂರ್ತಿ.ಎಂ: ೧೯೬೭, **ಸಂಶೋಧನೆ,** ಕನ್ನಡ ಅಧ್ಯಯನ ಸಂಸ್ಥೆ, ಮೈ.ವಿ.ವಿ. ಮೈಸೂರು.

೧೮. ಚಿದಾನಂದ ಮೂರ್ತಿ.ಎಂ: ೧೯೬೬, **ಸಂಶೋಧನ ತರಂಗ** ಸರಸ ಸಾಹಿತ್ಯ ಪ್ರಕಾಶನ, ಮೈಸೂರು.

೧೯. ಚೆನ್ನಬಸಪ್ಪ.ಕೋ : ೨೦೦೧, **ಬೇಡಿ ಕಳಚಿತು ದೇಶ ಒಡೆಯಿತು**.ನವಕರ್ನಾಟಕ ಪ್ರಕಾಶನ ಬೆಂಗಳೂರು.

೨೦. ಜೋಷಿ.ಜಿ.ಬಿ. ಮತ್ತು ಕೀರ್ತಿನಾಥ ಕುರ್ತಕೋಟಿ: (ಸಂ), ೧೯೫೯, **ನಡೆದುಬಂದ ದಾರಿ** ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ.

೨೧. ತ.ರಾ.ಸು: ೨೦೧೩, **ಸಮಗ್ರ ಸಣ್ಣ ಕಥೆಗಳು**, ಇಂದಿರಾ ಪ್ರಕಾಶನ, ಬೆಂಗಳೂರು,

೨೨. ತಿಪ್ಪೆರುದ್ರಸ್ವಾಮಿ. ಎಚ್: ೧೯೮೫, **ಕರ್ಣಾಟಕ ಸಂಸ್ಕೃತಿ ಸಮೀಕ್ಷೆ,** ಡಿವಿಕೆ ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರ.

೨೩. .ದಾಮೋದರ ರಾವ್.ಬಿ., ೧೯೯೨, **ಆಯಾಮಗಳು** : ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ.

೨೪. ದೇಜಗೌ: (ಸಂ), ೧೯೬೮, **ಗಂಗೋತ್ರಿ ಕುವೆಂಪು ಅಭಿನಂದನ ಗ್ರಂಥ,** ಗೀತಾ ಬುಕ್ ಹೌಸ್, ಮೈಸೂರು.

೨೫. ದೇಜಗೌ, ಸಿಪಿಕೆ: (ಸಂ), ೧೯೭೯, **ಕಟ್ಟೀಮನಿ : ಬದುಕು – ಬರಹ,** ಗೀತಾ ಬುಕ್ ಹೌಸ್, ಮೈಸೂರು.

೨೬. ನವಲಗುಂದ ಎಸ್.ಎಸ್. ಮತ್ತು ಶಿವಾನಂದ ಕಳಕಣ್ಣವರ (ಸಂ): ೨೦೧೧, **ಆಧುನಿಕ ಕನ್ನಡ ಆಯ್ದ ಕಥೆಗಳು ಸಂಕಲನ,** ಪ್ರಸಾರಾಂಗ, ಕವಿವಿ, ಧಾರವಾಡ,

೨೭. ನಾಯಕ ಹಾ.ಮಾ: ೨೦೧೧, **ವ್ಯಾಸರಾಯ ಬಲ್ಲಾಳ,**. ನವಕರ್ನಾಟಕ ಪ್ರಕಾಶನ, ಬೆಂಗಳೂರು.

೨೮. ನಾಯಕ.ಜಿ.ಎಚ್: **ಅನಕೃ–ತರಾಸು,** ತರಾಸು ಪ್ರತಿಷ್ಠಾನ, ಮೈಸೂರು.

೨೯. ನಾರಾಯಣಸ್ವಾಮಿ.ಜ.ಹೋ: ೨೦೦೯, **ಲೋಹಿಯಾ,** ಪ್ರಸಾರಾಂಗ ಕ.ರಾ.ಮು.ವಿ. ಮೈಸೂರು.

೩೦. ನಾರಾಯಣರಾವ್ ವಿ.ಎಸ್: ೧೯೭೮, **ಸ್ವಾತಂತ್ರ್ಯ ಸಂಗ್ರಾಮದಲ್ಲಿ ಶ್ರೀಸಾಮಾನ್ಯ** : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೧. ಪಾರ್ಥಸಾರಥಿ ಕೆ.ಎಸ್: ೨೦೦೧, **ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ**, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩೨. ಪ್ರಭುಶಂಕರ: ೨೦೦೭, **ಕೃತಿಶೀಲ**, ಕ.ವಿ.ವಿ.ಹಂಪಿ

೩೩. ಪ್ರೇಮಕುಮಾರ್: ೨೦೧೧, **ಜಲಿಯನ್ ವಾಲಾಬಾಗ್**, ಸ್ವಪ್ನ ಬುಕ್ ಹೌಸ್, ಬೆಂಗಳೂರ.

೩೪. ಬಸವರಾಜ ಕಟ್ಟೀಮನಿ: ೧೯೮೧, **ಕಾದಂಬರಿಕಾರನ ಕಥೆ** ಕನ್ನಡ ಸಾಹಿತ್ಯಪರಿಷತ್ತು ಬೆಂಗಳೂರು.

೩೫. ಭೈರಪ್ಪ.ಎಸ್.ಎಲ್: ೧೯೬೯, **ಕಥೆ ಮತ್ತು ಕಥಾವಸ್ತು**: ಸಾಹಿತ್ಯ ಭಂಡಾರ, ಬೆಂಗಳೂರು.

೩೬. ಬೋಳಂತಕೋಡಿ ಈಶ್ವರಭಟ್ಟ: (ಪ್ರ.ಸಂ), ೧೯೮೬, **ನಿರಂಜನ**, **ಕರ್ನಾಟಕ ಸಂಘ** ಪುತ್ತೂರು.

೩೭. ಮನವಾಡೆ.ವಿ.ಎಸ್: (ಸಂ) ೧೯೯೪, **ಅವಲೋಕನ-ದೇವದಾಸಿ:ದು.ನಿಂ.ಬೆಳಗಲಿ**, ವಿಮೋಚನ ಪ್ರಕಾಶನ, ಅಥಣಿ.

೩೮. ಮಿರ್ಜಿ ಅಣ್ಣಾರಾಯ: ೧೯೫೯, **ವಿಮರ್ಶೆ ಸ್ವರೂಪ**, ಸಾಹಿತ್ಯ ಭಂಡಾರ, ಹುಬ್ಬಳ್ಳಿ.

೩೯. ಮುಗಳಿ.ರಂ.ಶ್ರೀ: ೧೯೪೫, **ಕನ್ನಡ ಕಾದಂಬರಿಗಳು** (೧೯೨೦-೧೯೪೫), ವೆಸ್ಲಿ ಪ್ರೆಸ್ ಆಂಡ್ ಪಬ್ಲಿಷರ್ ಹೌಸ್, ಮೈಸೂರು.

೪೦. ಮುಗಳಿ.ರಂ.ಶ್ರೀ: ೧೯೭೬, **ಕನ್ನಡ ಸಾಹಿತ್ಯ ಇತಿಹಾಸ** : ಕಾವ್ಯಾಲಯ, ಮೈಸೂರು,

೪೧. ಮುಗಳಿ.ರಂ.ಶ್ರೀ: ೧೯೬೮, **ಕನ್ನಡ ಸಾಹಿತ್ಯ ಚರಿತ್ರೆ** : ಉಷಾ ಸಾಹಿತ್ಯ ಮಾಲೆ, ಮೈಸೂರು,

೪೨. ರಾಘವೇಂದ್ರರಾವ್.ಎಚ್.ಎಸ್: ೧೯೯೦, **ಪ್ರಗತಿಶೀಲತೆ** : ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೩. ರಾವ್ ಬಹುದ್ದೂರ: ೧೯೫೭. **ಗ್ರಾಮಾಯಣ**, ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ.

೪೪. ರಾಜಶೇಖರಪ್ಪ ಬಿ: ೨೦೦೧. **ಇತಿಹಾಸ ಕಥನ**, ಸಿಎಜಿ ಪಬ್ಲಿಕೇಷನ್, ಬೆಂಗಳೂರು.

೪೫. ರಾಜಪ್ಪ ದಳವಾಯಿ (ಸಂ): ೧೯೯೬, **ಕನ್ನಡ ಸಾಹಿತ್ಯ ಚರಿತ್ರೆ** . ಕದಿರು ಪ್ರಕಾಶನ, ಮೈಸೂರು..

೪೬. ಲಕ್ಕಪ್ಪಗೌಡ ಎಚ್.ಜೆ: ೨೦೧೧, **ಸಮಾಗಮ**, ಸಪ್ನ ಬುಕ್ ಹೌಸ್, ಬೆಂಗಳೂರ.

೪೭. ಲೀಲಾವತಿ ತೋರಣಗಟ್ಟಿ : ೧೯೯೨. **ಭೈರಪ್ಪನವರ ಕಾದಂಬರಿಗಳ ಸ್ವರೂಪ**. ವಿದ್ಯಾನಿಧಿ ಪ್ರಕಾಶನ. ಗದಗ.

೪೮. ವಿವೇಕ ರೈ. ಬಿ.ಎ: (ಸಂ). ೧೯೮೭, **ಕನ್ನಡ ಕಾದಂಬರಿಗಳ ಮೊದಲ ಹೆಜ್ಜೆಗಳು,** ಮಂಗಳೂರು ವಿ.ವಿ, ಮಂಗಳೂರು.

೪೯. ಶಂಕರ ಪಾಟೀಲ: (ಸಂ), ೧೯೭೪, **ಕನ್ನಡ ಕಾದಂಬರಿ ದರ್ಶನ,** ಕೃಷ್ಣಮೂರ್ತಿ ಪುರಾಣಿಕ ಸತ್ಕಾರ ಸಮಿತಿ, ಹುಬ್ಬಳ್ಳಿ.

೫೦. ಶಂಕರ ನಾರಾಯಣರಾವ್ ಎನ್.ಪಿ.: ೨೦೧೪; **ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು (ರಾಷ್ಟ್ರೀಯ ಚಳುವಳಿಯ ಸಮಗ್ರ ಪರಿಚಯ)** ನವಕರ್ನಾಟಕ ಪ್ರಕಾಶನ, ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೫೧. ಶಾಂತಿನಾಥ ದೇಸಾಯಿ: ೧೯೮೯, **ಕನ್ನಡ ಕಾದಂಬರಿ ನಡೆದು ಬಂದ ರೀತಿ,** ಕ.ವಿ.ವಿ. ಧಾರವಾಡ.

೫೨. ಶಾಂತಾ ಇಮ್ರಾಪೂರ ಮತ್ತು ಮೋಹನ ನಾಗಮ್ಮನವರು (ಪ್ರಸಂ): ೨೦೧೬, **ಕನ್ನಡ ದ್ವೀಪಗಳು,** ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ, ೨೦೧೬,

೫೩. ಶಿವರುದ್ರಪ್ಪ ಜಿ.ಎಸ್: (ಸಂ), ೧೯೯೦, **ಕನ್ನಡ ಸಾಹಿತ್ಯ ಸಂದರ್ಭ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು,

೫೪. ಶಿವರುದ್ರಪ್ಪ ಜಿ.ಎಸ್: ೧೯೮೮, **ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ,** ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ, ಬೆಂಗಳೂರ.

೫೫. ಶಿವರುದ್ರಪ್ಪ ಜಿ.ಎಸ್: ೧೯೭೪, **ಗತಿಬಿಂಬ :** ಸುರುಚಿ, ಮೈಸೂರು.

೫೬. ಶಿವರುದ್ರಪ್ಪ ಜಿ.ಎಸ್: ೧೯೮೨, **ಪ್ರತಿಕ್ರಿಯೆ,** ಜಿ.ಎಸ್. ಶಿವರುದ್ರಪ್ಪ, ಪುರೋಗಾಮಿ ಪ್ರಕಾಶನ, ಬೆಂಗಳೂರು.

೫೭. ಶಿವರುದ್ರಪ್ಪ ಜಿ.ಎಸ್: ೧೯೭೪, **ನವೋದಯ,** ಸುರುಚಿ, ಮೈಸೂರು,.

೫೮. ಶಿವರುದ್ರಪ್ಪ ಜಿ.ಎಸ್: ೧೯೮೧. **ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯ,** ಪ್ರಸಾರಾಂಗ, ಬೆಂಗಳೂರ ವಿಶ್ವವಿದ್ಯಾಲಯ, ಬೆಂಗಳೂರು,

೫೯. ಶಿವರುದ್ರಪ್ಪ ಜಿ.ಎಸ್: ೧೯೮೫, **ವಿಮರ್ಶೆಯ ಪೂರ್ವಪಶ್ಚಿಮ,** ತಾ.ವೆಂ. ಸ್ಮಾರಕ ಗ್ರಂಥ, ಮೈಸೂರು.

೬೦. ಶಿವರುದ್ರಪ್ಪ ಜಿ.ಎಸ್. (ಸಂ): ೧೯೮೮, **ರಾಷ್ಟ್ರೀಯತೆ ಮತ್ತು ಆಧುನಿಕ ಕನ್ನಡ ಸಾಹಿತ್ಯ,** ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು.

೬೧. ಶಿವರುದ್ರಪ್ಪ ಜಿ.ಎಸ್.: (ಸಂ) ೧೯೮೮, **ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ,** ಪ್ರಸಾರಾಂಗ ಬೆಂಗಳೂರು ವಿವಿ ಬೆಂಗಳೂರು.

೬೨. ಶಿವರುದ್ರಪ್ಪ ಜಿ.ಎಸ್. (ಸಂ): ೧೯೮೮; **ಸಾಹಿತ್ಯ ಮತ್ತು ಸಾಮಾಜಿಕಪ್ರಜ್ಞೆ,** ಪ್ರಸಾರಾಂಗ.

ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು.

೬೩. ಶ್ರೀಕಂಠಯ್ಯ ಬಿ.ಂ.: ೧೯೮೫; **ಕನ್ನಡ ಮಾತು ತಲೆ ಎತ್ತುವ ಬಗೆ,** ಕರ್ನಾಟಕ ವಿದ್ಯಾವರ್ಧಕ ಸಂಘ ಧಾರವಾಡ.

೬೪. ಶೇಷಗಿರಿರಾವ್ ಎಲ್. ಎಸ್.: ೨೦೦೬; **ಹೊಸಗನ್ನಡ ಸಾಹಿತ್ಯ ಚರಿತ್ರೆ,** ಅಂಕಿತ ಪ್ರಕಾಶನ, ಬಸವನ ಗುಡಿ, ಬೆಂಗಳೂರು.

೬೫. .ಶ್ರೀನಿವಾಸ ಹಾವನೂರು: ೧೯೭೪, **ಹೊಸಗನ್ನಡದ ಅರುಣೋದಯ,** ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು..

೬೬. .ಸುರೇಶ ಭೀಮರಾವ್ ಪಾಟೀಲ, ೧೯೯೫, **ಕನ್ನಡ ಕಾದಂಬರಿಗಳಲ್ಲಿ ರಾಜಕೀಯ ವಸ್ತು ವಿನ್ಯಾಸ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬೭. ಸಿದ್ಧಣ್ಣ ಉತ್ನಾಳ: ೧೯೯೦, **ಕನ್ನಡ ಕಾದಂಬರಿ ಪ್ರಾದೇಶಿಕತೆ,** ಅನುಪಮ ಪ್ರಕಾಶನ, ಅಥಣಿ

೬೮. ಸೀಮಂತಿನಿ ನಿರಂಜನ: ೧೯೮೮೪, **ಬುದ್ಧಿಭಾವ ಬದುಕು,** ಸ್ಪಂದನ, ಬೆಂಗಳೂರು.

೬೯. ಸೂರ್ಯನಾಥ ಕಾಮತ್: ೧೯೮೦, **ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು,** ಗೀತಾ ಬುಕ್ ಹೌಸ್, ಮೈಸೂರು.

೭೦. ಹಂಪ. ನಾಗರಾಜಯ್ಯ: ೧೯೮೦, **ಪ್ರೇಮಚಂದರ ವಿಚಾರ ಸಂಕಿರಣ,** ಕನ್ನಡ ಸಾಹಿತ್ಯ ಬೆಂಗಳೂರು.

## ಅನುಬಂಧ–೩

## ಸಂಶೋಧನಾ ಪ್ರಬಂಧಗಳು


೧. ಜ್ಯೋತಿ ರೈ: **೨೦೧೬, ಕನ್ನಡ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಚಳುವಳಿ,** ಕನ್ನಡ ವಿವಿ ಹಂಪಿ

೨. ನೀಲಮ್ಮ: ೨೦೦೦, **ಬಸವರಾಜ ಕಟ್ಟೀಮನಿಯವರ ಕೃತಿಗಳು ಒಂದು ಸಾಮಾಜಿಕ, ಸಾಂಸ್ಕೃತಿಕ ಅಧ್ಯಯನ,** ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೩. ಭಜಂತ್ರಿ.ವೈ.ಎಂ: ೨೦೦೯, **ದು.ನಿಂ.ಬೆಳಗಲಿಯವರ ಕಾದಂಬರಿಗಳು,** ಕಿಕ್ಕೇರಿ ಪ್ರಕಾಶನ ಬೆಂಗಳೂರು.

೩. ಮೂಡಲಗಿರಿಯಯ್ಯ: ೧೯೯೮, **ಕನ್ನಡ ಕಾದಂಬರಿಗಳಲ್ಲಿ ಗಾಂಧಿವಾದದ ಪ್ರೇರಣೆ,** ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು.

೪. ಮೋಹನ್ ಕುಂಟಾರ್: ೧೯೯೪, **ಇನಾಂದಾರರ ಬದುಕು ಬರಹ,** ಉಕ್ಕಿನಡ್ಕ ಕಾಸರಗೋಡು, ಕೇರಳ.

೫. ಸಾದರ.ಬಿ.ಸಿ: ೨೦೦೦, ಬಸ**ವರಾಜ ಕಟ್ಟೀಮನಿ ಕಾದಂಬರಿಗಳು,** ವೀರಶೈವ ಅಧ್ಯಯನ ಅಕಾಡೆಮಿ, ನಾಗನೂರು ರುದ್ರಾಕ್ಷಿಮಠ, ಬೆಳಗಾವಿ.

## ಅನುಬಂಧ–೪

## ಅಧ್ಯಯನ ಪತ್ರಿಕೆಗಳು


೧. ಅಶ್ವತ್ಥ ನಾರಾಯಣ, (ಲೇ): ೨೦೧೩, **ಕರ್ನಾಟಕದಲ್ಲಿ ಸ್ವಾತಂತ್ರ್ಯ ಹೋರಾಟ,** ಸಿರಿಗನ್ನಡ **(ಆಳ್ವಾಸ್ ನುಡಿಸಿರಿ(ಸಂ),** ಮೋಹನ ಆಳ್ವ ನೆನಪಿನ ಸಂಪುಟ, ಆಳ್ವಾಸ್ ಕಾಲೇಜು ಮೂಡುಬಿದ್ರೆ.

೨. ಸರ್ದಾರ್ ವೆಂಕಟರಮಣಯ್ಯ (ಲೇ), ೨೦೧೪, **ಸ್ವಾತಂತ್ರ್ಯ ಹೋರಾಟವೂ, ಸ್ತ್ರೀ ಸ್ವಾತಂತ್ರ್ಯವೂ** (ಕಸ್ತೂರಿ.ಸಂ.ರಂಗನಾಥರಾವ್, ಸಂ.೫೮, ಸಂ.೮) ಲೋಕ ಶಿಕ್ಷಣ ಟ್ರಸ್ಟ್ ಬೆಂಗಳೂರು.

## ಅನುಬಂಧ–೫

## ನಿಘಂಟುಗಳು ಮತ್ತು ವಿಶ್ವಕೋಶಗಳು


೧ .ಕಿಟೆಲ್ ಎಫ್. (ರೆ), ೧೮೯೪. **A.Kannada EnglishDictionary** ಬಾಸೆಲ್ ಮಿಶನ್ ಬುಕ್ ಆಂಡ್ಯ್ ಟ್ರಾಕ್ ಡಿಪೋ ಮಂಗಳೂರು,

೨ .ವೆಂಕಟನಾರಾಯಣರಾವ್ ಬಿ. ಮತ್ತು ಶ್ರೀನಿವಾಸ ಮೂರ್ತಿ ಎಂ.ಆರ್. (ಸಂ); ೧೯೬೫. **ಇಂಗ್ಲೀಷ್–ಕನ್ನಡ–ನಿಘಂಟು**, ಮೈಸೂರು ವಿಶ್ವ ವಿದ್ಯಾಲಯ, ಮೈಸೂರು.

೩. **ಕನ್ನಡ ವಿಷಯ ವಿಶ್ವಕೋಶ:** ಸಂ.೧೩ , ಕನ್ನಡ ಅಧ್ಯಯನ ಸಂಸ್ಥೆ, ಮೈ. ವಿ.ವಿ. ಮೈಸೂರು,

೪. ನಾಯಕ ಹಾ.ಮಾ. (ಸಂ); ೧೯೮೦. **ಕನ್ನಡ ವಿಶ್ವಕೋಶ,** ಕನ್ನಡ ಅಧ್ಯಯನ ಸಂಸ್ಥೆ, ವಿಶ್ವವಿದ್ಯಾಲಯ, ಮೈಸೂರು.

